ಮಿಂಚಿನ ಬಳ್ಳಿಯ ಬಿಡಿಕುಡಿ. ೧.

# ಸೆರೆಮನೆಯ-ಶೂರ

( ೧೯೪೨ ರ ವೀರಶ್ರೀ ಕ್ರಾಂತಿಕಾರಕ ವಾಙ್ಮಯ )



ಲೇಖಕರು—

ವಾಸುದೇವಾಚಾರ್ಯ ಬುರ್ಲಿ

ಬಾಗಿಲುಕೋಟೆ.

ಚಾಲುಕ್ಯ ವಿಕ್ರಮ ವರ್ಷ ೮೭೧

ಭಾರತ

ಸ್ವಾತಂತ್ರ್ಯ ದಿನ

೧೫-೮-೪೭.

ಬೆಲೆ-

ಎರಡು ರೂಪಾಯಿ.

ಎಂಟು ಆಣೆ

ಪ್ರಕಾಶಕರು—
ಬಿ. ಜಿ. ಅವಧಾನಿ
ಮಿಂಚಿನ ಬಳ್ಳಿ ಚಾವಡಿ
ಧಾರವಾಡ.

ಮಿಂಚಿನ ಬಳ್ಳಿಯ ೧೦ನೇ ವರ್ಷದ ೧ನೇ ಕುಡಿ.

# ೧೮೫೭.

ಅರ್ಥಾತ್

# ಬಂಡಾಯದ ಇತಿಹಾಸ

ಬರೆದವರು:-
ಶ್ರೀ. ಕೆ. ಜಿ. ಜೋಶಿ, ಬಿ. ಎ. ಬಿ. ಟಿ.

ವಿಜಯ ದಶಮಿಗೆ ಪ್ರಕಟವಾಗುವದು.

ಮುದ್ರಕರು—
ಕೆರೂರ ಗುಂಡೂರಾಯರು
ಚಂದ್ರಿಕಾ ಸ್ಟೀಮ ಪ್ರೆಸ್, ಬಾಗಿಲುಕೋಟೆ.

ಭಾರತದ ಸ್ವಾತಂತ್ರ್ಯ ದಿನ ಪ್ರಕಟವಾದದು.

# ಪ್ರಕಾಶಕರ ಅರಿಕೆ.

ನಾವು ಮೊದಲೇ ಪ್ರಸಿದ್ಧಿಸಿದಂತೆ '**ಸೆರೆಮನೆಯಶೂರ**' ಎಂಬ ಪುಸ್ತಕವನ್ನು ಈಸ್ವಾತಂತ್ರ್ಯ ದಿನದಲ್ಲಿ ಕನ್ನಡಿಗರಿಗೆ ಅರ್ಪಿಸುವ ಯೋಗ ಬಂದದ್ದಕ್ಕಾಗಿ ಆನಂದವೆನಿಸುತ್ತದೆ. ಇದು ಮಿಂಚಿನಬಳ್ಳಿಯ ಸ್ವಾತಂತ್ರ್ಯ ದಿನದ ಅಳಿಲ ಸೇವೆ.

ಬಳ್ಳಿಯಲ್ಲಿ '**ಸೆರೆಮನೆಯಶೂರ**' ಬರೆದು ಕ್ರಾಂತಿಯ ಸಾಹಿತ್ಯವನ್ನು ಮೊದಲು ಮಾಡಿದ್ದಕ್ಕಾಗಿ **ಶ್ರೀ ಬುರ್ಲಿ ವಾಸುದೇವಾಚಾರ್ಯರಿಗೆ** ನಾವು ಋಣಿಯಾಗಿದ್ದೇವೆ.

೧೯೪೨ ರ ಮಹಾಕ್ರಾಂತಿಯಲ್ಲಿ ತಮ್ಮನ್ನು ಹಿಡಿದ ತಮಗೆ ಬಂದ ಅನುಭವಗಳ ಸಾಮಾಜಿಕ ಚಿತ್ರವನ್ನು ಚಿತ್ರಿಸಿದ ಒಂದು ಪುಸ್ತಕವಿದು. ಕನ್ನಡಿಗರು ಇದಕ್ಕೆ ಆಶ್ರಯವನ್ನಿತ್ತು ಮುಂದಿನ ಕ್ರಾಂತಿಕಾರಕ ಗ್ರಂಥಗಳ ಪ್ರಕಾಶನಕ್ಕೆ ಸಹಾಯವನ್ನು ನೀಡುವಿರೆಂದು ನಂಬಿರುವ,

**ಸ್ವಾತಂತ್ರದಿನ**
**೧೫ ನೇ ಅಗಷ್ಟ ೧೯೪೭**

ತಮ್ಮ ಸೇವಕ
ಬುರ್ಲಿ ಬಿಂದುಮಾಧವ

# ಮುನ್ನುಡಿ.

ಸಂಸ್ಮರಣೀಯ ೧೯೪೨ನೇ ಅಗಸ್ಟ ಕ್ರಾಂತಿಯಲ್ಲಿ ಕೋಟ್ಯಾಂತರ ತರುಣರು, ಧುರೀಣರ ಆದೇಶಕ್ಕೆ ತಲೆಬಾಗಿ ಕ್ರಾಂತಿಕಹಳೆಯನ್ನು ಊದಿದರು. ರಾಷ್ಟ್ರಪ್ರೇಮದಿಂದ ಕಾರ್ಯಪ್ರವೃತ್ತರಾಗಿ ದುಡಿದರು. ಮಡಿದರು ಮಡಿಯದೇ ಮಡಿಯುವುದರಲ್ಲಿರುವಾಗಲೇ ಸೆರೆಮನೆಗಟ್ಟಿದರು ಬಿಡುಗಡೆಯೂ ಆಯಿತು. ಸೆರೆಮನೆಯ ಅನುಭವ ವೈಭವಗಳನ್ನು ಕೇಳಿದ ಗೆಳೆಯರಿಗೆ ಹೇಳಿದೆ. ಸೆರೆಮನೆಯ ವಿಷಯವನ್ನೇ ಪ್ರಾಧಾನ್ಯವಾಗಿರಿಸಿ ಕಾದಂಬರಿ ಬರೆಯಲು ಆಗ್ರಹ ಪಡಿಸಿದರು. ಬರೆದೆ.

ಕಥಾನಕವು ಕಾಲ್ಪನಿಕವಲ್ಲ. ಕಾದಂಬರಿಯಲ್ಲಿ ಬರುವ ವ್ಯಕ್ತಿಗಳೆಲ್ಲ ಸೆರೆಮನೆಯ ಗೆಳೆಯರು. ರಾಷ್ಟ್ರಪ್ರೇಮಿಗಳು. ಅತಿಶಯೋಕ್ತಿ ಬಣ್ಣನೆಗಳಿಗೆ ಆಸ್ಪದವಿಲ್ಲ. ನಡೆದುದನ್ನು ಕೇಳಿದುದನ್ನು ಶಬ್ದಗಳಿಂದ ಜೋಡಿಸಿದವ ನಾನು. ಕಾದಂಬರಿಯ ಪ್ರತಿ ವ್ಯಕ್ತಿಯೂ ಸ್ವಾತಂತ್ರಪ್ರಾಪ್ತಿಗೆ ಹೋರಾಡಿದೆ. ಅವರ ತ್ಯಾಗ, ಸೇವೆಗಳ ಫಲವೆಂದೇ ಸ್ವತಂತ್ರಭಾರತವು ಉದಯಿಸಿದೆ.

ಇಂದಿನವರಿಗೆ ಈ ಕಾದಂಬರಿ ಸಾಮಾಜಿಕ, ಮುಂದಿನವರಿಗೆ ಇದುವೇ ಐತಿಹಾಸಿಕ 'ನಮ್ಮ ಪೂರ್ವಜರು, ಬ್ರಿಟಿಶರೊಡನೆ ಸ್ವಾತಂತ್ರಸಂಪಾದನೆಗೆ ಹೋರಾಡಿದ ವೀರಶ್ರೀ ಚರಿತೆ ಇದು' ಎಂದು ಮುಂದಿನವರು ಎನ್ನದಿರರು. ಹೋರಾಟದಲ್ಲಿಯ ಒಂದು ಕಣದಭಾಗವೂ ಕಾದಂಬರಿಯಲ್ಲಿ ಇಲ್ಲ. ನಾಡಿಗರಿಗೆ ಅಲ್ಪ ಸೇವೆಎಂದು ಒಪ್ಪಿಸಿರುವೆ. ೬೦೦ ಪುಟಕ್ಕೇರದು ಬರೆದುದನ್ನು ಸಂಪಾದಕರ ಆಗ್ರಹಕ್ಕೆ ಕುಗ್ಗಿಸಲೇಬೇಕಾಯಿತು. ಭಿನ್ನರುಚಿರ್ಲೋಕಾಃ' ಎಂದಿಲ್ಲವೇ ? ಬರೆದಭಾಗ ನನಗೆ ಬೇಕಿತ್ತು. ಸಂಪಾದಕರು ಬೇಡವೆಂದರು. ತಮ್ಮ ಬಳ್ಳಿಯಲ್ಲಿ ಪ್ರಕಟಿಸಿದ್ದಕ್ಕೆ ಅನಂತಾನಂದ ವಂದನೆಗಳನ್ನು ಸಂಪಾದಕರಿಗೆ ಸಲ್ಲಿಸದೇ ಇರಲಾರೆ.

ಕಾದಂಬರಿ ಬರೆಯಲು ಸ್ಫೂರ್ತಿಯನ್ನಿತ್ತು ಬರೆಯಿಸಿ, ಗ್ರಂಥರೂಪದಲ್ಲಿ ಪ್ರಕಟವಾಗುವವರೆಗೂ ಸಕಲ ವಿಧದಿಂದ ಸಹಾಯ ಸಹಕಾರನೀಡಿದ ಶ್ರೀ. ದೇಶಪಾಂಡೆ ಗುರುರಾಯರಿಗೆ ಋಣಿಯಾಗಿರುವೆ.

ಭಾರತ ಸ್ವಾತಂತ್ರದಿನ
ಅಗಸ್ಟ ೧೫
ಬಾಗಲಕೋಟೆ.

ಲೇಖಕ.
ಬುರ್ಲಿ ವಾಸುದೇವಾಚಾರ್ಯ.

# ಬಂಧನ

" ಗಂಗೂ........ ಗಂಗೂತಾಯೀ........" ವಿಕ್ರಮನು ಒಳಬಾಗಿಲಲ್ಲಿ ನಿಂತು ಮೆಲ್ಲನೆ ಕೂಗಿದ. ಹೂವಿನ ಬುಟ್ಟಿಯೊಡನೆ ಹಿತ್ತಲಿನಿಂದ ಓಡಿ ಬಂದಳು. ಹೂವುಗಳು ಚೆಲ್ಲುತ್ತಲಿರುವುದರ ಅರಿವು ಅವಳಿಗಿರಲಿಲ್ಲ. ವಿಕ್ರಮನ ಎದುರು ನಿಂತಳು.

" ಏನ್ಮಾಡ್ತೀ ಈಗ ? " ಹಗುರಾಗಿ ಕೇಳಿದ.

" ದೇವರ ಪೂಜೆಗೆ ಹೂ, ತಗೀತೀನಿ "

" ನಂದೊಂದು ಕೆಲಸದ ಗಂಗೂ ! ...." ಯಾಚಿಸಿದ.

" ಏನು? ಏನ್ಹೇಳು?''

" ಒಂದ್ವಾಟ್ಲು ಹಾಕ್ಕೇಳು "

" ಪಾರ್ಟುಗೀರ್ಟ ಹುಚ್ಚುಚ್ಚಾರಾ ಬ್ಯಾಡ್ನೋಡಪಾ. ಆ ಕೆಲಸಾ ಏನಾರೆ ಇದ್ದ್ರ ಹೇಳು, ಇದ್ದ ಕೆಲಸಾ ಬಿಟ್ಟು ಮಾಡ್ತೀನಿ. "

" ಅದೇ ಕೆಲಸಾ.... ...."

" ಈಗಿಂದೀಗ ಮಾಡ್ತೀನಿ. ಏನ್ಹೇಳು ? "

" ನೀ ಬರೋಬರಿ ಮಾಡ್ಲಿಲ್ಲಾ ಅಂದ್ರs ಎಲ್ಲಾ ಕೆಲಸ ಕೆಟ್ಟು ಧೂಳಾಗಿ ಹೋಗ್ತಾವ"

" ಲಗೂ ಹೇಳು ನೋಡ್ಯಾರ ನೋಡು, ಹ್ಯಾಂಗ್ಮಾಡ್ತಿನೀ"

ಗಂಗೂಗೆ ಸಂಗತಿ ತಿಳುಹಿದ. ಅವಳಿಂದ ಜರುಗ ಬೇಕಾದು ದುನ್ನೂ ಹೇಳಿದ. ಸಂಭಾಷಣೆಯನ್ನೂ, ಸನ್ನಿವೇಶವನ್ನೂ ವಿಶದಗೊಳಿಸಿದ. ಗಂಗೂ ಕೊಂಚ ಬೆದರಿದಳು. ತನ್ನಿಂದ — ಕೆಲಸವಾಗಲು ಸಾಧ್ಯವೇ? ಎಂದಳು. ನಟನೆಯ ಜೊತೆ ಕಾರ್ಯತತ್ಪರ ನೈಪುಣ್ಯತೆ ತನ್ನಲ್ಲಿ ಇದೆ ಎಂದು ಬಗೆದಳು. **'ವಂದೇ ಮಾತರಂ'** ಎಂದು ವಂದಿಸಿದಳು. ವಿಕ್ರಮನ ಆಶೀರ್ವಾದ ಪಡೆದು ಲಗುಬಗೆಯಿಂದ ಹೊರಹೊರಟಳು.

ವಿಕ್ರಮನ ಮನೆ ಪೋಲಿಸರ ಕಾವಲು ಮನ್ನಣೆ ಪಡೆದಿದೆ. ಬಾಗಿಲದ ಇಕ್ಕೆಲಗಳಲ್ಲಿ ಬಂದೂಕನ್ನು ಹೆಗಲಿಗಿರಿಸಿ ದರ್ಪದಿಂದ ನಾಲ್ಕಾರು ಪೋಲೀಸರು ನಿಂತಿದ್ದಾರೆ. ವಿಕ್ರಮನ ಮನೆಯ ಎದುರೇ ಬಾವಿ ಇದೆ. ಐವತ್ತು ಜನ ಕೂಡ್ರಬಹುದಾದ ವಿಶಾಲಕಟ್ಟೆಯೂ ಬಾವಿಗಿದೆ. ಪೋಲಿಸ ಸಬ್ ಇನ್ಸಸ್ಪೆಕ್ಟರ, ಆಸಿಸ್ಟೆಂಟರು ಕಟ್ಟೆಯ ಮೇಲೆ ಕುಳಿತು, ವಿಕ್ರಮನ ದಾರಿ ಕಾಯುತ್ತಲಿದ್ದಾರೆ. ಬಿಚ್ಚುಗತ್ತಿಯ ನಾಲ್ವರು ಮಾಳಿಗೆಯಮೇಲೆ ತಿರುಗಿ ನೋಡುತ್ತಲಿರುವರು. ಬೀದಿ ಚಿಕ್ಕದು. ಹೆದರಿ ಜನ ಓಡಾಡದೇ ಮನೆಯಲ್ಲಿ ಕುಳಿತಂತಿದೆ. ಬೀದಿಯಲ್ಲಿ ಒಬ್ಬನನ್ನೂ ಬಿಡದಿರಲು ಫೌಜದಾರನ ಕಟ್ಟಾಜ್ಞೆ! ಬೀದಿಯ ಎರಡೂ ಬದಿಗೂ ಸುಸಜ್ಜಿತ ಸಿಪಾಯಿಗಳ ಕಾವಲು.

"ನಿಂದ್ರಬೇ! ಅಲಾ ಇವನs ದರಕಾರನ ಇಲ್ಲೇನು! ನಿಂದ್ರು. " ಬೀದಿಯ ಕಾವಲು ಸಿಪಾಯಿ ಕೂಗಿದ. ಗಂಗೂ ಲೆಕ್ಕಿಸದೆ ವಿಕ್ರಮನ

ಮನೆಯ ಬಾಕಿಲದವರೆಗೂ ಬಂದಳು. ಸಬ್ ಇನ್ಸ್‌ಪೆಕ್ಟರರು ವೇಗವಾಗಿ ಅವಳ ಕಡೆಗೆ ಬಂದು ದಿಟ್ಟಿಸಿದರು. ಕಾವಲಿನವರೆಲ್ಲರೂ ನೆರೆದರು. ಗಂಗೂ ಬೆದರಿದಂತಿತ್ತು. ಫೌಜದಾರರು ಅವಳ ರೂಪ ಲಾವಣ್ಯಗಳಿಗೆ ಮುಗ್ಧರಾದರೇನೋ! ಅವಳ ತುಂಬಿದೆದೆ,ಚೆಂದುಟಿ,ಮೈಮಾಟದ ಸವಿಯನ್ನು ಕಣ್ಣಿಂದ ಹೀರುತ್ತಲಿದ್ದರು.

"ಪರವಾನಗೀ ಕೊಡ್ರಿ,ಸಾಹೇಬ್ರ. ಒಳಗೆ ಹೋಗಿ ಬರ‍್ತಿನೀ ?" ತುಟಿಯನ್ನು ಅಲುಗಿಸಿ ಕಿರುನಗೆ ನೋಟ ತೂರಿ ಕೇಳಿದಳು. ಗಾಳಿಗೆ ತೂರಿ ಕೆನ್ನೆಯನ್ನು ಶೋಭೆಗೊಳಿಸುವ ಮುಂಗುರುಳನ್ನು ಬಳಕುತ್ತ ಸರಿಪಡಿಸಿದಳು. ಸಾಹೇಬರು ಮೀಸೆಗೆ ಕೈಇಕ್ಕಿದರು.

"ಪರವಾನ್ಗೀ ಕೊಡ್ರೀ"....  ....

"ಯಾಕ್ರೀ, ?" ಸಾಹೇಬರೆಂದರು.

"ಅಕ್ಕೀ ಕಡಾ ಒಯ್ದಾರ, ಹಬ್ಬ ಈವತ್ತು ಇಸಗೊಂಡ್ಬರ‍್ತೀನಿ"

"ಇನ್ನೊಂತಾಸು ನಿಂತ್ಬರ‍್ರಿ."

"ನೋಡ್ರಿ ಸಾಹೇಬ್ರs ತಿಳಿದವರಿದ್ದೀರಿ." ತುಂಬಿದೆದೆಯ ಸೌರಭತೆ ಬೀರಿ ಬೇಡಿದಳು. ಹುಬ್ಬನ್ನು ತೀಡಿ ಕುಣಿಸಿದಳು. ಸಾಹೇಬರು ಅವಳ ನೋಟದಲ್ಲಿ ಲೀನವಾದರು.

"ನಾ ಹೆಣ್ಮಗಳು ಏನ್ಮಾಡ್ತೀನಿ ?!....  ...."

"ಹೂಂ, ಹೋಗಿ ಗಡಾಬರ‍್ರಿ" ಮಿಂಚಿನಂತೆ ಮನೆ ಒಳಹೊಕ್ಕಳು. ಪೋಲಿಸರು ಒಬ್ಬರನ್ನೊಬ್ಬರು ನೋಡಿದರು. ನೋಟದ ಅರ್ಥವನ್ನು ಸುಲಭವಾಗಿ ತಿಳಿದರು. ಸಾಹೇಬರು ಅವಳ ಬರುವಿಕೆಯನ್ನೇ ಎದುರು ನೋಡುತ್ತಲಿದ್ದರು

ಗಂಗೂ ನೇರವಾಗಿ ಕೊಠಡಿಯನ್ನು ಹೊಕ್ಕಳು. ವಿಕ್ರಮನ ಹಾಸಿಗೆ ಉರುಳಿಸಿ 'ದಿನಚರಿ' ಉಡಿಯಲ್ಲಿಟ್ಟುಕೊಂಡಳು. ಸೀರೆ ಸರಿಪಡಿಸಿಕೊಂಡಳು. ಬಿಗಿದು ಕಚ್ಚೆಹಾಕಿದಳು. ವಿಕ್ರಮನ ತಾಯಿ ಅಳುದನಿಯಿಂದ ಕೊಠಡಿಯ ಬಾಗಿಲಲ್ಲಿ ನಿಂತು ಕೇಳಿದಳು.

" ಏನss ಗಂಗೂ ? " ಮೆಲುದನಿಯಲ್ಲಿ ಎಲ್ಲವನ್ನೂ ಕೇಳಿಸಿದಳು. ಅವಸರದಿಂದ ಬೇರೊಂದು ಕೋಣೆಗೆ ಹೋದಳು. ವಿಕ್ರಮನ ತಂಗಿ ಬಾಣಂತಿ ಮೈ ಕಾಯಿಸುತ್ತ ಕುಳಿತಿದ್ದಳು. ಗಂಗೂನನ್ನು ಕಂಡು ಬರ ಮಾಡಿಕೊಂಡಳು. ವಿಕ್ರಮನ ಹೆಂಡತಿಯೂ ಬಂದು ಆಲೋಚನೆಯಲ್ಲಿ ಬೆರೆತಳು. ಗುಣುಗುಟ್ಟಿದರು. ನಿರ್ಧಾರಕ್ಕೆ ಬಂದರು. ಕೆಲವು ಕಾಗದ ಗಳನ್ನು ಸುಟ್ಟರು. ಸುತ್ತಲೂ ಬೆಳಕಾಯಿತು ವಿಕ್ರಮನ ಹೆಂಡತಿ ಗಂಗೂಗೆ ಹೇಳಿದಳು. " ಏನೂ ಇಲ್ಲಾ ಇನ್ನ."

" ಅವರಿಗೆ ಕೇಳೂ ಹಾಂಗೇ ಬೈಬೇಕು.... ...."

ಪಡಸಾಲೆಗೆ ಬಂದು ಗದ್ದರಿಸಿದಳು ವಿಕ್ರಮನ ಹೆಂಡತಿ, "ಹೆಚ್ಚಾಕಿ ಕಾಡಬ್ಯಾಡಾ. ಮುಂದೀ ಕಿವ್ಮೃತ್ತು ಇದ್ದ್ರ ಚಿಂತಿಲ್ಲಾ" ಎಂದಳು.

" ಇಷ್ಟ ಕಿವ್ಮೃತ್ತಿದ್ದಾಕಿ ತಂದು ಕೊಡಬೇಕೂ "

" ಅಂತರ್ಕಿಲ್ದೇ ಬಂದಾಳ. ಓಡಿ ಹೋಗ್ತಿದ್ವೇನು ಓಡಿ "

" ಕಡಾ ತರೂದು ತಂವೂ ಎಷ್ಟು ಸೊಕ್ಕss ನಿಂದೂ "

" ಯಾರೇನೂ ಕಟಿಗೊಂಡು ಕೂತಿರುದಿಲ್ಲಾ. ಎಲ್ಲಾರಿಗೂ ಅನುವೂ, ಆಪತ್ತೂ ಇರೂವೇ.... ...."

" ಸೊಕ್ಕಿನ ಮಾತ್ಯಾಕss ಹಂಗರs, ಮುಂದೀ ಬಾಗಲ್ದಾಗ ನಿಂತಃ ಬೇಡೂದು ತಪ್ಪೊಪುಲ್ಲಾ .... ...."

" ನೀನೂ ಹತ್ತ ಸರ್ತೀ ಬರ್ತೀದಿ, ಆಗ ಹೇಳ್ತೀನಿ "

" ಬಂದಾಗ ಹೇಳಿಯಂತ " ಅಕ್ಕಿ ತುಂಬಿದ ಪಾತ್ರೆ ಬಗಲಲ್ಲಿರಿಸಿ 'ಇವಕ್ಕss ಎಂಬೂ ಕೊಡಬಾರ್ದು. ಒಣಾ ದಿಮಾಕೇ ಭಾರ,' ಎನ್ನುತ್ತ ಹೊರಬಂದಳು. 'ಕೇಳಿದ್ರ್ಯಾ ಸಾಹೇಬ್ರ ಎಷ್ಟು ಸೊಕ್ಕು ನೋಡ್ರಿ?, ಎಂದು ಮುಂದಕ್ಕೆ ನಡೆದಳು. ಸಾಹೇಬರೂ, ಅವನ ಶಿಷ್ಯರೂ ಅವಳ ಚಲುವಿಕೆಯ ನಿರ್ಗಮನ ನಿರೀಕ್ಷಿಸುತ್ತಲಿದ್ದರು. ಅವಳು ಹೋದುದು ಕಂಡರೂ ಹೋದದಾರಿಯತ್ತ ದೃಷ್ಟಿ ಹರಿಯುತ್ತಲಿದ್ದಿತು. ಏನನ್ನು ಕೊಂಡೊಯ್ದಳೋ ಎಂಬ ಸಂಶಯ ಜನಿಸಿದ್ದಿತು. ಆದರೇನು ?

" ಫರಾರೀ ಆದ್ಹಾಂಗ ಕಾಣ್ತದ " ಸಾಹೇಬರೆಂದರು.

" ಮುಂದೇನ್ಮಾಡುದ್ರೀ?".... ....ಅಸಿಸ್ಟೆಂಟ ಸಾಹೇಬರು ಬೇಸರದ ದನಿಎತ್ತಿದರು.

" ಬಂದೇ ಬರ್ತ್ತಾನ ದಸರೇ ಹಬ್ಬಾ....ಬಿಟ್ಟ್ವಾನs ಒಳಗೇನಡೀರಿ. ಏ ಅಬ್ದುಲ್, ನಾಕ್ಮಂದಿನ್ನ ಕರಕೊಂಡು ಅಟ್ಲಾಗಿನ್ಪಸ್ತೇಕ್ಕ ಹೋಗಿ ನೋಡು. ಏ ಬಿ. ಜೇ. ಸೀ ಇತ್ಲಾಗ ಹೋಗೊ. ಎಲ್ಲೆಲ್ಲೆ ಅವನ ಕೂಡೂ ಮೆಟ್ಟವs ತಪಾಸ ಮಾಡ್ರಿ." ಗಂಭೀರ ಧ್ವನಿಯಿಂದ ಅಪ್ಪಣೆ ವಿಧಿಸಿದರು. ಸಿಪಾಯಿಗಳ ತಂಡ ಚದುರಿತು. ಮಾಳಿಗೆ ಏರಿದ ಸಿಪಾಯಿಗಳು ಮೈ ತೂಗುತ್ತ ಬಿಸಿಲು ಕಾಸುತ್ತಲಿದ್ದರು ಸಾಹೇಬರು ಪರಿವಾರದೊಂದಿಗೆ ವಿಕ್ರಮನ ಮನೆ ನುಗ್ಗಿದರು. ಗೌಡರು ' ಅವ್ವಾ, ಅವರs ಅವ್ವಾ ಅವರs ಸಾಹೇಬ್ರು ಬಂದಾರ ಒಂದು ಕಂಬ್ಳಿ ಹಾಸ್ರೀ, ಎಂದು ಕೂಗಿದರು. ತಾವೇ ಮನೆಯ ಯಜಮಾನರಾಗಿ ಸ್ವಾಗತವನ್ನಿತ್ತರು. ಬೂಟಿನ ಖಡಾಟ ಪಡಸಾಲೆಯನ್ನು ಆವರಿಸಿತು. ಒಳಗಿನಿಂದ ಯಾರೂ ಬಾರದ್ದಕ್ಕೆ ಗೌಡರೇ ಮಿಡುಕಿದರು. ಮತ್ತೆ ಕೂಗಿ ಕರೆದರು. ಕೊಠಡಿಯಿಂದ ವಿಕ್ರಮನ ತಂಗಿ ರೊಚ್ಚಿನಿಂದ ಬಂದಳು. ಕೂಸು ಚೀರುತ್ತಲಿದ್ದಿತು. ಕೂಸಿನ ಮೈದಡವುತ್ತ ಕೇಳಿದಳು.

" ಯಾರ್ನೀವು ? "

" ಕಾಣೂದಿಲ್ಲೇನು?" ಸಾಹೇಬರು ಕೈಗುಣಿ ಬೂಟಿಗೆ ಬಡಿಯುತ್ತ ಉತ್ತರ ನೀಡಿದರು.

" ಹೊರಗೆ ಹೋಗ್ತಿರೋ ಏನಂತೀರಿ? ಗಂಡಸರು ಇಲ್ಲದ ಮನ್ಯಾಗ ಬರ್ಲಿಕ್ಕೆ ತಿಳಿಯೂದುಲ್ಲs " ನಿಮಗ ?"——

" ಏss ನಾವು ಯಾರಿದ್ದಿವಿ ಗೊತ್ತಿಲ್ಲೇನು ? ಎಚ್ಚರದಿಂದ ಮಾತಾಡು." "ನೀ, ಬಾದಶಹನ ಮೊಮ್ಮಗಾ ಇರವಲ್ಲ್ಯಾಕ, ಏ ಏ ಅಂದೆಂದ್ರs ಹಲ್ಲು ಉದರ್‍ಯಾವು," ವಿಕ್ರಮನ ಹೆಂಡತಿಯೂ ದನಿಗೂಡಿಸಿದಳು. ಗೌಡರು ಸಮಾಧಾನಕ್ಕೆ ಯತ್ನಿಸಿದರು. ತಾಯಿ ಮಗಳನ್ನೇ ಶಾಂತತೆ ವಹಿಸಲು ತಿಳಿಸಿದಳು.

"ಮನ್ಯಾಗ ಹೇಣ್ತಿಗಾರೆ 'ಏ, ಅಂತೀ ಏನು ?ಹೆಣ್ಣುಮಕ್ಕಳಿಗೆ ಹ್ಯಾಂಗ ಮಾತಾಡ ಬೇಕೂ ಅನ್ನೂದು ತಿಳಿಯೂದಿಲ್ಲs"

"ನಿನ್ನ ಹೇಣ್ತಿಗೆ ಯಾರಾರೆ ಏ ಅಂದ್ರ ಸುಮ್ಕಿರ್ತಿಯಾ ?"

"ಇರ್ಲಿ ಬಿಡ್ರೀ, ಅಂದು ದೊಡಮನಸ್ಸಾ ಅಗ್ಲಿ,"ತಾಯಿ ನುಡಿದಳು. ಸಾಬರ ಮುಖ ಕಂದಿತು. ಪೋಲಿಸರೆದುರೇ ಅವಮಾನವಾದುದು ತಡೆಯ ದಾಯಿತು. ತಪ್ಪು ತನ್ನದೆಂಬುದನ್ನು ತಿಳಿದಿದ್ದ. ಹೆಚ್ಚು ಮಾತಾಡು ವಂತಿಲ್ಲ. ಪೋಲಿಸರಿಗೂ ಮನವರಿಕೆಯಾಗಿದ್ದಿತು. ತಮ್ಮ ಸಾಬರು ಒರಟುತನ ತೋರಬಾರದಿತ್ತೆಂದೂ ಮನದಲ್ಲೇ ನುಡಿದರು. ಗೌಡರು ಎಲ್ಲರನ್ನೂ ಶಾಂತಗೊಳಿಸಿದರು. ಕುಳಿತುಕೊಳ್ಳಲು ಗೌಡರ ವಿನಂತಿ ಯಾಯಿತು.

"ಅಣ್ಣ ಬಂದಮ್ಯಾಲೆ ಒಳಗ ಬರ್ಲಿ" ಎಂದು ತಂಗಿಯು ಅರ್ಭಟಿ ಸಿದಳು.

"ಹಾಂಗಲ್ಲ ಬಾಯ್ರs ಮನೀಗೆ ಬಂದಮ್ಯಾಲೆ ಕೂಡ್ರೀ ಅನ್ನೂದು ಧರ್ಮ"

"ಆ ಧರ್ಮಾ ನಿಮಗೇ ಇರ್ಲಿ. ಏಳ್ರಿ, ಎಲ್ಲಾರೂ ಹೊರಗನಡೀರಿ"

"ನಡೀರೆಪಾ ನಡೀರಿ, ಹೆಣಮಗಳಸಂಗ್ತೀ ಬಾಯಿಗೆ ಬಾಯೀ ಥರಾ ಅಲ್ಲಾ" ಎನ್ನುತ್ತ ಕಟ್ಟೆಯ ಕಡೆಗೆ ನಡೆದರು. ಪಿಸ್ತೂಲಿಗೆ ಒಂದು ಕೈನೀಡಿದರು. ಪೋಲಿಸರ ಮೇಲೆ ರೇಗಿದರು. ಗೌಡರೂ ಬೈಗಳಿಗೆ ಆಹುತಿಯಾದರು. ವಿಕ್ರಮನ್ನಿನ್ನೂ ಬರಲಿಲ್ಲ. ದಾರಿ ಕಟ್ಟಾದುದಕ್ಕೆ ಜನ ಬೇಸತ್ತರು. ಹುಡುಕಲು ಹೊರಟವರೂ ತಿರುಗಿದರು. ಸಾಹೇಬರ ತಲೆ ವಿಚಾರದಿಂದ ಭಾರವಾಗಿದ್ದಿತು. ಅರೆ ನಸುಕಿನಲ್ಲಿ ಬಂದರೂ ಯಶ ದೊರೆಯದ್ದಕ್ಕೆ ಕೋಪಗೊಂಡರು. ಪೋಲಿಸರಿಗೂ ತಿಳಿಸದೆ ಮ್ಯಾಜಿ ಸ್ಟ್ರೇಟರಿಂದ ವಿಕ್ರಮನ ವಾರಂಟನ್ನು ಪಡೆದುದು ವ್ಯರ್ಥವಾಯಿತು. ಹೆಂಗುಸಿನಿಂದ ಅಪಮಾನ ಸಂದರ್ಭ ಒದಗಿದುದಂತೂ ತಲೆಯಲ್ಲಿ ಸಿಡಿ ಯುತ್ತಿದೆ. ಬಿಸಿಲು ಬಲಿಯಿತು. ಸಾಬರ ತಲೆಕಾಯಿತು.

**"ವಂದೇ ಮಾತರಂ"** ತನ್ನ ಮನೆ ಒಳಕ್ಕೆ ಬರುತ್ತಲೇ ವಿಜಯ ಧ್ವನಿಗೈದಳು. ಗಂಗೂ ದಿನಚರಿಯನ್ನು ಕೈಗಿತ್ತಳು. ನಡೆದುದನ್ನು ನಿಮಿಷದಲ್ಲಿ ಉಸುರಿ 'ಮುಂದೇನ್ಮಾಡ್ತೀ ವಿಕ್ರಮಾ' ಎಂದು ಕುತೂಹಲಿತಳಾಗಿ ಕೇಳಿದಳು. ದಿನಚರಿಯನ್ನು ತಿರುವುತ್ತ 'ಗಂಗೂ' ಎಲ್ಲರ ಮಾನಾನೂ ಕಾಯ್ದಿ. ಇದೊಂದು ಪಾರಾಗೂದು ಬೇಕಾಗಿತ್ತು ಇದನ್ನs.... ಎಂದು ಅವಳ ವಶಪಡಿಸಿದ. ಮುಂದೆ ಜರುಗಲಿರುವ ಕೆಲಸಗಳು, ಅವುಗಳ ಮಹತಿ, ಸ್ಥಾನ, ಕಾಲಗಳನ್ನೆಲ್ಲ, ಸಂಕ್ಷೇಪವಾಗಿ ವಿವರಿಸಿದ. ಎಲ್ಲ ಕೆಲಸಗಳು ನೆರವೇರುವವೆಂಬ ಭರವಸೆಯೂ ವಿಕ್ರಮನಿಗಿದ್ದಿತು. ಎದ್ದು ಹೊರಡಲು ಅಪ್ಪಣೆ ಬೇಡಿದ. ಬೇಡವೆಂದಳು.

"ಪುಣ್ಯಕ್ಷೇತ್ರಕ್ಕೆ ಹೋಗಿ ಬರ್ತೀನಿ ಗಂಗೂ"

"ಬಂದೇ ಬರ್ತsದ ಪಾಳೀ—ನೀನಾಗೇ ಯಾಕ ss ?

"ಹಿಂದ್ಕೊ ಹಿಂಗೇ ಕಳಕೊಂಡೀನಿ ವ್ಯಾಳ್ಯಾ, ನೀವೆಲ್ಲಾ ಇದ್ದೀರಿ.... ಕಂಡೇ ಬರ್ತೀನಿ," ಗಂಗೂ ಮೌನತೆ ವಹಿಸಿದಳು.

ವಿಕ್ರಮನನ್ನು ಕರುಣೆಯಿಂದ ಕಂಡಳು. ಅವನ ಗುಣ, ಮನೆತನದ ದಾರಿದ್ರ್ಯತ ಕೆಲಸದ ರೀತಿಯನ್ನು ಕಣ್ಣೆದುರು ನಿಲ್ಲಿಸಿದಳು. ಅಣ್ಣನ ಜೊತೆ ತಪ್ಪುವದೆಂದು ಮರುಗಿದಳು. 'ಅಣ್ಣಾ' ಎಂದು ಕಕ್ಕುಲತೆಯಿಂದ ಕೂಗಿದಳು. 'ಗಂಗೂ' ಎನ್ನುತ್ತ ಹೊರಬಿದ್ದ. ಗಂಗೂ ವಿಕ್ರಮನನ್ನು ಮರೆಯಾಗುವ ವರೆಗೂ ತಲೆಬಾಗಿಲಲ್ಲಿ ನಿಂತು ನೋಡಿದಳು.

ಭಾರಮನದಿಂದ ಮನೆಹೊಕ್ಕ. ಸಾಹೇಬರು, ಪರಿವಾರ ಸಮೇತ ಆಗಮಿಸಿದರು. ಬಂದ ಕಾರಣವನ್ನು ತಿಳುಹಿದರು ಸಾಹೇಬರು. ವಿಕ್ರಮನು 'ಸಾಗಲಿ' ಎಂದ. ಝಡತಿಯ ಅರ್ಭಟಕ್ಕೆ ಕಸಕಡ್ಡಿಗಳೂ, ಗಾಳಿ ಕಂಡವು. ಮನೆಯೆಲ್ಲ ಬೂಟಿನ ತುಳಿತದಿಂದ ಪಾವನವಾಯಿತು. ವಿಕ್ರಮನ ಕೈಬರಹದ ವಾಙ್ಮಯ, ಸಾಬರ ಬೂಟುಗಳ ತುಳಿತ ಕಂಡಿತು. ಬಾಣಂತಿ ಕೂಸನ್ನೂ ಕೊಂಡು ಹೊರ ಬಂದಳು. ಹೊಸ ಬಟ್ಟೆಗಳ ಪೆಟ್ಟಿಗೆಯೂ ಪಾವನವಾಯಿತು. ದೇವರೂ ಸಾಬರ ದರ್ಶನದಿಂದ

ಪುನೀತರಾದರು. ಝುಡತಿಯ ಝುಂಝೂವಾತ ಒಂದುಗಂಟೆ ಬೀಸಿ 'ಆಕ್ಷೇಪಾರ್ಹ ವಾಙ್ಮಯ'ವನ್ನು ಕಕ್ಕಿಸಿತು. ತಾಯಿ ಬೆದರಿದಳು. ಹೆಂಡತಿಯು ನಡುಗಿದಳು. ತಂಗಿ ವಿಕ್ರಮನನ್ನು ನೋಡಿದಳು. ವಿಕ್ರಮನು ಶೂನ್ಯ ದೃಷ್ಟಿಯಿಂದ ತಾಯಿಯನ್ನೂ, ಹೆಂಡತಿಯನ್ನೂ, ತನ್ನ ಮಗುವನ್ನೂ ನೋಡಿದನು.

ಉದವೀರಯ್ಯನವರು ಪಂಚರಾದರು. ಖಾಜೇಸಾಬರೂ ಪಂಚರೇ. ಇಡ್ಲಿಯ ರಾಮಂಜಿಯೂ ಪಂಚ. ಪಂಚರನಾಮ ಮುದ್ರೆಗಳು ಕಾಗದವನ್ನು ಅಲಂಕರಿಸಿದವು. ಗೌಡ ಕಲ್ಲಪ್ಪನವರು ಜಯ ಜಯವೆಂದರು. ಕುಲಕರ್ಣಿಯು ಸಿಂಹಧ್ವನಿಕಾರಿದ. ಕಾಂಗ್ರೆಸ್ಸನ್ನು ಟೀಕಿಸುವುದಾಯಿತು. ಊರ ಮುಂದಾಳುಗಳ ನಿಂದನೆಯೂ ಆಯಿತು. ತಂತಿ ಕಡಿದರೆ, ರೆಕಾರ್ಡ ಸುಟ್ಟರೆ, ಗಾಡಿ ಹಳಿ ಕಿತ್ತಿದರೆ ಸ್ವರಾಜ್ಯ ದೊರೆಯುವುದೇ ? ಎಂದರು. ದೇಶದ್ರೋಹಿಗಳು ಮಾಡುವ ಹೀನಾಯ ಕೆಸಲಗಳಿವೂ ಎಂದು ಇತ್ಯರ್ಥವಾಯಿತು.

ವಿಕ್ರಮನ ತಾಯಿ ಯಾವುದು ಬರಬಾರದೆಂದು ಬಯಸಿ ಬೇಹುತ್ತಲಿದ್ದಳೋ, ಅದೇ ಬಂದು ಒದಗಿತು. ತನ್ನಿಂದ ದೂರವಾಗಿ ಮಗನು ಕಷ್ಟಪಡಲು ಹೊರಡುವನಲ್ಲಾ ಎಂದು ಅಳಲಿದಳು. ಮೊಮ್ಮಗನನ್ನು ತೊಡೆಯಲ್ಲಿರಿಸಿ ಮೂಕಶೋಕದಲ್ಲಿ ಮುಳುಗಿದಳು ವಿಕ್ರಮನು ತಾಯಿಯ ಬದಿಯಲ್ಲಿ ಕುಳಿತ. ತಾಯಿ ಮಗನನ್ನು ಕಣ್ತುಂಬ ನೋಡಿದಳು. ತನ್ನ ಮಗನು ಸೆರೆಯಲ್ಲಿರುವಂತಾಯಿತೇ ಎಂದು ನೆನೆನೆನೆದು ಬಳಲಿದಳು. ಸೆರೆಮನೆಯ ಊಟ, ಕೆಲಸ ಕಷ್ಟಗಳ ಚಿತ್ರ ಕಣ್ಣೆದುರು ಕುಣಿಯಿತು. ತಾಯಿಯ ಹೃದಯದ ನೋವನ್ನರಿತ ವಿಕ್ರಮನು 'ಅವ್ವಾ' ಎಂದ. ಮುಂದೆ ನುಡಿ ನಿಂತಿತು. ತಲೆಯನ್ನು ತಾಯಿಯ ಹೆಗಲಿಗೆ ಒಪ್ಪಿಸಿದ. ತಲೆತುಂಬ ಕೈಯಾಡಿಸಿದಳು. ಹೌಹಾರಿನಿಂತ ಸೊಸೆಯನ್ನು ಕಂಡು ತಳಮಳಿಸಿದಳು. ಅಳುವ ಕೂಸನ್ನೆತ್ತಿ ಸಮಾಧಾನಗೊಳಿಸಿದ. ಮುದ್ದಿಕ್ಕಿ 'ಹೋಗಿ ಬರುವವರಲ್ಲಿ ನಡೆದು ಮಾತನಾಡುತ್ತಲಿರು' ಎಂದು ಹೇಳಿ ಹೆಂಡತಿಯ ಕೈಗಿತ್ತ

ಕೂಸನ್ನು. ವಿಕ್ರಮನ ತಾಯಿ ಮುಂದಾಗಿ ಕೂಸನ್ನು ಕರೆದುಕೊಂಡು ಕೊಠಡಿಗೆ ಹೋದಳು.

ಹೆಂಡತಿಯನ್ನು ನೋಡಿದ. ಅವಳು ಅವನ ಎದೆಗೆ ಆತುನಿಂತಳು. ಅಸಹಾಯಳಾದೇ ಎಂಬ ದೀನ ಭಾವ ತಳೆದು ಗಂಡನನ್ನು ಕಂಡು ಕಣ್ಮುಚ್ಚಿದಳು. ವಿಕ್ರಮನು ಸಂತೈಸಲು ಯತ್ನಿಸಿದ. ಕೈಗಳೆರಡನ್ನು ಹಿಡಿದು ಅಮುಕಿದ. ಬೆನ್ನಮೇಲೆ ಕೈಯಾಡಿಸಿದ. ನಾಲ್ಕು ಕಣ್ಣುಗಳೂ ಹನಿಗೂಡಿದವು.

"ಸಮಾಧಾನ ಮಾಡಿಕೋ ಕೂಸು"....

"ಪ್ರಕೃತೀ ಕಡೆ.... ...."

"ನೀನೂ.... ...."

"ನನಗೇನಾಗ್ತದ ಧಾಡೀ...."

"ಎಲ್ಲಾನೂ ನಿನ್ನನ್ನೇಕೂಡೇದ. ತಾಯಿ-ಕೂಸೂ"

"ಹೂಂ, ಎಂದೋ ಏನೋ ಬರೂದು"

"ಬರ್‍ತೀನಿ, ಭಡಾನೆ ಬರ್‍ತೀನಿ. ಕಾಳಜೀ ಮಾಡಬ್ಯಾಡಾ"

"ದೇವರಿದ್ದಾನ, ಏನ ಆಗ್ತದ ಆಗ್ಲಿ"

"ಕೆಟ್ಟನಿಸೇದೇನು ?"

"ಇಲ್ಲಾ, ಏನಿಲ್ಲಾ"

"ಕ್ಷಮಾ ಕೇಳ್ಲೀನೂ.... ...."

"ಏನಂದ್ರೀ !"

"ಕ್ಷಮಾ ಬರೆದು ಕೊಟ್ಟು ..."

"ನಾ ಮಂದ್ಗೆ ಮಾರೀ ತೋರಸೂದೇ ಇಲ್ಲಾ ಹಾಂಗಾದ್ರs...."

"ನೀ ಅತಗೋತ ಕೂತ್ರ ss...."

"ಇ - ಲ್ಲಾ - ಹೋಗಿ ಬರ್‍ರಿ"

ಪಾದ ಧೂಳಿಯನ್ನು ಕೊಂಡಳು. ವಿಕ್ರಮನು ತಾಯಿಗೆ ವಂದಿಸಿದನು. ಮಗುವನ್ನು ಮಾತನಾಡಿಸಿದ. ಅಪ್ಪಣೆ ಪಡೆದ. ತಂಗಿಗೆ ಬರುವ ವರೆಗೂ ಇರಲು ತಿಳಿಸಿ ಹೊರಕ್ಕೆ ಹೊರಟ.

" ದೇವತೆ ಮುಂದ ದೀಪಾ ಹಚ್ಚsa" ಅತ್ತೆಯ ಹೇಳಿಕೆ ಆಯಿತು, ಸಾಬರ ಮಂಡಳಿ ಪಯಣ ಬೆಳಸಿತು. ಸಾಲಾಗಿ ಬಿಚ್ಚುಗತ್ತಿಯ ಸಿಪಾಯಿಗಳು ಬಂದೂಕನ್ನು ಹೆಗಲಿಗಿರಿಸಿ ತಾಲಬದ್ಧವಾಗಿ ಅಡಿ ಇಡುತ್ತ ನಡೆದರು. ನಡುವೆ ವಿಕ್ರಮ. ಎಡಬಲಕ್ಕೆ ಸಬ್-ಅಸಿಸ್ಟಂಟ ಇನ್ಸಪೆಕ್ಟರರು ಬೀದಿಯಲ್ಲಿ, ಮನೆಯ ಕಿಡಿಕಿಯಲ್ಲಿ, ಜನ ಹಣಿಕಿಕ್ಕಿ ವಿಕ್ರಮನನ್ನು ಅಭಿಮಾನದಿಂದ ಕಾಣುತ್ತಲಿದ್ದರು. ಪರಿಚಿತರಿಗೆ ವಿಕ್ರಮನು ವಂದನೆ ದಾರಿಯುದ್ದಕ್ಕೂ ಸಮರ್ಪಿಸುತ್ತಲಿದ್ದ. 'ಗಂಗೂ' ದೂರಿನಿಂದ ಅಣ್ಣನ ವೈಭವ ಕಂಡು ಮೈದುಂಬಿ ಜನ ಕಾಣದಂತೆ ವಂದನೆಯಿತ್ತಳು. ಬೆಂಬತ್ತಿದ ಬಾಲಕರು ಸಾಹೇಬರ ಏಟಿಗೆ ಗುರಿಯಾಗಿ ಓಡಿದರು. ವಿಕ್ರಮನು ವೀರಾಗ್ರಣಿಯಾಗಿ ನಡೆದಿದ್ದ ಸಾಹೇಬರೊಡನೆ.

**" ವಂದೇ ಮಾತರಂ "**

**" ಕಾಂಗ್ರೆಸ್ಸಿಗೆ ಜಯವಾಗಲಿ "**

**" ಕ್ವಿಟ್ ಇಂಡಿಯಾ "**

ಜಯ ಜಯಕಾರದ ಧ್ವನಿ ವಿಕ್ರಮನನ್ನು ಆನಂದಗೊಳಿಸಿತು. ಎಲ್ಲಿಂದ? ಯಾರಿಂದ? ನಾಡಿನ ಜಯಧ್ವನಿ ಮೊಳಗಿತೆಂಬದನ್ನು ತಿಳಿಯಲು ವಿಕ್ರಮನಂತೆ ಪೋಲಿಸರಿಗೂ ಆತುರ. ಸಾಬರು ಆಕ್ರೋಶದಿಂದ ಕೂಗಿದರು. ದಿಕ್ಕೆಟು ಓಡಿದರು ಪರಿಶೋಧಿಸಲು.

ಈರ್ವರು ಹಳ್ಳಿಗರು, ರಾಷ್ಟ್ರಧ್ವಜವನ್ನು ಎತ್ತಿ ಗಂಭೀರ ನಿನಾದಗೈಯುತ್ತ ಎರುರಾದರು, ಸಾಬರ ಸಮೂಹವನ್ನು ನೋಡಿಯೋ ವಿಕ್ರಮನನ್ನು ಕಂಡೋ ಇಮ್ಮಡಿ ಉತ್ಸುಕತೆಯಿಂದ ಜಯಕಾರ ಮಾಡಿದರು. ಪೋಲಿಸರು ಎಳೆದರು ಹಳ್ಳಿಗರನ್ನು, ಸಾಬರೆದುರಿನಲ್ಲಿ ನಿಲ್ಲಿಸಿದರು. ದುರುಗುಟ್ಟಿ ನೋಡಿದರು ಸಾಬರು. ಹೆಸರು, ಊರು, ಎಲ್ಲವನ್ನೂ ಕೇಳಿದರು. ರೈತರು **"ಕ್ವಿಟ್ ಇಂಡಿಯಾ"** **"ವಂದೇ ಮಾತರಂ"** ಎಂದು ಸಾವಿರಸಲ ಮೈದುಂಬಿ ಕೂಗಿದರು. ಸಾಬರು ರೇಗಿ ಧ್ವಜ ಕಸಿಯಲು ಆಜ್ಞೆವಿಧಿಸಿದರು. ಸಾಹೇಬರ ಆಜ್ಞೆ; ಹೊಡೆದರು. ಕೈತಿರುವಿ ಗುದ್ದಿದರು. ಧ್ವಜ ಬಿಡದಲೇ 'ಜಯ್,' ಎನ್ನುತ್ತಲಿದ್ದರು. ನೆಲಕ್ಕುರುಳಿಸಿದರು,

ರೈತರು, ಧ್ವಜವು ಎದೆಯನ್ನು ಅಲಂಕರಿಸಿತು. ಕಿತ್ತಿದರು, ಎಳೆದರು, ಹಳ್ಳಿಗರು, ಘೋಷಿಸಿದರು, ‘ **ವಂದೇ ಮಾತರಂ** ’ ಎಂದು. ಬೀದಿಯ ಬದಿಯ ಸಾಲೆಯ ಬಾಲಕರು ನೆರೆದು ‘ **ವಂದೇ ಮಾತರಂ** ’ ಗರ್ಜನೆ ಗೈದರು, ಸಾಬರ ಪಯಣ ಬೆಳೆಯಿತು.

### ತಂತೀ ಕಡದ್ರs ಸ್ವರಾಜ್ಯ ಸಿಗ್ತದ ಮಗನss !!

ತಿಳಿಯದೆ ಹಳಿದುದಕ್ಕಾಗಿ ಕೆಡಕೆನ್ನಿಸಿದೆ ವಿಕ್ರಮನಿಗೆ. ನೀಚ, ದುಷ್ಟ, ದುರ್ನಡತೆಯವ ಹಾಗೆ ಹೀಗೆ ಎಂದು ಸಬ್ ಇನಸ್ಪೆಕ್ಟರ ಸಾಹೇಬರನ್ನು ಮನಸ್ಸೀ ಹಳಿದಿದ್ದ. ಕಚೇರಿಗೆ ಬಂದೊಡನೆ ಖುರ್ಚಿಯಲ್ಲಿ ಕುಳ್ಳಿರಲು ವಿನಯದಿಂದ ಹೇಳಿದುದು. ಅಳತೆ, ತೈ, ಮುಖದ ಗುರುತುಗಳನ್ನು ಸಲುಗೆಯಿಂದ ಪಡೆದು ಚಹದ ಆತಿಥ್ಯವನ್ನೂ ಸವಿ ಮಾತಿನಿಂದ ಏರ್ಪಡಿಸಿದುದು, ಮನೆಯೂಟ ತರಲು ಸದ್ಗೃಹಸ್ಥನಂತೆ ಅಪ್ಪಣೆ ನೀಡಿದುದು, ಕೈದಿಯು ಭಾವತಳೆಯದೇ ಮನ್ನಣೆಯಿತ್ತು ಗೆಳೆಯನಂತೆಯೇ ವರ್ತಿಸಿದುದು, ಪರಿಪೂರ್ಣ ಜ್ಞಾನವಿಲ್ಲದೆ ನಿಂದನೆಗೈದುದು ಮಹಾ ಪರಾಧವೆನ್ನಿಸಿತು. ದಸರೆಯ ದಿನ ಬಂಧಿಸಿದುದಕ್ಕೆ ಸಾಹೇಬರು ವಿಕ್ರಮನೆದುರೇ ವಿಷಾದ ವ್ಯಕ್ತಪಡಿಸಿದರು. ಮೇಲಿನವರ ಆಜ್ಞೆ, ಮೀರುವಂತಿಲ್ಲವೆಂದು ಹೇಳಿದುದನ್ನು ಕೇಳಿ, ಸಾಬರ ಸ್ವಭಾವಕ್ಕೆ ತೀರ ಮುಗ್ಧನಾದ. ತಂಬಾಕನ್ನು ತನ್ನ ಹಣ ಕೊಟ್ಟು ತರಿಸಿ ತಿನ್ನಿಸಿದುದರಿಂದ ವಿಕ್ರಮನ ದೃಷ್ಟಿಯಲ್ಲಿ ಸಾಬರು ಸಾಧುಗಳಾದರು.

ವಿಕ್ರಮನು ಹೆಸರಾಂತ ಸಾಹಿತಿಯಲ್ಲವಾದರೂ ಊರಿನ ಕೆಲವರ ಮನ್ನಣೆ ಪಡೆದವ. ಅವನ ಏಳ್ಗೆಯನ್ನು ಬಯಸುವ ಸ್ನೇಹಿತರ ಬಳಗವೂ ದೊಡ್ಡದು. ಅವನ ಭೆಟ್ಟಿಗೆ ಅನೇಕ ಗೆಳೆಯರು, ಹಿರಿಯರು ಬಂದರು. ಸಾಹೇಬರು ಯಾರಿಗೂ ಆತಂಕ ಒಡ್ಡಲಿಲ್ಲ. ಹೆದರಿಸಿ ಓಡಿಸಲಿಲ್ಲ. ಬಂದವರೆಲ್ಲ ಧೈರ್ಯ ತಳೆಯಲು ಹೇಳಿದರು; ಉಪದೇಶಿಸಿದರು. ‘ಬನ್ನಿ’ ಇತ್ತು ತೆರಳಿದರು. ಸಾಬರ ಗುಣವರ್ಣನೆ, ವಿಕ್ರಮನ ಮುಖದಿಂದ ಬಂದವರ ಎದುರು ಸಾಗಿತು.

ಕತ್ತಲಾಯಿತು. ಕಚೇರಿಗಳು ಕೀಲಿ ಕಂಡವು. ಟ್ರೇಝರಿ ಕಾಯುವ ಪೋಲೀಸರು ಬಂದೂಕನ್ನೆತ್ತಿ ಲಾಕಪ್ಪಿನೆದುರು ತಿರುಗುತ್ತಲಿದ್ದರು ನಡುವೆ ಒಂದು ದೀವಿಗೆ ಮಿಣುಕುತ್ತಿದೆ. ಲಾಕಪ್ಪಿನಲ್ಲಿಯ ಕೈದಿಗಳು ಪಣಿಕಿಕ್ಕಿ ನೋಡುತ್ತಲಿದ್ದಾರೆ. ಎಂಟರ ಗಂಟೆ ಬಡಿಯಿತು. 'ಸಾಬ'ರೂ ಬಂದರು. ಪರಿವಾರದ ರೋಲಕಾಲಕ್ರಮ ಮುಕ್ತಾಯವಾಯಿತು. ಸಾಬರಿಗೆ ಸಾಮೂಹಿಕ 'ಸಲಾಂ' ಸಲ್ಲಿತು. ನೆಲ ಅದುರಿಸುವ ಪರಿವಾರದ ನಡಿಗೆಯು ಮೆಲ್ಲನೇ ಮಾಯವಾಯಿತು. ಸಾಬರೂ ಸಾಯಕಲ್ಲನ್ನು ಆರೋಹಿಸಿದರು. ವಿಕ್ರಮನು ಕತ್ತಲಲ್ಲಿ ಟೇಬಲ್ಲಿನ ಮೇಲೆ ಕುಳಿತು ಎಲ್ಲವನ್ನೂ ನೋಡಿದ. ತಾನೆಲ್ಲಿಮಲಗುವುದು ? ರಾತ್ರಿ ಎಲ್ಲ ಕತ್ತಲಲ್ಲಿ ಕಳೆಯುವುದೇ ? ಎಂಬುದಾಗಿ ಚಿಂತಿಸಿದ. ಕಾವಲರ 'ಖಟ್, ಖಟ್' ಶಬ್ದ ಕಿವಿ ಕಟ್ಟಿತು. ದೂರದ ಬೀದಿಯ ದೀಪ, ಅಸ್ಪಷ್ಟ ಮಾತು, ಕಾಣುತ್ತಿದ್ದ, ಕೇಳುತ್ತಿದ್ದ. ರಾತ್ರಿಯ ಚಿಂತೆ ಬಲವಾಯಿತು. ಸಾಬರು ಏನನ್ನೂ ಹೇಳದೇ ನಡೆದುದಕ್ಕೆ ಕಾರಣ ಕಾಣದಾದ. ತಾನೇ ಮುಂದಾಗಿ ಕಾವಲರ ಅಪ್ಪಣೆಪಡೆದು ಹಾಸಿಗೆ ಉರುಳಿಸುವುದು ಯುಕ್ತವೆಂದ. ಕಾವಲರು ಕೈದಿಗಳನ್ನು ಹೆದರಿಸುವುದನ್ನು ಕಂಡು ತಾನೂ ತುತ್ತಾದರೆ ಎಂಬ ವಿಚಾರವು ಮೂಡಿತು. ಚಡಪಡಿಸಿದ. ಮನೆ, ಮಗು, ಹೆಂಡತಿ, ತಾಯಿಯರು ಸುಳಿದರು ಕಣ್ಣೆದುರು. ಕೂಸಿನ ನಗೆ, ಅಳು ಚಿತ್ರಿತವಾಯಿತು. ಹೆಂಡತಿಯ ಕರುಣೆಯ ನೋಟ, ತಾಯಿಯ ಗಾಬರಿ ಕಂಡ. ಅವರೊಡನೆ ಮಾತನಾಡಿದ. ಅದೇಗುಂಗಿನಲ್ಲಿ ತೂಕಡಿಸಿ ಬೆಂಚಿನಮೇಲೆ ಮಲಗಿದ ಮೆಲ್ಲನೆ.

"ರಾಯ್ರು ಓ ರಾಯ್ರುಽಽ" ಕಾವಲು ಜಮಾದಾರರ ಧ್ವನಿಯು ಅಬ್ಬರಿಸಿತು. ಕಪ್ಪರಿಸಿ ಎದ್ದ. ಧ್ವನಿ ಬಂದ ನಿಟ್ಟನ್ನು ಗಾಬರಿಯಿಂದ ನೋಡಿದ. ಕೆರವಿನ 'ಖಟ್‌ಖಟ್' ಸದ್ದು ಇದ್ದೇ ಇದ್ದಿತು ಕೂಗಿದುದು ನಿಜವೆಂದು ನಂಬದಾದ. ತಾನೇ ಮುಂದಾಗಿ 'ಕೂಗಿದಿರಾ' ಎಂದು ಕೇಳಬೇಕೆಂದು ಎದ್ದುನಿಂತ. ತಾನಾಗಿಯೇ ಕರೆದರೆ ಉತ್ತರಿಸುವುದೇ ಉತ್ತಮವೆಂದು ಕುಳಿತ. ಹಾಸಿಗೆಯನ್ನು ತಲೆಗಿಂಬನ್ನಾಗಿಸಿ ಉರುಳಿದ.

ಕಣ್ಮುಚ್ಚಿದ. ಮತ್ತೆ ಅದೇ ಧ್ವನಿ, ಕಣ್ತೆರೆದ; ಏಳಲಿಲ್ಲ. ಕೆರವಿನ ಸದ್ದು ಎದೆ ಮೆಟ್ಟಿದಂತೆ ತೀರ ಸಮೀಪಕ್ಕೆ ಬಂದಂತೆ ಎನಿಸಿತು 'ರಾಯ್ರs' ಇದನ್ನೇನು ಮನೀ ಮಾಡಿರೇನು?, ನಾಟಕದ ರಾವಣನಂತೆ ನಿಂತು ಗುಡುಗಿದ. ಮರ್ಯಾದೆ ನೀಡಲು ಎದ್ದು ಕುಳಿತ. ಜಮಾದಾರನ ಬೀಡಿಯ ಜುರುಕಿನ ಬೆಳಕಿನಲ್ಲಿ ವಿಕ್ರಮನು ಕಂಡ. ಹೊಗೆ ವಿಕ್ರಮನ ಮುಖಮಂಡಲವನ್ನು ಮುತ್ತಿತು. ಚಡಪಡಿಸಿ ಎದ್ದುನಿಂತ. ಎದೆ ನಡುಗುತ್ತಲಿದ್ದಿತು.

'ರಾಯ್ರ s ಪಲಂಗು ಬೇಕೇನು?'

"ಏನಂದ್ರೀ ....' ಏನೆಂದು ಹೇಳಬೇಕೆಂಬುದೇ ವಿಕ್ರಮನಿಗೆ ತಿಳಿಯದು. ಕತ್ತಲಲ್ಲಿಯೇ ದಿಟ್ಟಿಸಿದ. ಮತ್ತೆ ಯಾವ ಕೀಳ್ನುಡಿ ಹೊರಬೀಳುವುದೋ ಎಂದು ಅಂಜಿದ. 'ಏನೇನೂ, ನಡೀರಿ ಎತ್ರಿ ಬಿಛಾನಾ,' ಎಂದವನೇ ಆಢ್ಯತೆಯಿಂದ ಟ್ರೇಝುರಿಯ ಕಡೆಗೆ ನಡೆದ. ಲಾಕಪ್ಪಿನಲ್ಲಿ ಇಣಿಕಿ ನೋಡಿ ನಡೆದ.

ವಿಕ್ರಮನು ಹಾಸಿಗೆ ಹೊತ್ತು ದುಗುಡದಿಂದ ಅವನೆದುರು ನಿಂತ. ಹಾಸಿಗೆಯ ಝಡತಿ ಆಯಿತು ಕೋಟು ಕಳೆಯಲೇಬೇಕೆಂದುದಕ್ಕೆ ಬಿಚ್ಚಿ ವಶ ಪಡಿಸಿದ. ಜೇಬುಗಳ ಝಡತಿ ನಡೆದಿತು. ಬರಿಮೈಯಿಂದ ನಿಲ್ಲಿಸಿದಂತೆ ನಿಲ್ಲಲೇ ಬೇಕು, ಉಟ್ಟ ಪಂಜೆ ಸಡಿಲು ಮಾಡಿ ಜಮಾದಾರರು ಝಡತಿಯನ್ನು ಸಮಾಪ್ತಗೊಳಿಸಿದರು ಕುಡಿದ ಗುಂಗಿನಲ್ಲಿ 'ಹರಾಮಖೋರ, 'ನಾಲಿ, ಬದ್ಮಾಷ, ಬೇಖೂಫ ಪದವಿಗಳನ್ನು ವಿಕ್ರಮನಿಗೆ ನೀಡಿದ. ಸ್ವೀಕರಿಸದೇ ಗತ್ಯಂತರವಿಲ್ಲ. ಎಲ್ಲವನ್ನು ಮುದುಡೆ ಮಾಡಿ ಎತ್ತಿದ. ಲಾಕಪ್ಪಿನ ಕೀಲಿ ಕಳಚಿತು. ಅರ್ಧ ಬಾಗಿಲು ತೆರೆದಿತು. ಜಮಾದಾರರು ವಿಕ್ರಮನನ್ನು ಲಾಕಪ್ಪಿನಲ್ಲಿ ದಬ್ಬಿದರು ಬಾಗಿಲು ಇಕ್ಕಿತು. ಕೀಲಿ ಅಲಂಕರಿಸಿತು.

ಮುದುಡಿಯನ್ನು ಅಪ್ಪುಕಿ ಬಾಗಿಲನ್ನು ಆತುನಿಂತ ಕೊಠಡಿಯಲ್ಲಿ ಏನಿದೆ? ಹೇಗಿದೆ? ಯಾರಿರುವರು? ಏನೂ ತಿಳಿಯದಾಯಿತು. ವಿವಿಧ

ದೇಹಗಳ ಅಬ್ಬರದ ಗೊರಿಕೆಗಳ ಸ್ವರ ಕೇಳಿ ತನ್ನಂತಹ ಜೀವಿಗಳೇ ಉರುಳಿರುವವೆಂದು ನಿರ್ಧರಿಸಿದ, ಕತ್ತಲಲ್ಲಿ ಏನೂ ಕಾಣದು, ಹುಲಗುವು ದೆಲ್ಲಿ? ನಿಂತಲ್ಲಿಯೇ ಕುಳಿತು ಬೇಗನ್ನ ಪಾರುಗಾಣಿಸುವದಾಗಿ ಯೋಚಿಸಿದ. ಅದೆಷ್ಟು ಸಲ ಕಣ್ಣುಜ್ಜಿದರೂ ಕಾಣದಾಯಿತು. ಸೊಳ್ಳೆಗಳು ವಿಜಯೋತ್ಸಾಹದಿಂದ ಗರ್ಜಿಸಿದವು. ಆರೋಹ-ಅವರೋಹಗಳ 'ಗುಂಯ್' ರವ ರಾಗವನ್ನು ನಡೆಯಿಸಿದ್ದವು. ಮುಖಕ್ಕೆ ಮುದ್ದಿಕ್ಕಿ, "ಹೊಸ ಬೇಟಿಯಾಗಿ ಬಂದೀss" ಎಂದು ಪ್ರೀತಿಯ ಸ್ವಾಗತ ಗೀತೆಯನ್ನು ಅಬ್ಬರದಿಂದ ಹಾಡಿದುವು. ಉತ್ಸಾಹದಿಂದ ಕಡಿದುವು. ಚಡಪಡಿಸಿದ, ಕುಳಿತ, ಮೈ ಮೋರೆಯನ್ನು ದಿಕ್ಕೆಟ್ಟು ತುರಿಸಿದ. ಮೈ ಉರುಪಿಟ್ಟಿತು. ಕೈಬೀಸಿದ. ಸಂಕಟದಿಂದ ಹೊಯ್ದಾಡಿದ. ಉಸಿರುಗಟ್ಟಿ ಮರಣ ಬರುವಂತಾಯಿತು. ಗಾಳಿ ಇಲ್ಲ!

"ಸಾಹೇಬ್ರs ಜಮಾದಾರ ಸಾಹೇಬ್ರs .... "

ಸಂಕಟ ತಾಳದೇ ಕೂಗಿದ ಉತ್ತರ ಬರುವ ಅವಧಿಯೊಳಗಾಗಿ ಮತ್ತೆ ಕೂಗಿದ. ಅವನು ಬಂದು ಬಾಗಿಲಲ್ಲಿ ನಿಂತು ಯಾಕೆ? ಎಂದು ಕೇಳುತ್ತಲಿದ್ದರೂ 'ಸಾಬ್ರs ಸಾಬ್ರsss' ಎಂದು ಪ್ರಜ್ಞೆ ತಪ್ಪಿ ಆಕ್ರೋಶಿಸಿದ. ಬಂದೂಕಿನಿಂದ ಬಾಗಿಲನ್ನು ಬಡಿ ಬಡಿದು ಜಮಾದಾರರು ಅರ್ಭಟಿಸಿದರು. ವಿಕ್ರಮನ ಆಕ್ರೋಶಕ್ಕೆ ಕೈದಿಗಳು ಎಚ್ಚತ್ತರು, ಪಟಪಟ ಹುಳ ಬಡಿಯುತ್ತ ಆಕಳಿಸಿ ಎದ್ದು ಕುಳಿತರು.

"ಏ ಯಾಕ ಒದರ್‍ತೀಯೋ? ಸಾಯ್ತಿ ಏನು?"

ಬಂದೂಕಿನ ಹಿಂಬದಿಯಿಂದ ಬಡಿಯುತ್ತ ಇಬ್ಬರು ಸಿಪಾಯಿಗಳು ಗದ್ದರಿಸಿದರು.

"ಸಾಬ್ರs ಕೈಮುಗಿತೀನಿ- ಕೈಮುಗಿತೀನಿ"

"ಏನಾಗೇತೀ- ?"

"ಕೈ ಮುಗಿತೀನ್ರಿ- ಬದುಕಿಸಿಗೊಳ್ರಿ"

"ಹಾವು ಕಡೀತs ಏನು? "

"ಪುಣ್ಯಾ ಬರ್ತದ ಹ್ಯಾಂಗಾರೆ ಮಾಡ್ರಿ"

"ಏನು ಹೇಳೋ ನಿನ, ಯಾಕ ಒದರ್ತಿ"

"ಬಾಗಿಲಾ ತಗೀರಿ ಗಾಳಿ....ಗಾಳಿಲ್ಲಾ"

"ಪಾರೆಪಾ ! ಮಗನs— ರಾಜಕುಮಾರಾಗ್ಯಾನ ! ಬೀಳತ್ಲಾಗ. ಒದರಿದ್ರs ಜಜ್ಜೀನು ನಡೀ .... "

"ಏನೂ ಕಾಣಸವಲ್ದು ದೀಪಾನಾರೇ ತೋರಸ್ರಿ"

"ಗ್ಯಾಸ ತರಸ್ತೀನ್ನಿಂದ್ರು" ಎಂದು ನಡೆದರು ನಗುತ್ತ.

ಒಳಗಿನ ಕೈದಿಯೊಬ್ಬನಿಗೆ ಕನಿಕರವೆನಿಸಿತು. ಮೆಲ್ಲನೆ ಕಡ್ಡಿಯನ್ನು ಕೊರೆದ. ಬೆಳಕಿನಲ್ಲಿ ನರಕವನ್ನು ಕಂಡ. ನರಕದಲ್ಲಿ ನಡುಗುತ್ತ ಅಡಿಎತ್ತಿ ಆದರದಿಂದ ಕರೆದ ಕೈದಿಯ ಬಳಿಗೆ ನಡೆದ. ಮತ್ತೆ ಕತ್ತಲು. ಬೇರೊಂದು ಕಡ್ಡಿ ಬೆಳಗಿತು. ದುರ್ಗಂಧ ವಾತಾವರಣವು ಪಸರಿಸಿತ್ತು. ಅಸ್ತವ್ಯಸ್ತವಾಗಿ ಕೈದಿಗಳು ಹಾಸಲಿಲ್ಲದೇ ಹೊದಿಯಲಿಲ್ಲದೇ ಬಿದ್ದಿದ್ದರು. ತೆಗ್ಗು ತೆವರುಗಳ ನೆಲಗಟ್ಟಿನಲ್ಲಿ ಕಸಕಡ್ಡಿಗಳು. ವಿಕ್ರಮನು ಅತ್ಯವಸರದಿಂದ ಹಾಸಿಗೆ ಉರುಳಿಸಿದ. ಹಾಸಿಗೆಯಲ್ಲಿ ಕುಳಿತ. ಹುಳಗಳ ಹಾವಳಿ ತಡೆಯಲು ತುಂಬ ಹೊದೆದು ಕುಳಿತ. ಆದರದಿಂದ ಕರೆದ ಕೈದಿ ವಿಕ್ರಮನ ಹಾಸಿಗೆಯಲ್ಲಿ ಕುಳಿತು ಬೀಡಿಗೆ ಬೆಂಕಿ ಕೊಟ್ಟ. ವಿಕ್ರಮನಿಗೆ ಕೊಡಲು ಕೈ ಮುಂದೆ ಮಾಡಿ ತೆಗೆದುಕೊಳ್ಳಲು ಬಿನ್ನವಿಸಿದ. ಮುಸುಕಿನಲ್ಲಿಯೇ ಬೇಡವೆಂದ. ಅವರಿವರ ಪರಿಚಯ ಕತ್ತಲಲ್ಲಿ ಕಲೆಯಿತು. ವಿಕ್ರಮನು ತನ್ನಂತಹ ಯೋಗ್ಯತೆಯುವನೆಂದೇ ಅವನ ಮೊದಲ ಭಾವನೆಯಾಗಿದ್ದಿತು, ಅವನ ಹೆಸರು ಇವನು ಕೇಳಿದ. ಇವನದು ಅವನು ಕಾರಣ ಕೇಳಿಯೂ ಆಯಿತು. ಗುಣುಗುಣು ಮಾತು ನಡೆದಿದ್ದವು. ಹೊಸನಾತ ಹೊಸನಾತ ಎಂದು ತಗಣಿಗಳ ತಂಡ ವಿಕ್ರಮನಿಂದ ವಿಜಯ ಪತ್ರ ಪಡೆಯುತ್ತಲಿದ್ದವು.

ಒಬ್ಬ ಕೈದಿ ಲಗುಬಗೆಯಿಂದ ಎದ್ದ. ಏತಕ್ಕೆ ಎದ್ದನೋ ಎಂದು ವಿಕ್ರಮನು ಮನದಲ್ಲಿ ವಿಚಾರಿಸುವಷ್ಟರಲ್ಲಿ ಕೈದಿ, ಮಲವಿಸರ್ಜನೆಗೈದ.

ದುರ್ನಾತ ಕೊಠಡಿಯಲ್ಲಿ ತುಂಬಿತು. ಓಕರಿಸಿದ ವಿಕ್ರಮ; ಮೂಗನ್ನು ಮುಚ್ಚಿಕೊಂಡ. ಬೇರೊಂದು ನರಕವಿಲ್ಲ. "ಲಾಕಪ್ಪುಗಳೇ ನರಕ" ಎಂದ. ತಾನಾವುದೋ ಮಹತ್ಪಾಪ ಗೈದುದಕ್ಕೇ ನರಕದಲ್ಲಿ ಕಾಲಿರಿಸಿ ದುದಾಗಿ ನಂಬಿದ. ಇದೊಂದು ಸಲ ಮುಕ್ತನಾದರೆ ಜನ್ಮಿಸಿರುವ ವರೆಗೂ ಚಳವಳಿಯ ವಿಚಾರ ಮಾಡುವುದಿಲ್ಲವೆಂದು ಪ್ರತಿಜ್ಞೆಗೈದ. ಹೆಂಡರು ಮಕ್ಕಳೊಡನೆ ಸುಖವಾಗಿರುವುದನ್ನು ಬಿಟ್ಟು ಈ ಹಾಳು ಚಳವಳಿಯ ಕಾರ್ಯ ಕೈಕೊಂಡದ್ದು ಮೂರ್ಖತನವಾಯಿತೆಂದು ಮರುಗಿದ. 'ಕ್ವಿಟ್ ಇಂಡಿ'ಯಾ ಎಂದವರನ್ನು ಕೊಲೆಗೈಯಬೇಕೂ ಎನ್ನುವಷ್ಟು ಸಂತಾಪ ವಾಯಿತು ಅವನಿಗೆ. ಲಾಕಪ್ಪಿನ ನರಕವಾಸಕ್ಕಿಂತ ಪರತಂತ್ರವೇ ಶ್ರೇಷ್ಠವೆನ್ನಿಸಿತು.- ವಿಕ್ರಮನಿಗೆ. ಜೊತೆಯ ಕೈದಿಗಳು ನಿದ್ರಿಸಿದರು. ವಿಕ್ರಮನು ಕುಳಿತಲ್ಲಿ ಕೊಲೆಗೆಲಸ ನಡೆಸಿಯಿದ್ದ, ಕೈಗಳು ರಕ್ತರಂಜಿತ ವಾದುವು.

"ಹುಕುಮ್ಸ ಡರ್, ಫಂಡಾರ ಪೊ ?? "

ಜಮಾದಾರರು ಕೂಗಿದುದು ವಿಕ್ರಮನಿಗೆ ಕೇಳಿಸಿತು. ಉತ್ತರವು ಸಬ್ ಇನಸ್ಪೆಕ್ಟರ ಸಾಹೇಬರದೆಂದೂ ತಿಳಿಯಿತು. ಸಾಬರು ದಯಾಳು ಗಳೆಂಬುವುದು ಅವನಿಗೆ ಗೊತ್ತು. ಅವರಲ್ಲಿ ತನ್ನ ಯಾತನೆ ನಿವೇದಿಸ ಬೇಕೆಂದು ನಿರ್ಧರಿಸಿದ. ಎದ್ದು ಬಾಗಿಲಲ್ಲಿ ನಿಂತ. ಸಲಾಕೆಗಳ ಸಂದಿ ಯಿಂದ ಸಾಬರ ಬರುವನ್ನು ನಿರೀಕ್ಷಿಸಿದ. ಹೇಗೆ? ಏನನ್ನು? ಯಾವರೀತಿ ಯಿಂದ ಮಾತನಾಡಬೇಕೆಂಬುವನ್ನೆಲ್ಲ ಯೋಚಿಸಿದ. ಜಮಾದಾರರು, ಪೋಲಿಸರು ಸಾಹೇಬರಿಗೆ ಶಿಸ್ತಿನ ಸಲಾಂ ನೀಡಿ ಸ್ವಾಗತಿಸಿದರು. ನೇರ ವಾಗಿ ವಿಕ್ರಮನಿದ್ದ ನರಕದ ಮುಂಭಾಗದಲ್ಲಿ ನಿಂತು 'ಟಾರ್ಚ' ಬೆಳಗಿ ಸಿದರು. ವಿಕ್ರಮನ ದೈನ್ಯವಂದನೆ ಸ್ವೀಕರಿಸಿದರು. ನರಕದ ವೈತರಣೀ ನದಿಯಲ್ಲಿ ಮುಳುಗಿ ಏಳುತ್ತಿರುವರನ್ನು ಕಂಡೇ ಬಂದರು. ವಿಕ್ರಮನು ಸಾಹೇಬರಿಗೆ ಮತ್ತೆ ವಂದನೆಯ ಕಾಣಿಕೆನೀಡಿ ಅಲ್ಲೊರೆದು ಬೇಡಿ ಕೊಂಡ 'ಯಾಕ್ರೀ ರಾಯ್ರು ಇನ್ನೂ ಮಲಕೊಂಡಿಲ್ಲಾ--' ಸಾಬರು ವಿಕ್ರಮನ ಸಮಾಚಾರಕ್ಕೆ ತೊಡಗಿದರು.

"ತಗಣೀ ಚಿಕ್ಕಾಡೂ ಭಾಳ್ರೀ" ಎಂದು ಹೇಳಿದ ವಿಕ್ರಮ.

"ಇಲ್ಲಿ ಯಾಕ ಹಾಕಿಸ್ಯೋ? ನಾಳೀ ಕಡೀ ಖೋಲ್ಯಾಗ ಹಾಕು. ಸ್ವಚ್ಛ ಮಾಡಿಸಿ" ಮುಂದೆ ಏನು ಮಾತನಾಡಬೇಕೆಂಬುದು ವಿಕ್ರಮನಿಗೆ ಹೊಳೆಯಲಿಲ್ಲ. ಇಂದು ಇದೇ ನರಕದಲ್ಲಿ ಕೂಳೆಯಲು ಹೇಳಿದಂತಾಯಿತೆಂದು ಗ್ರಹಿಸಿದ, ತನ್ನನ್ನು ಸಾಬರು ಹೊರಗೆ ಮಲಗಲು ಹೇಳುವರೆಂದೇ ಭಾವಿಸಿದ್ದ. ಸಾಬರು ನಿಲ್ಲದೇ ತಮ್ಮ ಕಚೇರಿಗೆ ನಡೆದರು. ಕಚೇರಿ ಬೆಳಗಿತು. ಜಮಾದಾರರೊಡನೆ ಕಿವಿಮಾತನಾಡಿದರು.

ಜಮಾದಾರರು ವಿಕ್ರಮನ ಬಲಭಾಗದ ನರಕದ ಉದ್ಘಾಟನೆಮಾಡಿದರು. ತನ್ನನ್ನೇ ಅಲ್ಲಿ ಕರೆದಿರಿಸುವರೆಂದು ನಿಶ್ಚಿತವಾಗಿ ನಂಬಿದ. ಸಾಹೇಬರ ಕೃಪೆಯಾದರೆ ಜಮಾದಾರರದೇನು? ಸುಖವಾಗಿ ನಿದ್ರಿಸಬಹುದೆಂದ. ಜಮಾದಾರರು ಕರೆಯಲು ಬರಲೇ ಇಲ್ಲ. ಓರ್ವ ಕೈದಿಯನ್ನು ಬಡಿದೆಬ್ಬಿಸಿದ. ಕುತ್ತಿಗೆಗೆ ಕೈಗೊಟ್ಟು ಹೊರಕ್ಕೆ ದೂಡಿದ! ಕೈದಿಯು, ನಿದ್ರೆ ತೊರೆದವನ್ನು ಗಾಬರಿಯಾಗಿ ಮೆಲ್ಲನೆ 'ಯಾಕೆ?' ಎಂದು ಕೇಳಿದ. ಸಾಬರ ಕಚೇರಿಗೆ ಎಳೆದೊಯ್ದರು ಕೈದಿಯನ್ನು. ವಿಕ್ರಮನು ಸಲಾಖಿಗಳನ್ನು ಹಿಡಿದು ನಿಂತು ನೋಡುತ್ತಲಿದ್ದ. ವ್ಯಕ್ತಿಯ ಮುಖ ಕಾಣದು. ವಿಕ್ರಮನಿದ್ದ ಲಾಕಪ್ಪಿನ ಎದುರೇ ಸಾಬರ ಕಚೇರಿ. ಕೈದಿ ಬೆದರಿ ನಡುಗುತ್ತ ನಿಂತಿದ್ದ. ಎಡಬಲಕ್ಕೆ ಯಮನಾಳಿನಂತೆ ತೋರುವ ಸಿಪಾಯಿರಿಬ್ಬರು. ಸಾಬರು ಸಮ್ಮುಖದಲ್ಲಿ ಕೋರದಾಧರರಾಗಿ ಶೋಭಿಸುತ್ತಲಿದ್ದರು. ಕ್ರೌರ್ಯತೆ ಮುಖದಲ್ಲಿ ಕುಣಿಯುತ್ತಲಿದ್ದಿತು. ಮೀಸೆ ಹುರಿ ಬಿಡಿಸುತ್ತ, ಕೆಂಗಣ್ಣರಾಗಿ ಕೈದಿಯನ್ನು ನೋಡಿದರು. ವಿಕ್ರಮನ ಎದೆ-ಬಡಿತ ಬಲಿಯಿತು: 'ಸಾಧು ಸಾಬರಲ್ಲಿ ಕ್ರೌರ್ಯ ಎಲ್ಲಿಂದ ಬಂದಿತೂ' ಎಂದು ಹೌಹಾರಿದ. ಕಿವಿಕಣ್ಣುಗಳನ್ನು ಯಮನಾಲಯಕ್ಕೆ ಒತ್ತೆ ಇಟ್ಟು, ಧೀರತೆ ತರುತ್ತ, ನಿಂತ ವಿಕ್ರಮ. ಭಯ, ಕರುಣೆಗಳು, ವಿವಿಧತೆರನಾಗಿ ಮುಖದಲ್ಲಿ ಬೆರೆತುವು. ಕಮರಿತ ಮುಖ.

"ಹೆಸರೇನಪಾ ತಮ್ಮಾ" ಸಾಮೋಪಾಯತೆಯನ್ನು ತೋರಿ ಕೇಳಿದರು ಸಾಬರು. ಕೈದಿ ಇಕ್ಕೆಲದವರನ್ನು, ಸಾಬರನ್ನು ದುರುಗುಟ್ಟಿ ನೋಡಿದ.

"ಹೆದರಬ್ಯಾಡಾ, ನಿನಗs ಏನೇನೂ ಮಾಡೂದಿಲ್ಲಾ. ನಾ ಇದ್ದೀನಿ, ಹೇಳು. ನಾಬರ ಸೌಮ್ಯ ವಾಣಿ ಹೊರಬಿತ್ತು. ಕೈದಿ ನಾಬರನ್ನು ಅವರ ದಂಡವನ್ನು ಕಂಡ ಉತ್ತರಿಸಲಿಲ್ಲ. ಮತ್ತೆ ನಾಬರು ಅವನಲ್ಲಿ ಕಕ್ಕುಲತೆ ತೋರಿದರು ಭಯ ಪರಿಹರಿಸಿದರು. ಗದ್ದ ತುಟಿ ಹಿಡಿದು ಕೇಳಿದರು. 'ಹೇಳು' ನೀನು ಏನೂ ಹೆದರೂ ಕಾರಣಿಲ್ಲಾ ನಿನ್ನs ನಾ ಉಳಿಸಿಗೋತೀನಿ. ನಿನ್ನ ಬಿಟ್ಟು ಬಿಡತೀವಿ, ಖರೇ ಇದ್ದದ್ದು ಹೇಳಿಬಿಡು. ಹೆಸರೇನಂದಿ? ಹೇಳು. ಅಂಜಬ್ಯಾಡಾ?' ಅವಷ್ಟು ಪರಿಯಾಗಿ ಬಿಂಬಿಸಿದರೂ ಕೈದಿ ಮಾತನಾಡಲಿಲ್ಲ ಕುಳ್ಳಿರಿಸಿದರು. ಆಶ್ವಾಸನೆ ನೀಡಿದರು. ಮೂಕನೇ ಎಂದರು. ಕುಡಿಯಲು ನೀರನ್ನು ತರಿಸಿಕೊಟ್ಟರು. ನೀರು ಕುಡಿದು ಕುಳಿತನೇ ವಿನಾ, ಒಂದು ಶಬ್ದವನ್ನೂ ಉಚ್ಚರಿಸಲಿಲ್ಲ

"ಇನ್ನs ಒಡತಾs ತಿಂತೀದಿ"....ದಂಡದ ಬೆದರಿಕೆ ತೋರಿ ಕೋರಡೆಯ 'ಛಟ್-ಛಟ್' ಎಂಬ ನಾದವನ್ನು ಎಲ್ಲರಿಗೂ ಕೇಳಿಸಿದರು. ಕೈದಿ ಎಷ್ಟು ನಿಂತ, ಹೇಳುವನೆಂದು ನಾಬರು ಕುತೂಹಲಿತರಾಗಿ ಕಿವಿ ತೆರೆದರು. ಮತ್ತೆ ಮೌನ! ಕೋಪ ಉಕ್ಕೇರಿತು. ಕೆನ್ನೆಗೆ ಕಸುವಿನಿಂದ ಒಂದರಮೇಲೊಂದು ನಾಲ್ಕೇಟು ಹೊಡೆದರು! ದೂರನಿಂತು ಮಾತನಾಡಲು ಬೆದರಿಸಿದರು! ಕಲ್ಲು ಬೊಂಬೆಯಾಗಿದ್ದ ಕೈದಿ! ನಾಬರಿಗೆ ಸಹನೆಯಾಗದಾಯಿತು. ಕೈಗಳನ್ನು ಒಂದಕ್ಕೆ ಕಟ್ಟಿ 'ಬೇಡಿ'ಗಳನ್ನು ತೊಡಕಿಸಲು 'ಹುಕುಂ' ಹೊರಟಿತು. ಯಮನಾಳುಗಳು ವಿಲಂಬ ತೋರದೆ ನೆರವೇರಿಸಿದರು. ಸಿಪಾಯಿಗಳು ತಮ್ಮ ಕೈಗುಣಿಯಿಂದ ಕೈದಿಯ ಮೊಣಕೈಗೆ, ಮೊಳಕಾಲಿಗೆ ಬಡಿದರು, ನೋವನ್ನು ತಾಳದೆ ನೆಲಕ್ಕೆ ಉರುಳಿದ ಚೀರಿದ. 'ಅಯ್ಯೋ! ಅವ್ವಾ!!' ಎಂದು ನರಳಿದ. ಆವೇಶದಿಂದ ನಾಬರು ಬೂಟಿನ ಏಟನ್ನು ಡುಬ್ಬಕ್ಕೆ, ತಿಗಕ್ಕೆ ನೀಡಿದರು. ಹೊರಳಾಡಿದ; ಸಂಕಟದಿಂದ ಕಿರುಚಿದ, ಹಲುಬಿದ.

"ಮಾತಾಡ್ತಿಯೋ ಇಲ್ಲೋ ? ಇನ್ನೂ ಸೊಕ್ಕs",

"ಏನ್ಹೇಳ್ರೀ...." ಕೈದಿ ನರಳುತ್ತ ನುಡಿದ.

" ಹೀಂಗ ಮಾತಾಡೋ ಮಗನs, ಮೊದಲೇ ಮಾತಾಡಿದ್ದ್ರ ಮೈ ಹಣ್ಣ ಹಣ್ಣಾಗ್ತಿದ್ದಿಲ್ಲಾ, ಹೇಳು, ಇಲ್ಲಾ ಅಂದ್ರs ನೋಡಿದವನ್ನ, ಕೋರಡೆ ಯನ್ನು ಜಾರಸಿ ತೋರಿಸಿದರು. ಹೆಸರನ್ನು ಕೇಳಿದರು.

" ಭಾರತಪ್ಪ " ಕೈದಿ ಹೇಳಿದ.

" ಏನೂ ಭಾರತಪ್ಪsss? ಅಪ್ಪನ ಹೆಸರು ?'

" ಗಾಂಧೆಪ್ಪ "

" ಏ! ನೋಡಿದವನ್ನs "

" ಕಾಂಗ್ರೆಸ್ಸಿನವರ " ಹೇಳಿ ಮುಗಿಸಿದ ಕೈದಿ.

" ಮೈಯಾಗಿನ ತಿಂಡಿ ತೀರಿಲ್ಲಲ್ಲs ಇನ್ನೂ, ಭಾರತಪ್ಪಾ ಗಾಂಧೆಪ್ಪಾ ಕಾಂಗ್ರೆಸ್ಸಿನವರ ss ? "

" ಹೌದೂ! ಹೌದೂ!! ಹೌದು sss "

ಹಟವಾದಿಯಂತೆ ಕೈದಿ ಒಂದೇ ಉಸುರಿನಿಂದ ಹೇಳಿದ.

" ಮುಸ್ತೀಗೆ ಬಂದೀದಿ, ಎಲವು ಪುಡಿ ಪುಡಿ ಆದೂ ಅಂದ್ರs ತಿಳೀತದ. ಯಾರ‍್ಯಾರ‍್ಕೂಡಿ ತಂತೀ ಕಡದ್ರೀ....?"

" ನಾ ಒಬ್ನೇ ೩೦೦ ಖಂಬಾ ಉರುಳಿಸಿ, ತಂತೀ ಕಡದೀನಿ. ನಾನೇ, ನಾನೇ ಕಡದೀನಿ, ಕಿತ್ತೀನಿ "

" ಯಾರ್‍ಹೇಳಿದ್ರು ನಿನಗ ತಂತೀ ಕಡಿಯಲಿಕ್ಕೆ "

" ದೇವರು, ದೇಶದ ದೇವರು ! "

" ಯಾವನೋ ಅವಾ ದೇವರೂ ! "

" ಗಾಂಧಿ ! ಬೋಸ !! ನೆಹರೂ "

" ಏನಂತ ಹೇಳಿದ್ರೂ ? "

"ಅವರ‍್ಯಾಕ ಹೇಳಬೇಕು. ನಮ್ಮ ದೇವರೆಲ್ಲಾ ತುರಂಗದಾಗ ಕೂತ್ರು ಭಕ್ತರ ಬಂಡಾಯಾ ಎದ್ದಿತು. ತಂತಿ ಕಿತ್ತೀವಿ, ಸ್ಟೇಶನ್ ಸುಟ್ಟೇವಿ. ಹಳಿಹಾರಿ ಹೊಡದೀವಿ, ರೆಕಾರ್ಡ ಸುಟ್ಟೇವಿ" ನಿರ್ಭಯವಾಗಿ ಹೇಳಿದ.

" ಯಾರ‍್ಯಾರಿದ್ರಿ? "

" ನೀನು! ನಾನು! ದೇಶದೊಳಗಿನ ಎಲ್ಲಾರೂ !!! "

" ನನ್ನೂ ಮುಣಗನ ಬೇಕಂತೀ ಏನು ? ಛಲೋ ಹೊಂಟ್ರ್ಯೀ ಮಕ್ಕಳ್ಯಾs ತಂತೀ ಕಡದ್ರs ಏನಾಗ್ತದೋ ? "

" ಸ್ವರಾಜ್ಯದ ದಾರಿ ಸಿಗ್ತದ, ಬ್ರಿಟಿಷರು ಓಡಿ ಹೋಗ್ತಾರ, **ಕ್ವಿಟ್ ಇಂಡಿಯಾ! ಕ್ವಿಟ್ ಇಂಡಿಯಾ!** "

"ಕಚೇರಿದು, ಬಡಕೋಬ್ಯಾಡಾ, ತಂತೀ ಕಿತ್ತಿದ್ರs ಸ್ಟೇಶನ್ ಸುಟ್ರs ಸ್ವರಾಜ್ಯ ಸಿಗ್ತದs ಮಗನs ಸುಡೋ ಮಗನs ಸುಡು. **ಕ್ವಿಟ್ ಇಂಡಿಯಾ ನs ಕ್ವಿಟ್ ಇಂಡಿಯಾ ನs** ?"

" ಹೌದು ! **ಕ್ವಿಟ್ ಇಂಡಿಯಾ** ! " ಆವೇಶದಿಂದ ಕೂಗಿದ, ಸಾಬರು ರೊಚ್ಚಿದರು, ಅರ್ಧ ದೇಹದ ಬಲವನ್ನೇ ಉಪಯೋಗಿಸಿ ಹೊಡೆದರು ಕೈದಿ ಉರುಳಿದ. ಬಡಿತ ಬಿದ್ದಂತೆ '**ಕ್ವಿಟ್ ಇಂಡಿಯಾ**' ಎಂದು ಕೂಗುತ್ತಲಿದ್ದ ಸಾಬರು ಘಾಬರಿಯಾದರು ಕೈದಿ ಮಿಸುಗದೇ ಅಲುಗದೇ ಬಿದ್ದ. ಸಿಪಾಯಿಗಳು ಹೆದರಿದರು. ಸಾಬರು ನೀರು ತರಿಸಿ ನೆತ್ತಿಗೆಬಡಿದರು.

ವಿಕ್ರಮನು ಕೈದಿ ಉರುಳುವಾಗಲೇ ಮೂರ್ಛಿತನಾಗಿದ್ದ. ಅವನ ಆರೈಕೆ ಗಂಟೆಯು ಬಡಿತವೇ ಮಾಡಿತು. ಒಂದು ಬಾರಿಸಿತು, ಕೈದಿಯನ್ನು ಹೊತ್ತು ತಂದು ನರಕ-ನಂಬರ ಮೂರರಲ್ಲಿಡುವುದನ್ನು ಕಂಡ. ಸತ್ತನೇ? ಪ್ರಜ್ಞೆ ತಪ್ಪಿದೆಯೋ? ವಿಕ್ರಮನು ವಿಚಾರಕ್ಕೆ ಒಳಗಾದ. ಮೊದಲೇ ಹೇಳಿದ್ದರೆ, ಹಟ ತೊಡದಿದ್ದರೆ, ತೊಂದರೆಗೆ ಕಾರಣವೇ ಇರಲಿಲ್ಲವೆಂದ, ತಾನಾಗಿದ್ದರೆ ಇದ್ದುದನ್ನು ಇದ್ದಂತೆಯೇ ಹೇಳಿ ಪಾರಾಗುತ್ತಲಿದ್ದೆ, ಎಂದುಕೊಂಡ. ಅವನಸ್ಥೈರ್ಯ ಧೈರ್ಯ ಕಂಡು ನಿಜವಾಗಿ ದೇಶಸೇವಕ, ತ್ಯಾಗಿ, ಇವನಂತಹ ಸಾವಿರ ಜನರಾದರೆ ಸಾಕೆಂದೂ ತನ್ನ ಯೋಗ್ಯತೆ........

ಕೈದಿ ನೋವಿನ ತಾಪಕ್ಕೆ ಅಳುತ್ತ ನರಳುತ್ತಲಿರುವುದು ವಿಕ್ರಮನಿಗೆ ಕೇಳಿತು. ಸಾಬರ ಕೋಪ ಶಾಂತವಾಗಿರಲಿಲ್ಲ ಇನ್ನೂ, ಓಡಿ ಬಂದು ಕೈದಿಯ ಕೊಠಡಿಯ ಬದಿನಿಂತು. "ತಂತೀ ಕಡದ್ರs ಸ್ವರಾಜ್ಯ ಸಿಗ್ತದs ಮಗನs ಎಂದು ನಡೆದರು."

## ಏನು ? ಯಾರು??

ತಂತಿ ಕಡಿದ ಭಾರತಪ್ಪನಂತೆ ತಾನೂ ಆಗಲೇ ಬೇಕೆಂದು ನಿರ್ಧರಿಸಿದ. ವೀರ ಚರಿತ್ರೆಗಳನ್ನು ಸ್ಮರಿಸಿದ. ಅಂದಿನ ವೀರರನ್ನು, ಅವರ ಧೀರೋದಾತ್ತ ಕಥೆಗಳನ್ನು ನೆನೆದ. ಇಂದಿನ ವೀರರ ಕೃತಿಗಳು ಹಿಂದಣ ಹಿರಿಯರಿಗೂ ಶ್ರೇಷ್ಠತರವಾದುದೆಂದ. ವಿಕ್ರಮನೂ ಐತಿಹಾಸಿಕ ಕತೆ ಬರೆದಿರುವ. ನಾಟಕ ರಚಿಸಿರುವ; ಬರೆಯುವಾಗ ಯೋಧನಾಗಿರುತ್ತಲಿದ್ದ. ಅನಂತ ಧನ್ಯವಾದಗಳನ್ನು ಕುಳಿತಲ್ಲಿಯೇ ತಂತಿಯ ಕೈದಿಗೆ ಅರ್ಪಿಸಿದ. ಅವನನ್ನೇ ನಾಯಕನನ್ನಾಗಿ ನಾಟಕ ಬರೆಯಲೇಬೇಕೆಂದು ಮನದಲ್ಲಿಯೇ ಎಣಿಕೆ ಹಾಕಿದ. ಮನೆಯ ವಿಚಾರವು ಮಾಯವಾಗಿ ಎದುರಿಗೆ ತಂತಿಯ ಕೈದಿ ನಿಲ್ಲುತ್ತಿದ್ದ. ವಿಚಾರ ಪ್ರವಾಹದಲ್ಲಿ ಧುಮುಕಿದ ವಿಕ್ರಮ. ಉಳಿದ ಕೈದಿಗಳು ನಿಶ್ಚಿಂತತೆಯಿಂದ ನಿದ್ರಿಸುವುದನ್ನು ಕಂಡು ಅಚ್ಚರಿಯಾಯಿತು

ವಿಕ್ರಮನಿಗೆ ಬದಿಯಲ್ಲಿಯೇ ದುರಂತ ನಡೆದಿರುವಾಗ....ನರಕದ ನಿತ್ಯದ ಜೀವನದಲ್ಲಿ ತಾದಾತ್ಮ್ಯತೆಯನ್ನೇ ತಳೆದಿರಬಹುದು, ತನ್ನಂತೆ ಮೊದ ಮೊದಲು ಹೆದರಿರಲೂ ಬಹುದು. ಕನಿಕರದಿಂದ ಕಣ್ಣೀರು ಕರೆದಿರಲೂ ಬಹುದೆಂದ. ದಿನವೂ ಹೆಣಕಾಣುವವರ ಕಣ್ಣೀರು ಅಡಗುವುದೂ ಸಹ-ಜವೆಂದುಕೊಂಡ.

ತಗಣಿ ಗುಂಗಾಡುಗಳು ಮನಸ್ವೀ ಒಡಲನ್ನು ತುಂಬಿಕೊಂಡು ತೇಗಿರಬೇಕು. ವಿಶ್ರಾಂತಿಗಾಗಿ ತೆರಳಿರಬೇಕು, ಇಲ್ಲವಾದರೆ ವಿಕ್ರಮನು ನಿದ್ರಿಸುತ್ತಿರಲಿಲ್ಲ. ಗಂಟೆಗಳು ನಿಯಮದಂತೆ ಬಡಿಯುತ್ತಲಿದ್ದವು. ಕೆರವಿನ ತುಳಿತ ಸರಾಗವಾಗಿ ಸಾಗುತ್ತಲಿದ್ದಿತು. ಭಾರತಪ್ಪನು ಬಡಿತದ ನೋವನ್ನು ತಾಳದೇ ನರಳಿ ಹೊಯ್ದಾಡುತ್ತಲಿದ್ದ.

ಲೋಕವು ಬೆಳಗಿತು. ಲಾಕಪ್ಪುಗಳಲ್ಲಿಯ ಕೈದಿಗಳು ಎಚ್ಚತ್ತರು. ಪೋಲಿಸರು ಒಂದೊಂದೇ ಲಾಕಪ್ಪಿನ ಬಾಗಿಲು ತೆರೆದರು. ಕೈದಿಗಳು ರಾತ್ರಿಯಲ್ಲಿ ವಿಸರ್ಜಿಸಿದ ಮಲಮೂತ್ರದ ಗಡಿಗೆಗಳನ್ನು ಎತ್ತಿ, ಬಾಗಿ ಹೊರಗೆ ಬಂದರು. ಗಾಂಧಿಟೊಪ್ಪಿಗೆಯವರು, ರುಮಾಲಿನವರು, ಬಾಲಕರು, ಮುದುಕರು, ತರುಣರು ಲಾಕಪ್ಪಿನಿಂದ ಹೊರ ಬಂದು, ಗಾಳಿಗೆ ಮೈಯೊಡ್ಡಿದರು. ೧೦ಫೂಟು ಉದ್ದವಿರಬಹುದಾದ ಕಬ್ಬಿಣದ ಸಲಾಖಿ. ಸಲಾಖಿಯಲ್ಲಿಯ ಬೇಡಿಗಳು ಕೈದಿಗಳ ಕೈಗಳನ್ನು ಅಂಟಿದುವು ಇಪ್ಪತ್ತು ಕೈದಿಗಳು, ಎದುರು ಬದುರಾಗಿ ಸಲಾಖಿಗೆ ಬಂಧಿತರಾದರು. ಕೆಲವರ ಎರಡೂ ಕೈಗಳು ಬೇಡಿಗಳನ್ನು ಕಂಡುವು. ರಟ್ಟೆಗೆ, ಟೊಂಕಕ್ಕೆ ಹಗ್ಗ ಬಿಗಿದರು ಸಿಪಾಯಿಗಳು, ನೀರು ತುಂಬಿದ ಚಿಕ್ಕ ಗಡಿಗೆಗಳು ನಾಲ್ಕಾರು ಕೆಲವರ ಕೈಗಳಲ್ಲಿವ. ಜಮಾದಾರರು ಲಾಕಪ್ಪುಗಳು ಭದ್ರವಾದುದನ್ನು ಮನವರಿಕೆ ಮಾಡಿಕೊಂಡರು. ಕೈದಿಗಳೊಡನೆ ಪ್ರಯಾಣ ಬೆಳಸಿದರು.

ಕೈಸಲಾಖಿಯ ಮನ್ನಣೆ ತಪ್ಪಿದುದಕ್ಕಾಗಿ ಸಂತಸಗೊಂಡ. ಒತ್ತಾಯವಿಲ್ಲದುದಕ್ಕೆ ಕೃತಜ್ಞತೆ ಸಮರ್ಪಿಸಿದ. ನಿನ್ನಿನರಾತ್ರಿ ಊಟಮಾಡದಿ-ದ್ದುದೇ ವಿಹಿತವಾಯಿತೆಂದ. ಹೊಟ್ಟೆಯು ಭಾರವಾಗಿದ್ದರೆ ಸಲಾಖಿಗೆ ಅನಿವಾರ್ಯವಾಗಿ ಶರಣೆನ್ನಲೇ ಬೇಕಾಗುತ್ತಿದ್ದಿತು, ವಿಕ್ರಮನು ಕಣ್ತುಂಬ

ಕೊಠಡಿಯನ್ನು ನೋಡಿದ. ಗಡಿಗೆ ಇರಿಸಲಾಗಿದ್ದ ಮೂಲೆ, ಗೋಡೆಯ ಬಿರುಕಿನಲ್ಲಿಯ ತಗಣಿ, ನೆಲದ ಹೊಲಸು, ಜೇಡುಗಳ ಜಾಲ, ಕೈದಿಗಳು ಉಗುಳಿದುದು, ಅಡಿ ಎತ್ತಿ ಇಡಲು ನಡುಗಿತು ಮೈ. ತಾದಾತ್ಮ್ಯಭಾವ ತಳೆಯಲೇ ಬೇಕೆಂದ. ರೂಢಿಸಿದಭಟನಾಗಲೇಬೇಕು. ಕೈದಿಗಳು ಬರುವು ದರಲ್ಲಿ ಕಸಗೂಡಿಸಿ ಚೊಕ್ಕಾಟವಾಗಿರಿಸುವ ವಿಚಾರವು ಒಮ್ಮೆ, ತನ್ನಂತ ಹನು ಬೇಡವೆಂದು ಒಮ್ಮೆ, ಹೊಯ್ದಾಡಿತು ಮನಸ್ಸು.

ಕೊಠಡಿಯು ಚೊಕ್ಕಟವಾಯಿತು. ಕಸಮೂಲೆಗೆ ಬಂತು. ಜೇಡಿ ಮಾಯವಾಯಿತು. ಅಂಟಿದ ಉಗುಳನ್ನು ಪೊರಕೆಯಿಂದ ತಿಕ್ಕಿ ತೆಗೆದ. ತಗಣಿಗಳನ್ನು ಮನೆಬಿಟ್ಟು ಮಸಗೆ ಕಳಿಸಿದ, ಹುಳಗಳನ್ನು ಓಡಿಸಿದ. ಮನಕ್ಕೆ ಸಮಾಧಾನವಾಯಿತು ವಿಕ್ರಮಸಿಗೆ---

ಕೈ ಸಲಾಖಿಯ ಕೈದಿಗಳು ತೊಳೆದ ಗಡಿಗೆಗಳೊಡನೆ ಬಂದರು. ಲಾಕಪ್ಪುಗಳಲ್ಲಿ ಹೊಕ್ಕರು. ಜಲಕಕ್ಕೆ ಕರೆಯೊಯ್ಯಲು ಅಲ್ಪೊರೆದರು, ಮುಖ ತೊಳೆಯಲು ನೀರಾದರೂ ದೊರೆಯಲೀ ಎಂದರು. ಜಮಾದಾರರ, ಸಿಪಾಯಿಗಳ ಕಾವಲಿನ ಸರತಿ ಬದಲಾಯಿತು. ಗಡ್ಡದ ಸಾಬರ ಕೈಗ ಅಧಿಕಾರ ಬಂದಿತು. ಕೈದಿಗಳ ಎಣಿಕೆಯೂ ಆಯಿತು. ರಾತ್ರಿ ಜಮಾ ದಾರರು ನಿದ್ರೆಯ ಅಮಲಿನಲ್ಲಿ ಕಾಲುಕಿತ್ತಿದರು. ಜೇರೊಬ್ಬ 'ಗಂಡ ಬಂದು ದಕ್ಕೆ ವಿಕ್ರಮನು ಚಿಂತಿಸುತ್ತಲಿದ್ದ.

ರಾತ್ರಿಯ ಮಬ್ಬೋ ರಾತ್ರಿ ಜಮಾದಾರರ ಹೆದರಿಕೆಯೋ ತಿಳಿಯದು; ಮೌನರಾಗಿದ್ದ ಕೈದಿಗಳೆಲ್ಲ ಗಡ್ಡದ ಜಮಾದಾರನನ್ನು ಕರೆಯುತ್ತಲಿದ್ದರು. ಅವನೊಡನೆ ಸರಸವಾಗಿ ಮಾತನಾಡುತ್ತಲಿದ್ದರು. ಬೀಡಿ ಬೇಡಿದರು. ನಗುತ್ತಕೊಡುತ್ತಲಿದ್ದ. ಎಲ್ಲ ಕೈದಿಗಳ ಹೆಸರುಗೊಂಡು ಕ್ಷೇಮ ವಿಚಾರಿ ಸುತ್ತಿದ್ದ. ಜಲಕದ ಬೇಡಿಕೆ ಸರ್ವಾನುಮತದಿಂದ ಮುಂದಿರಿಸಿ ದರು. 'ತಥಾಸ್ತು' ಎಂದ ಕೊಡಹೊತ್ತು ಕೈದಿಗಳು ಸಿಪಾಯಿಗಳ ಕಾವಲಿನಲ್ಲಿ ಜಲಕಕ್ಕೆ ನಡೆದರು. ವಿಕ್ರಮನೂ ಅವರೊಡನಿದ್ದ! ಕೈಸಲಾಖಿ ಬೇಡಿ! ಇಲ್ಲವೇ ಇಲ್ಲ. ಚಕ್ಕಂದದ ಹರಟೆ, ಕೈದಿ ಗಡ್ಡದ ಸಾಬರ ನಡುವೆ.

ಕಚೇರಿಯ ಹಿಂಬದಿಗೆ ಸೇದುವ ಬಾವಿ, ಬಾವಿಯ ಬದಿಯಲ್ಲಿ ಕೈ ತೋಟ. ತೋಟದ ಎದುರೇ ಸಿಪಾಯಿಗಳ ವಸತಿ. ಕೈದಿಗಳ ಜಲಕ ಅಲ್ಲಿ.

ಜಳಕ ತೀರಿಸಿ, ಕೈದಿಗಳು ಗೂಡನ್ನು ಸೇರಿದರು. ವಿಕ್ರಮನಿಗೆ ನಿಲ್ಲಲು ಗಡ್ಡದ ಜಮಾದಾರರ ವಿನಂತಿಯಾಗಿದ್ದಿತು. ವಿನಂತಿಯು ಗಂಡಾಂತರವನ್ನೆಲ್ಲಿ ತರುವುದೋ ಎಂದು ಭೀತನಾದ. ರಾತ್ರಿ ಅಲ್ಲವಾದುದರಿಂದ ಸಾಬರು ಹೇಳಿರಲಿಕಿಲ್ಲವೆಂದ. ಭಾರತಪ್ಪನಂತೆ ತನಗೂ ಒದೆಗಿದರ? ಏನೇನೋ ಕಲ್ಪಿಸಿದ. ಗಡ್ಡದ ಜಮಾದಾರರು ಕೈದಿಗಳನ್ನು ಗವಿಹೊಗಿಸಿ, ವಿಕ್ರಮನೆಡೆಗೆ ಬಂದರು. ತಾವು ಕುಳಿತುಕೊಳ್ಳುವ ಆಸನವನ್ನೇ ಆದರದಿಂದ ನೀಡಿದರು. ಸತ್ಕಾರದ ಮರ್ಮವೇ ತಿಳಿಯದಾಯಿತು ವಿಕ್ರಮನಿಗೆ. ಹೆಬ್ಬಾಗಿಲನ್ನೇ ದಿಟ್ಟಿಸುತ್ತಿದ್ದ. ಯಮಧರ್ಮರು ಕೋಣಾರೋಹಿಗಳಾಗಿ ಬರುವವರೇನೋ ಎಂದು !! ಗಡ್ಡದ ಸಾಬರ ನಯ ವಿನಯಗಳು, ಬರಲಿರುವ ದುರಂತದ ಪೂರ್ವ ಚಿಹ್ನಗಳೆಂದು ಮನಗಂಡ.

ಗಡ್ಡದ ಸಾಬರು ಕಾಗದ ಪತ್ರಗಳ ಪೆಟ್ಟಿಗೆ ತೆಗೆದು, ಡಬ್ಬಿಯನ್ನು ಮುಚ್ಚಿತಂದು, ವಿಕ್ರಮನ ಕೈಗಿತ್ತರು.

"ನಿಮ್ಮ ದೋಸ್ತ ತಂದಿಟ್ಟಾರ ಫರಾಳ ಮಾಡ್ರಿ"

"ಯಾರೂ"?— ನಾಶಂಕಿತನಾಗಿ ಕೇಳಿದ

"ಕರೀತೀನ್ನಿಂದರ್ರೀ" ಎಂದು ಪೋಲಿಸನಿಗೆ ಸೂಚನೆಗೈದರು. ಕಚೇರಿಯಬಳಿಸುಳಿಯುತ್ತಿದ್ದ ವಿಕ್ರಮನ ದೋಸ್ತ ಬಂದ. ವಿಕ್ರಮನ ಬದಿಯಲ್ಲಿ ಕುಳಿತ, ಬೇಕಾದಂತೆ ಮಾತಾಡಲು ಧೈರ್ಯವಿತ್ತರು. ತಂದುದನ್ನು ಮೊದಲು ತಿನ್ನಲು ಗಡ್ಡದವರ ವಿಶೇಷ ಆಗ್ರಹವಾಯಿತು. ವಿಕ್ರಮನು ಅವರನ್ನೂ ಆಮಂತ್ರಿಸಿದ ಮೂವರ ಪಂಕ್ತಿ ಪ್ರಾರಂಭವಾಯಿತು. ಉಂಡಿ, ಇಡ್ಲಿ, ಅವಲಕ್ಕಿ, ಗಡ್ಡದವರು ದೋಸ್ತ ಶಾಸ್ತ್ರಕ್ಕೆ ಕೈನೀಡಿದರು. ಎಲ್ಲವನ್ನೂ ವಿಕ್ರಮನೇ ತಿಂದ. ನೀರು ಕುಡಿದ. ರಾತ್ರಿ ಅನ್ನವಿಲ್ಲದುದಕ್ಕೆ ಹಸಿದಿದ್ದ ಗೆಳೆಯನು ವಿಕ್ರಮನಪ್ರಿಯವನ್ನು

ವನ್ನು ತರಲು ಮರೆತಿರಲಿಲ್ಲ. ಗಡ್ಡದವರೂ ವಸ್ತುವಿನ ಭಕ್ತರೇ? ಮೂವರೂ ತಂಬಾಕನ್ನು ತುಂಬಿದರು ಗೆಳೆಯರು ಮಾತನಾಡದೇ ಕುಳಿತುದನ್ನು ಕಂಡು, ನಿರ್ಭಯವಾಗಿ ಮಾತನಾಡಲು ಹೇಳಿ, ಗಡ್ಡದವರು ಕೈದಿಗಳನ್ನು ಮಾತನಾಡಿಸುತ್ತ ತಿರುಗ ತೊಡಗಿದರು.

"ಊರ ವಾತಾವರಣ ಹ್ಯಾಂಗದರೀ?"

"ಈಗವಕಾ ನಿಮ್ಮ ಬಂಧನದ ಸುದ್ದಿನೇ ಸುದ್ದಿ"

"ಬುಲೆಟಿನ್ನೂ ನಮ್ಮನ್ಯಾಗ ಹ್ಯಾಂಗಬ್ಬಂದ್ವೊ"

"ಜ ಜೇನ್ನ ಗದ್ದಮೂ. ಅವನೇ ತಂದಿಟ್ಟಾನಂತs ದಟ್ಟ ವಾರ್ತೆ ಆದ" "ಹ್ಯಾಂಗs ತಂದಿಟ್ಟಾs ಅಂತೀರಿ?"

"ನೀವಿದ್ದರೇನೂ! ಅನಕೋತs ಅಟ್ಟಾಹತ್ತೀ ತೆಳಗಬಂದಾನ, ಆ ಮ್ಯಾಲೇ ಪೋಲಿಸ್ರೂ ಬಂದದ್ದು "ಮನೀಯವರಿಗೆ ಹ್ಯಾಂಗ್ತಿಳೀಲಿಲ್ಲಾ? ಮ್ಯಾಲೆ ಹ್ಯಾಂಗ ಬಿಟ್ರೊs?"

"ನಿಮ್ಮನೀಅಂದ್ರs ಬರೂ ಅವರುಎಷ್ಟೋ! ಹೋಗೋ ಅವರು ಎಷ್ಟೋ! ಹ್ಯಾಂಗ ಕೇಳ್ತಾರs? "ಬಿ. ಜೇ. ಬಂದ್ರs ಸಂಶಯ ಬರಲಿಲ್ಲ?"

"ಪೋಲೀಸಡ್ರೆಸ್ಸು ಹಾಕಿದ್ದಿಲ್ಲಾಅನಾ ಹ್ಯಾಂಗ ಸಂಶಯ ಬರಬೇಕು. ಎಲ್ಲರೂ · ಕೆಲಸದಾಗಿದ್ರೂ, "ತಪ್ಪೇನಾತು ಬಿಟ್ರಿ ಇನ್ನೂ ಅವಧಿ ಬೇಕಾಗಿತ್ತು ಒಂದಿನ್ನ ಬರೂದೇ ಇತ್ತು ಬಂತು."

"ಪ್ರಯತ್ನ ಮಾಡೂದೂ ನಿರ್ಧಾರ ಮಾಡೀವಿ. ಎಲ್ಲಾರ್ದೂ ಅಭಿಪ್ರಾಯು ಒಂದೇ ಅದ," ವಕೀಲೀ ಪತ್ರಕ್ಕೆ ಸಹಿ ತಗೊಳ್ಳಿರೀ ಹಂಗಾರ." "ಕಚೇರಿ ವ್ಯಾಳ್ಯಾಕ ಬರ್ತೀನಿ."

ತನಗೆ ಬೇಕಾದುವೆಲ್ಲವನ್ನೂ ಕೇಳಿದ ವಿಕ್ರಮ. ವಕೀಲರು ಸಮರ್ಪಕ ಸಮಾಧಾನವಾಗುವ ರೀತಿಯಲ್ಲಿ, ಸಂಕ್ಷೇಪವಾಗಿ ವಿವರಿಸಿದರು ಮತ್ತೆ ತಂಬಾಕನ್ನು ತುಂಬಿ ಮಾತು ಎತ್ತಿದರು 'ಅದು ಸುರಕ್ಷಿತ ಅದs ಇಲ್ಲೋ?" ತಮ್ಮ ಸಮಾಚಾರವೆಲ್ಲಾ ಪ್ರಕಟ ಮಾಡಿ, ಸುರಕ್ಷಿತ ಇದ್ದೀನಿ ಅಂತ ಹೇಳಿ, ನಿಮ್ಮ ಸಾಹೇಬರಿಗೆ ತಿಪ್ಪಾನ ಕೊಟ್ಟೆನ,

"ಯಾರದ್ರೀ ಇದೆಲ್ಲಾ ನಿಮ್ದೇ ಇರಬೇಕು?" "ಲೇಖಕನಾನು ಮುದ್ರಕರೂ, ಪ್ರಕಾಶಕರೂ, ತಮ್ಮ ತಂಗೀ" ನೋಡಿ ಮಾಡ್ರೆಪಾ ಹೆಣ್ಮಕ್ಳ ಕೆಲಸಾ".

"ಬಲೆ ಘಟ್ಟಿ ಬಿಡು! ಬಾಣಂತೀ ತಾ ನೋಡಿದ್ರ, ಐದು ಸಾವಿರ ಪ್ರತೀ" "ವಾಚಕರ ಸಂಖ್ಯಾ ಹೆಚ್ಚಾತೇನು?"

'ತಮ್ಮ ಬಂಧನದ ಪ್ರತಾಪೆಂಥಾದು. ಒಂದ್ಸೇಳೂದೂ ಮರೆತೇ ಬಿಟ್ಟೆ! ಧೀರೂ ಮಾಮಾ ಫರಾರ್‍ಯಾದ್ನಂತ!! ನಿನ್ನೆ ರಾತ್ರೀ "ಯಾಕ್ರೀ" ತನ್ನೂ ಹಿಡೀತಾರಂತ ಮಾಮಾ ಬಂದು ಹೇಳಿದಾ. ಹೇಣ್ತಿನ್ನ ಕಟಗೊಂಡು ಕೊಪ್ಪಳಕ್ಕ ಜಿಗಿತಾ ಕೊಟ್ನಂತ," ನಗುತ್ತಾ ಹೇಳಿದರು.

ವಕೀಲರಿಂದ ಮನೆಯ ಸಂಗತಿ ಕೇಳಿ ಕಳವಳಿಸಿದ. ತಂಗಿಯು ಧೈರ್ಯ ಹೇಳುತ್ತಲಿರುವುದರಿಂದಲೇ ತಾಯಿ ಉಳಿದುದೆನ್ನು ಕೇಳಿದ. ವಿಕ್ರಮನು ಬಂದ ನಂತರ ಪ್ರಜ್ಞೆ ತಪ್ಪಿದುದು, ಹೆಂಡತಿ ಗಾಬರಿಯಾಗಿ ಕೇರಿಯವರನ್ನು ಅಳುತ್ತ ಕರೆದುದು, ಎಚ್ಚರಾದಾಗಿನಿಂದ ತಂಗಿ ಸಮಾಧಾನಗೊಳಿಸುತ್ತಲಿರುವದನ್ನೆಲ್ಲ ಚಿತ್ರಿಸಿದರು. ವಿಕ್ರಮನು ದಿನಕ್ಕೊಂದು ಸಲವಾದರೂ ತನ್ನ ಮನೆಗೆ ಹೋಗಿ, ಎಲ್ಲರನ್ನೂ ಸಮಾಧಾನಗೊಳಿಸಲು ಬಿನ್ನವಿಸಿದ. ತನ್ನ ಒಂದು ದಿನದ ಅನುಭವನ್ನು ತೋಡಿಕೊಂಡ, ಗಡ್ಡದ ಸಾಬರು ಗೆಳೆಯರ ನಡುವಿದ್ದ ಎಲೆ ತೆಗೆದುಕೊಳ್ಳುತ್ತ ನಮ್ರೀಯ ಭಾವದಿಂದ ಬೇಡಿಕೊಂಡರು. 'ಸಾಹೇಬರೂ ಬರೂ ಹೊತ್ತಾಗೇದ್ರಿ ಅದಕ್ಕ ನನ್ನ ಪಾಳೀ ಇದ್ದಾಗ ಬೇಕಾದಾಗ ಬರ್ರಿ' 'ಹಂಗೇ ಮಾಡ್ರಿ. ಪೋಲಿಸ್ರೊಳಗ ನಿಮ್ಮಂಥವರು ಸಿಗೂದಿಲ್ಲ ಬಿಡ್ರಿ," ವಿಕ್ರಮನ ಗೆಳೆಯನೆಂದ.

'ಎಲ್ಲರೂ ಪ್ರೀತಿ ಮಾಡ್ತಾರ' ವಿಕ್ರಮನೆಂದ, 'ನಾವೇನು ಕಟಗೊಂಡ್ಹೋಗ್ತಿವೀ; ಚಲೋ ಕೆಟ್ಟಾ ಎರಡೇ ನೋಡ್ರೀ ಬರೂವು.'

'ನಾ. ಮಾತ್ರ ಕೆಟ್ಟ ಮಾಡೂದುಲ್ಲಾ. ಆಗ್ತಿದ್ದ ಛಲೋದೇ ಮಾಡೂದು,' ಸಾಬರು ಆತ್ಮಸ್ತುತಿ ಮಾಡಿಕೊಂಡರು. ವಿಕ್ರಮನಂತೆ

ವಕೀಲರೂ ಪುಷ್ಟಿ ತುಷ್ಟಿಗಳನ್ನಿತ್ತರು. ದೇವರಂತಹ ಮನುಷ್ಯರೆಂದರು. ಸುಪ್ರೀತರಾಗಿ ಗಡ್ಡದ ಸಾಬರು ತಮ್ಮ ಬಾಲ್ಯ, ಯೌವ್ವನದ, ವೃದ್ಧಾಪ್ಯದ ಮಹತ್ವದ ಪುಟಗಳನ್ನು ತಿರುವಿ ತೋರಿದರು. ಎಲ್ಲರಿಂದ ಹೊಗಳಿಸಿಕೊಂಡುದುದನ್ನು, ಜನಮನ್ನಣೆ ದೊರೆತುದುದನ್ನು ಶ್ರುತಪಡಿಸಿದರು. ಶ್ರೋತೃಗಳೆಲ್ಲರೂ ತಲೆದೂಗಿ 'ಭಲೆ! ಭಲೆ!' ಎಂದರು. ಕೈದಿಗಳ ಕೂಳು ಬಂದುದರಿಂದ ಸಾಹೇಬರ ಸಭೆ ವಿಚ್ಛೇದಿಸಿತು. ವಕೀಲರಿಗೆ ಮರುದಿನ ಬರಲು ಔತಣವೂ ದೊರೆಯಿತು. ಬೇಕಾದುದೇ ಬದಿಯಲ್ಲಿದೆ ಎಂದು ಮನದಂದರು. ವಕೀಲರು ವಿಕ್ರಮನ ನಿರೋಪ ಪಡೆದು ಸಾಬರನ್ನು ಸಜ್ಜನರೆನ್ನುತ್ತ ಹೆಬ್ಬಾಗಿಲ ದಾಟಿದರು.

ಗಡ್ಡದವರ ಸರತಿ ಇರುವಾಗ ಹೊರಗಿರುವುದಕ್ಕೆ ವಿನಂತಿಆಗಿದ್ದಿತು. ಹಗಲು ಹೊರಗೆ, ರಾತ್ರಿ ಗವಿ. ವಿಕ್ರಮನು ತಂಬಾಕನ್ನು ಮೆಲ್ಲುತ್ತ ಕಾರಂಜಿ ಬಿಡುತ್ತ ಕುಳಿತಲ್ಲಿ ಕುಳಿತ. ಗಡ್ಡದ ಸಾಬರು ಕೈದಿಗಳಿಗೆ ಎಣಿಕೆಯಂತೆ ನಳಿಯ ಸಂದಿಯೊಳಗಿಂದ ರೊಟ್ಟಿ ಕೊಡಿಸಿದರು. ಬೇಳೆ ನೀಡಿಸಿದರು. ರೊಟ್ಟಿಗಳು ಬಹಳ ತೆಳ್ಳಗಿರುವುದರಿಂದ ,ಇನ್ನೂ ಬೇಕೆಂಬ ಗದ್ದಲ ಕೇಳಿಸಿತು. ರೊಟ್ಟಿ ತಂದವನು ಸಾಬರ ಸಲಹೆಯಂತೆ ಎಲ್ಲರಿಗೂ ಹೆಚ್ಚೆಂದು ಅರ್ಧ ಅರ್ಧ ಕೊಟ್ಟ.

"ಏ ಅಯ್ಯಾs ನಿನ್ನ ಹೆಂಡ್ರು ಮಕ್ಳು ಉಂಡು ಹೊತ್ತಾರಲೀ ಕವ್ಮೀ ನೀಡಿದೆಂದ್ರs" ಎಂದು ಒಬ್ಬ ಕೈದಿ ಕೂಗಿದ.

"ಶಾಪ ತಟ್ಟದೇ ಹೋಗ್ತದೇನು?" ಬೇರೊಬ ನುಡಿದ. "ಯಾಕ ಕಾಡ್ತೀರಿ ಬಿಡ್ರೀ ಸಿಮು, ಕೊಟ್ಟೇ ಕೊಡ್ತಾರ ಹೆಚ್ಚಿಗೆ ಅಲ್ಲೇನು." ಎಂದ ಶಾಂತಚಿತ್ತದವ.

"ಧರ್ಮಕ್ಕ ತಿಳದುಕೊಟ್ಟಷ್ಟು ಕೊಟ್ಲಿಬಿಡು," ಬೇರೊಬ್ಬ ನುಡಿದ.

"ಏನು ? ಧರ್ಮ ಎಲ್ಲಿದೋ ? ತಮ್ಮಪ್ಪನ ಮನೀದು ಕೊಡ್ತಾನೇನು ? " ರೊಚ್ಚಿನಿಂದ ನುಡಿದನೊಬ್ಬ.

" ಐನಾರs ಇವತ್ತ ಚೇಂಜಿನಾಗs ಏನೇನು ತರತೀರಿ. ಸೋಮವಾರಾ ನಂದು. ಒಂದ್ಹೊತ್ತೈತಿ. " ಒಬ್ಬನು ಬೇಡಿದ. 'ಸೆಂಗಾ

ಬೆಲ್ಲಾ ತರ್ರ್ತೀನಿ. ಆತಿಲ್ಲೊ' ಅಯ್ಯನವರೆಂದರು. ಸಾಬರ ಸೂಚನೆ ಯಂತೆ ಅಯ್ಯನವರು ಬರಿ ಬುಟ್ಟಿಯೊಡನೆ ಓಡಿದರು. ವಿಕ್ರಮನು ಕೈದಿ ಗಳ ಅರಹೊಟ್ಟೆಯ ಸಂಕಟ ಸ್ವರ ಕೇಳಿದ. ಅವರ ಕೃತಿಯನ್ನು ನಿಷೇ ಧಿಸಿದ. ತಿರುಕರಂತೆ ಕಾಡಿದುದು ವಿಕ್ರಮನಿಗೆ ಸರಿಎನ್ನಿಸಲಿಲ್ಲ. ಅಯ್ಯನ ವರು ಏನೂ ಮಾತನಾಡದೇ ಶಾಂತರಾಗಿ ನೀಡುತ್ತಲಿರುವಾಗ,ತಲೆತುಂಬ ಹಳಿದು, ಹೆಂಡರು ಮನೆ ನಾಶವಾಗಲೀ ಎಂದು ದಂತೂ. ತೀರ ಸಿಂದ್ಯ ಕರ್ಮವೆಂದ. ಇದ್ದುದರಲ್ಲಿಯೇ ತೃಪ್ತರಾಗಿರುವದೇ ಉತ್ತಮವೆಂದು ಅವನ ಅಭಿಮತ ತನ್ನ ಅಭಿಪ್ರಾಯಗಳನ್ನು ಗಡ್ಡದವರೆದುರು ಸಾರಿದ.

ಹೆಬ್ಬಾಗಿಲಿಂದ ನೂರಾರು ಕಂಬಳಿ ಹೊದೆದ ರೈತರು ಬರತೊಡ ಗಿದರು. ಸಿಪಾಯಿ ಓಡಿ ಹೋಗಿ ತರುಬಿದ. ಮಾಮಲೇದಾರರಲ್ಲಿ ಕಾಳಿನ ವಿನಂತಿಯ ಅರ್ಜಿಯನ್ನು ತಂದವರೆಂದುದಕ್ಕೇ ಪೋಲೀಸ ಓಂತಿರುಗಿದ. ರೈತರ ಗುಂಪು ಬರುತ್ತಲೇ ಇತ್ತು. ಕೆಲವರು ಮೈತುಂಬ ಕಂಬಳಿ ಹೊದೆದಿರುವರು ಕಂಬಳಿ ಹೆಗಲಿಗೆ ಹಾಕಿದವರು ಸಾಲಾಗಿ ಕಚೇರಿಯ ಎದುರು ಕುಳಿತರು. 'ಪ್ಯಾಪ್ಯಾ ಬಂದ್ನೇನೋ ಸಿದ್ದ? ಎಂದ ನೊಬ್ಬ. ಇಲ್ಲೇ ಅದೀನ್ರಿ ಹಿರೇರs.' ಎಂದು ಮಾತನಾಡುತ್ತಲೇ ಇದ್ದರು ಅವರ ಗದ್ದಲು ಸಿಪಾಯರ ಬೇದರಿಕೆಗೇ ನಿಂತಿತು. ಗಡ್ಡದವರು ತಂಬಾಕ ಸೇವನದಲ್ಲಿ ಮಗ್ನರಾದರು. ಸಿಪಾಯಿಗಳು ವಿಕ್ರಮನೊಡನೆ ಸವಿ ಸಂಭಾಷಣೆಗೆ ತೊಡಗಿದರು.

ರೈತರು ಹೆಬ್ಬಾಗಿಲನ್ನು ಇಕ್ಕಿದರು. ಮುಸುಕಿನ ಕೊಡಲಿಯನ್ನು ಎತ್ತಿದರು! ಕೆಲವರು ಖಡ್ಗ ಹಿರಿದರು. ಎಡದ ಕೈಯಲ್ಲಿ **ರಾಷ್ಟ್ರಧ್ವಜ!** ಮಾಮ್ಲೇದಾರರ ಕಚೇರಿಯ ಬಾಗಿಲು ಮುರಿಯಿತು '**ವಂದೇಮಾತರಂ**' ಎಂದು ಘೋಷಿಸಿದರು. ಸೀಪಾಯಿಗಳು ಹೌಹಾರಿದರು

ಸೀಟಿಯನ್ನು ಊದಿದರು. ಊದಿಯೇ ಊದಿದರು. ಎತ್ತ ನೋಡಿ ದರೂ **ರಾಷ್ಟ್ರಧ್ವಜ!** ಕತ್ತಿ! ಕೊಡಲಿ! **"ಕಾಂಗ್ರೆಸ್ ಸರಕಾರ ಜಿಂದಾ ಬಾದ"** ಎಂದು ಏಕ ಕಂಠದಿಂದ ಕೂಗುತ್ತಲೇ ಕಚೇರಿಯಲ್ಲಿ ನುಗ್ಗಿದರು. ಸಿಪಾಯಿ ಓಡಿ ಹೋಗಲು ಯತ್ನಸಿದ, **ಸ್ವತಂತ್ರ ದೇವಿಯ ಜಯ**

ಕಾರವು ದ್ವಿಗುಣಿತವಾಯಿತು. ಮೂವ್ವಿ ದಾರರಾದರು ರೈತರೇ. 'ಬ್ರಿಟಿಶರು ಭಾರತ ಬಿಟ್ಟು ಓಡಿಹೋದರು, ಕಾಂಗ್ರೆಸ್ ರಾಜ್ಯವಾಯಿತು. ನಾವು ಸ್ವತಂತ್ರರು. ಎಂದು ಘೋಷಿಸಿದರು, ಕಚೇರಿಯಲ್ಲೆಲ್ಲಾ ಧ್ವಜವನ್ನು ಪ್ರತಿಷ್ಠಾಪಿಸಿ ಓಡಿದರು. 'ಢಂ ಢಂ, ಎಂದಿತು. ಓರ್ವನು ಉರುಳಿದ ಉಳಿದವರು ಅವನನ್ನು ಎತ್ತಿ ಒಯ್ದರು. " **ವಂದೇಮಾತರಂ** " **ಕ್ವಿಟ್ ಇಂಡಿಯಾ ಕ್ವಿಟ್ ಇಂಡಿಯಾ** ಒಬ್ಬನೂ ಉಳಿಯದಂತೆ ಓಡಿದರು.

ಲಾಕಪ್ಪಿನಲ್ಲಿಯ ಕೈದಿಗಳೂ ಕುಣಿ ಕುಣಿದು **ಕ್ವಿಟ್ ಇಂಡಿಯಾ**, **ವಂದೇಮಾತರಂ** ಎಂದು ಹರ್ಷಭರಿತರಾಗಿ ಪ್ರತ್ಯುತ್ತರ ನೀಡಿದರು.

ವಿಕ್ರಮನು ಗಾಬರಿಗೊಂಡಿರಲಿಲ್ಲ " **ಕ್ವಿಟ್ ಇಂಡಿಯಾ** ಎಂದು ಹುಮ್ಮಸಗೊಂಡು. ಕೂಗಿದವರಲ್ಲಿ ಅವನೂ ಒಬ್ಬನಾಗಿದ್ದ ಗಡ್ಡದ ನಾಬರು ಅತ್ಯವಸರವಾಗಿ ವಿಕ್ರಮನನ್ನು ಲಾಕಪ್ಪಿನಲ್ಲಿ ತುರುಕಿದರು. ಬಡಿಗೆ ಬಂದೂಕುಗಳೊಡನೆ ಪೋಲೀಸರು ಓಡಿ ಬರುತ್ತಲಿದ್ದರು. ಏನಾಯಿತು ? ಯಾರು ? ಎಲ್ಲಿರುವರು ? ಎಂದು ಪ್ರಶ್ನಿಸಿ ಜನರು ಓಡಿದ ಕಡೆಗೆ ಓಡಿದರು. ಕೆಲ ಸಿಪಾಯಿಗಳು ರೈತರು ಅಲಂಕರಿಸಿದ ಧ್ವಜಗಳನ್ನು ಕಿತ್ತಿ ಚಲ್ಲಿದರು. ಬಂದೂಕನ್ನು ಕಳೆದುಕೊಂಡ ಸಿಪಾಯಿ 'ಬಂದೂಕ, ಹಮಾರಾ ಬಂದೂಕ ! ಹಮಾರಾ ಬಂದೂಕ !! ಎಂದು ಹುಚ್ಚನಂತೆ ಕಚೇರಿಯ ತುಂಬ ಕೂಗುತ್ತಾ ತಿರುಗಿದ. ಲಾಕಪ್ಪಗಳ ಮರು ನಿಂತು ಸ್ಮೃತಿಶೂನ್ಯನಾಗಿ ಬಂದೂಕ ! ಹಮಾರಾ !! ಹಮಾರಾ ಬಂದೂಕ ಎಂದು ಅರಚಿದ. "**ಕ್ವಿಟ್ ಇಂಡಿಯಾ**" ರಾಷ್ಟ್ರೀಯ ರೈತರು **ವಂದೇ ಮಾತರಂ** ಎಂದು ಗರ್ಜಿಸಿದರು. ಪೋಲೀಸರು ಓಡಿ ಬಂದು, ಓಡಿ ಹೋಗುತ್ತಲಿದ್ದರು. ಇನ್ನೂ ಬಂದವರು ಅತ್ಯಾಶ್ಚರ್ಯ ಪಟ್ಟು ಏನು ? ಯಾರು ? ಎಲ್ಲಿಗೆ ? ಎನ್ನುತ್ತಲಿದ್ದರು.

---

# ಡಿಸ್ ಮಿಸ್ ಆದೀರಿ ಸಾಹೇಬರ ಽ

ಸ್ವತಂತ್ರ ಕಚೇರಿಯ ಸಂದರ್ಶನದಿಂದ, ಪಾವನತೆ ಪಡೆಯಲು ಕಚೇರಿಯ ಎದುರು ಜನ ಕಲೆತಿದೆ. ಬಂದವರು ಯಾರು? ರೈತರೇ? ಕಂಬಳಿಯ ರೈತರಲ್ಲಿ ಇಂತಹ ಧೈರ್ಯ ಎಲ್ಲಿಂದ ಬಂದಿತು ? ಫರಾರಿಯಾದ ಮುಖಂಡರು ಗುಂಪನ್ನು ಕಟ್ಟಿಕೊಂಡು ಬಂದಿರಬಹುದೇ ? ರೈತರಲ್ಲಿ ಸಂಘಟನೆ ಗೈದರೇ ? ರೈತರೇ ನಿಜವಾಗಿದ್ದಲ್ಲಿ ಭಾರತದ ಭಾಗ್ಯದ ಬಾಗಿಲು ತೆರೆಯಿತೆಂದರು. ಬೋಸರ ಪಕ್ಷದವರಿಂದಲೇ ಜರುಗಿದೆ ಎಂದು ಕೆಲವರವಾದ. ದೇಶದಾದ್ಯಂತವೂ ಬೋಸರ ಪರಿವಾರವಿದೆ. ಅವರಿಂದಲೇ ಸ್ವತಂತ್ರ ಕಚೇರಿಗಳು ನೆರೆದಿವೆ ಎಂದರು. ಚಿತಗಾಂಗದಲ್ಲಿ ವೈಮಾನಿಕ ದಾಳಿ ಕೈಕೊಂಡ, ಸುಭಾಸ ಸೈನಿಕರೇ ರೈತರ ವೇಷ ಧರಿಸಿ ಬಂದಿರಲೇಬೇಕೆಂದು ಕೆಲವರು ಸಿದ್ಧಾಂತ ಮಾಡಿದರು. ಸಾವಿ

ರಾರು ಜನ ಕಲೆತಿತು ಅಲ್ಲಿ ಇಲ್ಲಿ ಕಾಣುವ ಕಚೇರಿಯ ರಾಷ್ಟ್ರಧ್ವಜ ಗಳಿಗೆ ಮನಸಾ **ವಂದಿಸಿದರು.** ಊರ ತುಂಬ ವಾರ್ತೆ ಪಸರಿಸಿರಲೇ ಬೇಕು. ಬ್ರಿಟೀಶರು ಜರ್ಮನರಿಂದ ಸೋತರಂತೆ ! **ಭಾರತ ರಾಷ್ಟ್ರವು** ಸ್ವತಂತ್ರವಾಯಿತು. ಕಚೇರಿ ಟ್ರೇಝರಿಗಳು, ರಾಷ್ಟ್ರೀಯ ಸೈನಿಕರ ವಶವಾದುವು ಪೋಲೀಸರು ಓಡಿದರು· ತುರಂಗಗಳಿಂದ ಮುಖಂಡರೆಲ್ಲ ಪಾರಾದರು ತುದಿ ಕೊನೆ ಇಲ್ಲದವಾರ್ತೆ ಹರಡಿದುದಕ್ಕೆ ಸಮೂಹ ನೆರೆ ಯಿತು. ಪುಂಡರ ಹಾವಳಿ ಎಂದು ಕೆಲವರು. ಬ್ರಿಟೀಶರ ಪುಣ್ಯದ ಭಾಗ್ಯ ತೀರಿಲ್ಲ. ಸೋತಿಲ್ಲ. ಸೋಲಲಾರರು, ಎಂದು ಕೆಲವರ ಅಭಿಪ್ರಾಯ. ಲಾಕಪ್ಪುಗಳಲ್ಲಿ ಕೈದಿಗಳ ಉತ್ಸಾಹಕ್ಕೆ ಎಲೆಯೇ ಇಲ್ಲ. ಬಿಡುಗಡೆಯಾಗು ವುದೆಂದು ಕೆಲವರು. ತಿರುಗಿ ಗುಂಪು ಬರುತ್ತಿದೆ. ಲಾಕಪ್ಪುಗಳನ್ನು ಒಡೆದು ಬಿಡುಗಡೆ ಮಾಡುತ್ತಾರೆ. ಅವರನ್ನು ಕೂಡಿ, ತಾವೂ ಬೇರೆ ಊರ ಕಚೇರಿ ಯನ್ನು ವಶಪಡಿಸಿಕೊಳ್ಳುವೆನೆಂದು ಉತ್ಸಾಹಿತರಾಗಿ ಗುಂಪಿನ ದಾರಿ ಕಾಯುತ್ತ **'ವಂದೇ ಮಾತರಂ'** ಎಂದು ಜಯ ನಿನಾದ ಮಾಡಿದರು.

ಲಾಕಪ್ಪಿನ **'ವಂದೇ ಮಾತರಂ'** ಕಚೇರಿಯ ಎದುರು ನೆರೆದ ಜನಕ್ಕೆ ಕೇಳಿಸಿತು. ಜನರು ಪ್ರತ್ಯುತ್ತರ ನೀಡಿದರು. ಭಗ್ನ ಮನೋರಥ ರಾದ ಸಿಪಾಯಿಗಳು ಜನಜಂಗುಳಿಯ ಮೇಲೆ ರೇಗಿದರು ಚದುರಲು ಎಚ್ಚರ ನೀಡಿದರು. **ರಾಷ್ಟ್ರದೇವಿಯ ಜೈಜೈ**ಕಾರವು ಕಡಲ ತೆರೆಗಳಂತೆ ಅಪ್ಪಳಿಸಿತು. ಪೋಲಿಸರು ಗುಂಪಿನಲ್ಲಿ ನುಗ್ಗಿದರು. ಲಾಠಿಗಳಿಂದ ಥಳಿಸಿ ದರು. ಜನ ದಿಕ್ಕೆಟ್ಟು ದಾರೀಕಂಡತ್ತ ಓಡಿದರು. ಮನೆಕಂಡಲ್ಲಿ ಹೊಕ್ಕರು. ಓಡಿ ಬರುವ ಗುಂಪನ್ನು ಕಂಡು, ಮನೆಯ ಬಾಗಿಲುಗಳು ಪಟಪಟನೇ ಇಕ್ಕಿದುವು. ಪೋಲೀಸರು ವಿಜಯಿಗಳಾದರು.

ಹತ್ತು ಹನ್ನೆರಡು ರೈತರನ್ನು ಹಿಡಿದು ತಂದರು. ದಿಕ್ಕೆಟ್ಟು ಓಡಿದು ದಕ್ಕೆ ಪ್ರತಿಫಲ ಬೇಡವೇ ? ರೈತರ ಕೈಗಳಿಗೆ ಬೇಡಿಗಳು ತೊಡಕಿದ್ದುವು. ಅಳುತ್ತಲಿದ್ದರು. ಸಿಪಾಯಿಗಳ ಕಾಲಿಗೆ ಎರಗಿ ದೈನ್ಯತನದಿಂದ ಬೇಡು ತ್ತಲಿದ್ದರು. ಗಾಬರಿಯಿಂದ ನಡುಗಿದ. ಸಿಪಾಯಿಗಳ ಹೊಡೆತ ಸ್ವೀಕರಿ ಸುತ್ತಲಿದ್ದರು. ಅಂತಹ ಮಹತ್ವದ ಕೆಲಸ. ಹಿಡಿದು ತಂದವರಿಂದ

ಆಗಿರಲಿಕ್ಕಿಲ್ಲವೆಂದು ಸಿಪಾಯಿಗಳೇ ಗೊಣಗುಟ್ಟಿದರು. ಗುಡ್ಡ ತೋಡಿ ಇಲಿ ತಂದಂತಾಯಿತೆಂದು ಮರುಗಿದರು. ಎಥಾರೀತಿಯಾಗಿ ಗಂಟೆ ಬಡಿತ ತಿಸ್ಕುತ್ತಲೇ ಇತ್ತು, ಹಮಾರಾ ಬಂದೂಕ! 'ಹಮಾರಾ ಬಂದೂಕ!' ಬಾಲಕ್ಕೆ ಬೆಂಕಿ ತಗುಲಿದ ಬೆಕ್ಕಿನಂತೆ, ತಿರುಗುತ್ತಿದ್ದ ಸಿಪಾಯಿಗಳು ರೈತರನ್ನು ಲಾಕಪ್ಪದಲ್ಲಿ ತುರುಕಿದರು. ಹಿಡಿತಂದ ರೈತರು! ಹೆಂಡಿರನ್ನು ಮನೆ ಮಕ್ಕಳನ್ನು; ಹೊಲವನ್ನು ನೆನೆಯುತ್ತಲೇ ಅಳುತ್ತಲಿದ್ದರು. ತಾವು ಅಪರಾಧಿಗಳಲ್ಲವೆಂಬುದೇ ಅಳುವಿನ ಪಲ್ಲವಿ. ಹಾಡಿಹಾಡಿ ಅತ್ತರು. ಬಿದಿರಿಕಗೆ ಮಣಿಯಲಿಲ್ಲ, ದಣಿಯಲಿಲ್ಲ, 'ಬಂಡಿ ಎತ್ತುಗಳು ಪೇಟೆಯಲ್ಲಿವೆ. ಅವುಗಳ ಗತಿ ಏನಾಗುವದೋ' ಎಂದು ಅತ್ತರು. ಸತ್ತವರ ಮನೆಯಾಯಿತು ಲಾಕಪ್ಪು.

ವಿಕ್ರಮನು ತನ್ನ ಕೂಡಡಿಯಲ್ಲಿರುವವರಿಗೆ ಸಮಾಧಾನ ಹೇಳಿದ. ಬಿಡುಗಡೆಯಾಗುವುದೆಂದು,ದೃಷ್ಟಾಂತಗಳನ್ನುತೋರಿ ಆಶ್ವಾಸನೆ ನೀಡಿದ. ಅವನಂತೆಯೇ ಮಾತನಾಡಿದ, 'ಹೌದರೀ ಅಣ್ಣಾ ಅವರs. ಈ ಮುಂದಿಗೆ ಹ್ಯಾಂಗ ತಿಳಿಯೊದಿಲ್ರೀ' ಕೂಳಿಗೆ ಗತಿಯಿಲ್ದs ಕುಂತೀವಿ. ನಾವು ಮಾಡ್ತೀವ್ರೀs ಈ ಕೆಲಸಾs 'ಗದ್ದಲ್ದಾಗs ತಿಳೀದೆ ಒಡಿದಾರ, ಈಗs ಸಾಹೇಬರು ಒಂಪ್ರಂಪ್ರs ಬಟ್ಟೀ ಒಡ್ತಾರ. ಅಷ್ಟ್ಯಾಗ್ಲೇ ಅಣ್ಣಾ ಅವರ ನಿಮ್ಮ ಬಾಯಿ ಹಕ್ಕಿಯಿಂದ, ಏನ ಕಾಡಾಟ್ರೀ, ದೇಶದಾಗ ಇಷ್ಟು ಜನಾ ಐತಿ, ಎಲ್ಲಾರ್ನೂ ಬಿಟ್ಟು ನನ್ನs ಕಾಡ್ತಾನ್ನೋಡ್ರಿ, ಶೆನಿಮಾರಾಯ. 'ಒಂದೊಂದು ಪಾಳ್ಯಾ ಕಟ್ಟಿರತಾನ.' ಕೆಟ್ಟಂದ್ರು ಮುಗೀತ್ಬಿಡ್ರೀ. ನಾ ಅಂತs ಜೀವಾ ಹಿಡಕೊಂಡು ಅದೀನಿ. ಸೊಸ್ತೇರ ಹಾಂಗ ಹೊಳೀ ಹಾರಿಕೊಂಡು ಸತ್ತೊಗ್ಬೇಕೂ ಅಂತ........s' 'ಸಸೀ,ಯಾಕ ಹೊಳಿ ಹಾರಿದ್ಲು?' ಬರೆವುದಕ್ಕೆ ವಿಷಯದೊರೆಯುವುದೆಂದು ವಿಕ್ರಮನು ಕುತೂಹಲದಿಂದ ಕೇಳಿದ. ರೈತರು ಒಡಲುರಿಯನ್ನು ತೋಡಿಕೊಂಡರು. ವಿಕ್ರಮನು ರೈತರು ಹೇಳುವಾಗ 'ಅಯ್ಯೋಪಾಪ' ಎಂದು ದುಃಖದಲ್ಲಿ ಸಮಭಾಗಿಯಾಗುತ್ತಲಿದ್ದ 'ಯಾಕ ಅಂದ್ರೇನ್ರೀ.' ಕಾಡೂಕಾಲಕ್ಕs ಎಲ್ಲಾ ನೂ ನಡೀತಾವು. ಸೆಟವೀ ಉರೂ ಕಟಗೀ ತೊಗೊಂಡು, ಕೆತ್ತ್ಯಾಳ್ರೀ ನನ್ನ ಣೀಮ್ಯಾಲೆ."

"ಪೇಪರ್ತಂಪದ್ದಕ್ಕೆ ಯಾಕೀನ್ಮಾಡುದದಽ" "ಏನ್ಹೇಪರ್‍ರೀ. ಅವನ್ನ ಗ್ನಾಗ್ರಣ್ಣಾ ಕಾಽ, ಹೀಂಗೀಟು ಆರಾಮದೀನೀ ಅನ್ನೂದ್ರಾಗಽ, ಸುಗೂ ಆತ್ನೋಡ್ರಿ! ನನ್ನಾಲಾಗೇ ಕುಂತಿರ್ತ್ರಾರಿ ಇದಿನಾಯಿ ಹೊಟ್ಟ ಹೇರಿ ಕೊಂಡು, ಪ್ಯಾಟ್ಯಾಗ್ಬಂದ್ರಽ ಹೊಡದೂ ಬಡದೂ ಎಳಕೊಂಡು ಬಂದ್ರು ಇಂತಾದೆಲ್ಲಾ ನಾವ್ಯಾಕ್ಮಾಡೂನ್ರಿ ?' 'ನಿಮ್ಮೂರಾಗ ಚಳವಳಿ ಮಂದಿ ಐತೇನು?' 'ಅದಾರ್‍ರಿ ಗ್ಯಾಡೀವ್ಯಾಗಽ ಚಾವಡ್ಯಾಗಽ. ಏನೇನೋ ಬೆಳಗಾಗುದ್ರಾಗಽ ಬರದು ಹಚ್ಚಿ ಹೋಗ್ತಾರ್‍ರಿ. ಗೌಡರ ಮಗ್ಗಽ ಒಂದ್ವರ್‍ಸ ಆಗೇತ್ರಿ' 'ಏನ್ಮಾಡಿದ್ದಾ ?' 'ಕಾಗದಾ ಹಂಚಿದ್ನಂತ್ರೀ... ಬಲೀ ಬಂಟ ಬಿಡ್ರಿ ಅವಾ, ಹೌದಂದೇನವಗ ಕುಕ್ಕಣ್ಣಿ ಕೈನಽ ಕಡಿಸಿದ್ದ' 'ಯಾಕಽ?'

"ಚಳವಳಿ ಸುದ್ದೀ ಸರಕಾರಕ್ಕಽ ತಿಳಿಸ್ತಾನಂತ್ಹೇಳಿ ಕೈನಽ ಕಡದ್ರು ಅದೂ ಓಡ್ಹೇ ಹೋತು. ಸಂಸಾರ ಕಿತಗೊಂಡು" "ಕುಲಕರ್ಣಿ ಇಲ್ಲೇನವಾ ನಿಮ್ಮೂರಾಗ?" "ಕುಲಕಣ್ಯಾರು ಯಾರೂ ನಿದ್ರಾಂಗಿಲ್ರಿ ನಮ್ಮೂರಾಗ ಕೈಕಡೂತಾರಂತಽ, ಹೆದರಕೀ ಬಹಳಹೊಕ್ಕೈತಿ. ವಾರದಾಗೊನ್ಮೆ ಪೋಲೀಸರ ಗೂಡ ಬಂದು, ಹೋಕ್ಕಾನ ಕುಲಕಣ್ಣಿ" "ಕೈಕಡಿಸಿಕೊಂಡವನ?" "ಅವಾ ಅಲ್ಲ್ರೀ ಮತ್ತೊಬ್ಬಾವ. ಸಡಪೈತ್ರಿ ಒಳಸಂಚು. ಬಿಡೂದಿಲ್ರೀ ಕಡೂಽತಾರ ಅವನ ಕೈನೂ. "ಅಂತೂ ನಿಮ್ಮೂರಾಗಽ ಚಳವಳೀ ಥಾಂದ್ಲೇ ಇದ್ದೀ ಇರತದನ್ನು." "ಇದ್ದ ಇರತೈತಿ ನೂಳೀ ಪಾಪ ಸನ್ನೇಸ್ಗೆ ಅಂತಾರಲ್ರೀ, ಹಾಂಗಾಗೈತಿ ನನ್ನ ಹಣೆಬಾರಾ. "ಸನ್ಯಾಸಿನಽ ಖರೆ....ಇದ್ದಬಿಡು. ಯಾಕಳತೀದಿ. ಎರಡು ಹೊತ್ತು ರೊಟ್ಟೀ ಕೊಡತಾರ!" ಕುಳಿತ ಬೇರೊಬ್ಬ ಕೈದಿ ಕೆಣಕಿದ.

ಸಾಬರು ಬಂದರು, ನಲಾಮ್ ಕೈಕೊಳ್ಳುತ್ತ. ಸಿಪಾಯಿಗಳು ಸಾಮೂಹಿಕ ರೀತಿಯಿಂದ ಸಲ್ಲಿಸಿದರು. ಸಾಬರ ಕೋಣವನ್ನು ಸಿಪಾಯಿ ಕಟ್ಟಿದ. ಪಳ್ಳಿಗೆ ಹೋದುದರಿಂದ ನಡೆದ ಸಂಗತಿಯನ್ನೆಲ್ಲ ಕೇಳಿಕೊಂಡರು. ಬಂಧಿಸಿದ ಹಳ್ಳಿಗರನ್ನು ಕರೆತರಲು ತಿಳಿಸಿದರು. ಬೇಡೀ ಒಡವೆಯ ರೈತರು, ಅಳುತ್ತ ಉರಸಾ, ಸಿರಸಾ, ದೃಷ್ಟ್ಯಾ, ಮನಸಾ,

ಸಾಷ್ಟಾಂಗ ನಮಸ್ಕಾರ ಗೈದರು. ಅಪರಾಧಿಗಳು ತಾವಲ್ಲವೆಂಬುದಕ್ಕೆ, ಅನೇಕರು ವಿವಿಧ ತೆರನಾಗಿ ಮಂಡಿಸಿದರು. ಸದ್ವರ್ತನೆಯ ಜಾಮೀನು ಬೇಡಿದರು. ಕ್ಷಿತರ ಒಳಗ ಬೆಚ್ಚಾಗಿಲಲ್ಲಿ ಸಿದ್ದವೇ ಇತ್ತು. ನಾಬರು 'ನೋಡ' ಮಾಡಿದರು ಜೀವ ನಡಿಗೆಯನ್ನು. ನಾಬರೆಲ್ಲರು ಬಂಡಕರಕೆ ಹಾಕಿ ಹಾರಿದರು.

'ಆದಷ್ಟೆಲ್ಲಾ ಒಂತ್ರೇ ಆಯಿತ್ತೆ, ನಾಬಗ ಸಂಪತ್ತಾಯಿತ್ತೆ' ಎಂದು ವಿಕ್ರಮನು ಹಾಡಿದ. ಕೈದಿ ಕೇಳಿದರು ಹಾಡಿನ ಅರ್ಥ ಹೇಳಲು. ವಿಕ್ರಮ ಪಲ್ಲವಿಯನ್ನು ಅಂದು **'ಗೋಪಾಳ ಪುಟ್ಟಿ ತುಂಬಿದುದಕ್ಕೆ ಬಿಡುಗಡೆಯಾಯಿತು ನಡೆಂಯೋ ಮನೆಗೆ'** ಅರ್ಥ ಹೇಳಿದುದನ್ನು ಕೇಳಿ ನಕ್ಕರು. ಇನ್ನೊಂದು ಸಲ ಸರಾಗವಾಗಿ ನುಡಿಸಲು ಬೇಡಿದರು. ಅನಂತರ ತಾವೂ ಕಲಿತರು. ಎಲ್ಲರೂ ಒಂದೇ ಸ್ವರದಲ್ಲಿ **'ಗೋಪಾಳ ಪುಟ್ಟಿ ತುಂಬಿದುದಕ್ಕೆ ಬಿಡುಗಡೆಯಾಯಿತು ನಡೆಯೋ ಮಗನೇ'** ಎಂದು ಹಾಡಿದರು.

ಮಾಮಲೇದಾರರು ಹೋಗಲಿಲ್ಲ. ಫಟಿಸಿ ನಿರೀಕ್ಷಿಸಲು ಬಂದಿಲ್ಲ. ಬಂದೂಕನ್ನು ಕಸಿದುದೂ ಒಂದು. ಕಚೇರಿ ಸುರಿದಿಲ್ಲ. ಟ್ರೆಝರಿ ಲೂಟಿ ನಡೆದಿಲ್ಲ. ರೆಕಾರ್ಡು ಇದ್ದಂತೆಯೇ ಇವೆ. ಧ್ವಜಗಳು ಕ್ಷೇಮವಾಗಿವೆ. ಬಂದೂಕು ಹೋದುದಕ್ಕೆ 'ಹಮಾರಾ ಬಂದೂಕ.' ಹುಚ್ಚನಾಗಿರುವ. ದಿನದಂತೆ ಕಚೇರಿಗಳು ಪ್ರಾರಂಭವಾದವು. ಯಾವ ಸಮಯಕ್ಕೆ, ಹೇಗೆ ಗುಂಪು ಬರುವದೋ ಮತ್ತೆ! ಅದೇ ಮಾತು ಅದೇ ವಿಚಾರ ಆಫೀಸರರಿಗೆ. ಮೂವರನ್ನು ಕೂಡಿ ಒಳಗೆ ಬಿಡಬಾರದೆಂದು ಲೇಖವನ್ನೇ ಕೆತ್ತಿಸಿದ್ದರು. ಏನಾದರೂ ಜೀವಕ್ಕೆ ಗಂಡಾಂತರವೆಂದು ನುಡಿದರು. ಪ್ರವಾಸಿಗೆ ಅಂದಿನ ಗೋಪಾಳದ ಅರ್ಥ ಬುಟ್ಟಿಯನ್ನೇ ಮುಡುಪಿಟ್ಟರು. ಕುಲದೇವನಿಗೆ 'ದಯಾನಿಧೇ ಜೀವದಿಂದ ಪಾರು ಮಾಡು. ಅಕಲಂಕ ಭಕ್ತವತ್ಸಲಾ ಮೊರೆ ಕೇಳು. ಚಳವಳಿಯ ರಾಕ್ಷಸರ ಬಾಧೆಯಿಂದ ರಕ್ಷಿಸು. ಕರುಣಾ ಖಣಿಯಲ್ಲವೇ ನೀನು?' ಎಂದು ಬೇಡಿಕೊಂಡರು.

ವಿಕ್ರಮನು ಹಸಿದಿರಲಿಲ್ಲ. ವಕೀಲರ ಇಡ್ಲಿ ಒಡಲಲ್ಲಿದ್ದುವು ಇನ್ನೂ. ಊಟ ಮಾಡಲು ಕೈದಿಗಳು ಬನ್ನರ ಪತ್ರಿಕಗಳನ್ನು ಪ್ರಕಟಿಸುತ್ತಲೇ ಇದ್ದರು. ವಿಕ್ರಮನು ಕೈದಿಗಳಿಗೆ ಪ್ರಿಯನಾದ. ಅವನನ್ನು ಕಾಣುತ್ತಲೇ ಒಲವಿನ ಉಕ್ಕುತ್ತಿದ್ದ ಎಂದು ಹೇಳಿದರು. ತಿಳಿಗಪ್ಪು ಬಣ್ಣ ತುಂಬಿದ ಮೈ, ಕಣ್ಣಿನಲ್ಲಿ ಆಕರ್ಷಕತೆ ಇದೆ. ನುಡಿಯೂ ನಯ ನಾದನ. ಮಾತನಾಡಲಿ, ಹಾಡಲಿ, ಕೇಳಲೇಬೇಕೆಂದು ಕಿವಿಗಳು ವಿಕ್ರಮನನ್ನೇ ಆಶ್ರಯಿಸುವುವು,

ಸಿರಸ್ತೇದಾರರು ವಿಕ್ರಮನಿಗಾಗಿ ಬಂದ ಮನೆಯನ್ನವನ್ನು ಪರೀಕ್ಷಿಸಿದರು. ಅವರೆದುರೇ ವಿಕ್ರಮನು ಹೊರಗೆ ಕುಳಿತು ಊಟಮಾಡಿದ. ಸಿರಸ್ತೇದಾರರು ಕಚೇರಿಯ 'ಕೈತಾದ್ಯಾತ ಕಾಂಡವನ್ನು ವಿಕ್ರಮನಿಂದ ಕೂಲಂಕಷವಾಗಿ ಕೇಳಿದರು. ವಿಕ್ರಮನ ಸಾಹಿತ್ಯದ ಪರಿಚಯವನ್ನು ಸಿರಸ್ತೆದಾರರು ಮಾಡಿಕೊಂಡಿದ್ದರು. ವ್ಯಕ್ತಿಪರಿಚಯವು ಊಟ ಮಾಡುವಾಗ ಒದಗಿತು. ಬಿಡಿಪದ್ಯಗಳನ್ನು ಮನೆಯಲ್ಲಿರಿಸಿ ಬಂಧಿಸಿದುದನ್ನು ತಾವೂ ಕೇಳಿದುದಾಗಿ ವಿಕ್ರಮನೆದುರು ಹೇಳಿದರು. ಊಟ ಮುಗಿಯುವದರಲ್ಲಿಯೇ ವಚನ-ವಾಙ್ಮಯ, ದಾಸಸಾಹಿತ್ಯ, ಅನೇಕ ಆಧುನಿಕ ಸಾಹಿತ್ಯ' ಎಂಬ ವಿಷಯಗಳು ಚರ್ಚಿತವಾದುವು. ಸಿರಸ್ತೆದಾರರು ಬರೆಯುವ ಬಳಗದವರೆಂಬುದು ತಿಳಿಯಿತು. ಬಾಂಧವ್ಯ ಬೆಳೆಯಿತು.

ವಿಕ್ರಮನೊಡನೆ ಗಡ್ಡದ ಸಾಬರು ಕೋಪಗೊಂಡಿರಬಹುದು ತಂಬಾಕಕ್ಕೆ ಕರೆಯಬಹುದೆಂದು ಒಂದೆರಡುಸಲ ಇಣಿಕಿದ. ಪೋಲೀಸನೇ ಒಳಹೊಗಿಸಿದ. ಕೈದಿಗಳು ಕಥೆ ಹೇಳಲು ಆಲ್ಪೊರೆದರು. ವಿಕ್ರಮನು ಕೂಡ್ರುವುದಕ್ಕೆಂದು ಆಸನ ಸಿದ್ಧಗೊಳಿಸಿದರು. ಸುತ್ತಲೂ ಕೇಳಲು ಕುಳಿತರು. ಅಭಿರುಚಿಯ ಅಭಿಜ್ಞ ವಿಕ್ರಮನು, ಕನ್ನಡ ಸಾಮ್ರಾಜ್ಯದ ಕತೆ ಹೇಳಿದ.

ಶೃಂಗಾರ, ವೀರ, ಕರುಣರಸಗಡಲಲ್ಲಿ ಎಳೆದು, ಸಾಗಿಸಿದ. ಕಣ್ಣಲ್ಲಿ ಕರುಣೆಯ ನೀರು, ಮೈಯಲ್ಲಿ ವೀರಶ್ರೀಯ ಹುಮ್ಮಸ, ನಯನ

ವಲ್ಲಿ ನಾರಿಯ ಸೊಬಗು-ಶೃಂಗಾರ ಅದ್ಭುತ ರಮ್ಯ ಕಥೆ ಸರಾಗವಾಗಿ ಪ್ರವಹಿಸುತ್ತಿದ್ದಿತು

ಕಥೆ ಮುಗಿಯುವುದಕ್ಕೂ, ಕತ್ತಲು ತೋರುವುದಕ್ಕೂ ಸರಿಹೋಯಿತು. ಕಚೇರಿ ಎಂದಿನಂತೆ ಮಂತ್ರವಾಗಿದ್ದಿತು. ಗಡ್ಡದವರು ತಂಬಾಕು ದಾನ ನೀಡಿ ಶ್ರೀಯೋಭಾಗಿಗಳಾದರು. ಅಡಿಕೆ, ಎಲೆ, ತಂಬಾಕುಗಳು ಅವತರಿಸಿದುವು. ವಿಕ್ರಮನಿಗಿನ್ನು ಹಿಂದಿರುವ ಒಂದೆ ಕಾಣಿಕೆಗನಂದು ಗಡ್ಡದವರು ನಗೆ ಬೀರಿದರು. ಅಡಿಕೆಯು ತಾಡನಕ್ಕೆ ಕಲ್ಲು ಕೈಸೇರಿತು ಅಯ್ಯನವರು ರೊಟ್ಟಿಯ ಬುಟ್ಟಿಯೊಡನೆ ಪ್ರಸನ್ನರಾಗಿ, ಇಷ್ಟಾರ್ಥಗಳನ್ನು ಈಡೇರಿಸಿ ನಡೆದರು ಹೊಗೆ-ಸೋಡಗಳು ತೂರಾಡಿದುವು ಆರೋಹ, ಅವರೋಹಗಳು ಲಯಬದ್ಧವಾಗಿ ನಿತ್ಯ ನಿಯಮದಂತೆ ರಾಗಜ್ಞಾನ ಕೊಡುತ್ತಲಿದ್ದುವು.

ಗಡ್ಡದ ಸಾಬರನ್ನಾರಿ ವಿಕ್ರಮನಿರುವ ಲಾಕಪ್ಪಿನ ಎದುರೇ ಪ್ರಸ್ಥಾಪನೆಗೊಂಡಿತು. ಜೀವನದ ಸ್ಮಿತಾಸ್ಮೃತ ಕಾಂಡವು ಮೊದಲಿನ ಅಧ್ಯಾಯವಾಗಿ, ಕೊನೆಗೆ ನವೀನ ಕಥನಗಳಾದುವು. ಮೊದಲನೇಯ ಹೆಂಡತಿ ಓಡಿ ಹೋದುದು, ಎರಡನೆಯ ಮದುವೆ, ಅವು ಮಕ್ಕಳ ಜೀವನ ಕ್ರಮ, ನೌಕರೀ ಮಾಡಿದ ಸ್ಥಳ, ಕಾಲಗಳ ಬಂದ ತಿಂಡುಗಳ ನೆನಪಿನ ಗಳು ಉದುರುತ್ತಲಿದ್ದುವು

ಹೆಬ್ಬಾಗಿಲದ ಬಾಯಿ ತೆರೆಯಿತು. ಗಡ್ಡದ ಸಾಬರು, ಸಾವರಿಸಿಕೊಂಡು, ಕಾರ್ಯ ತತ್ಪರತೆಯ ಆವಿರ್ಭಾವ ತೋರಿದರು ವಿಕ್ರಮನು 'ಭಾರತಪ್ಪನಾಗುವೆನೇ ಈ ರಾತ್ರಿ,' ಅಂದುಕೊಳ್ಳುತ್ತ ಉರುಳಿದ-ಹಾಸಿಗೆಯ ಮೇಲೆ. ಮನದ ದುಗುಡ, ತಗಣೆ ಚಿಕ್ಕಾಡುಗಳ ಕಡಿತಕ್ಕೆ ನಿದ್ರೆಯಿಲ್ಲ. ಕೈದಿಗಳು ಕನಸು ಕಾಣುತ್ತಲಿದ್ದರು. ಮನವು ಜಗವ ಹಾರಿ ಏನನ್ನೋ ಯೋಚಿಸಿತು. ಯಮಧರ್ಮರು ಪಾಶವನ್ನೆಸೆದರೇ.... ಬಾಧಿಸುತ್ತಲಿದ್ದಿತು. ಮನೆಯ ವಿಚಾರ ನಡೆದಾಗಲೂ ಯಮಧರ್ಮರು ಸಾಕ್ಷಾತ್ಕಾರ ದಯಪಾಲಿಸುತ್ತಲಿದ್ದರು.

ಗಡ್ಡದವರೇ ಆಮಂತ್ರಣ ಪತ್ರಿಕೆ ತಂದು ವಿಕ್ರಮನಿಗೆ ನೀಡಿದರು. ದಿಗಿಲುಗೊಂಡ, ಕೋರಡೆಯ ಹೊಡೆತಗಳಿಂದ ನುಗ್ಗಾಗಲೇ ಬೇಕಾಗುವುದೆಂದ ಮಾತನಾಡಲು, ಏಳಲು ಶಕ್ತಿಯು ಸಾಲದಾಯಿತು. ಅಮಾನುಷ ಹಿಂಸೆಗೆ ಗುರಿಯಾಗುವ ಚಿತ್ರ ಕಂಡ, ಎಡಬಲಕ್ಕ ಯಮನಾಳುಗಳೇ ಸ್ಥಿತರಾದಂತೆ, ಶಿಕ್ಷಾ ಸಲಕರಣೆಗಳು ಎದುರೇ ಇರಿಸಿದಂತೆ, ಭಾಸವಾಯಿತು. ಏನೂ ತೋಚದ ನಿರ್ಧರಿಸಿದ. ತನ್ನ ವ್ಯೈ, ಉಳಿಯಬೇಕಾಗಿದ್ದಲ್ಲಿ ಕಾರ್ಯಕರ್ತರ, ವಸ್ತುನಿಸ ಸಂಗತಿ ತಿಳಿಸಲೇ ಬೇಕಾಗುವುದೆಂದ. ಎಲ್ಲ ಸಂಗತಿ ತಿಳಿಸಿದುದಕ್ಕೆ ಜನ ನಿಂದಿಸಿದರೇ ! ಸಮಾಧಾನಕಾರಕ ಉತ್ತರವನ್ನೂ ಸಿದ್ಧಗೊಳಿಸಿದ. ಕಾಂಗ್ರೆಸ್ಸ ಕಾರ್ಯಕರ್ತರು ಸುಳ್ಳು ಹೇಳಕೂಡದು. ಬಹಿರಂಗವಾಗಿಡಲೇಬೇಕು ಮುಚ್ಚು ಮರೆ ಏಕೆ ? ಎದ್ದು ಹಾಸಿಗೆಯ ಮೇಲೆ ಕುಳಿತ ಮಹಾತ್ಮರ ತತ್ವಕ್ಕೇ ಮೊರೆ ಹೋದ. '**ನಾನೃತಾ ತ್ಪಾತಕಂ ಪರಂ**' ಎಂದು ಹಿರಿಯರೇ ಹೇಳಿಲ್ಲವೇ?? ಗಡ್ಡದವರ ಸ್ವಾರೀ ದಯಮಾಡಿಸಿತು.

"ರಾಯರಽಽ ...." ಕರುಣಾಧ್ವನಿಯಿಂದ ನಾಬರು ನುಡಿದರು.

'ಏ .... ಏನು ??'

"ಸಾ - ಹೇ - ...."

"ಯಾ - ಕಽ ?"

"ಕರದಾಗ ಬರಬೇಕಂತ - ಬರ್ಲಿಲ್ಲಾ ಅಂದ್ರಽ ಎಳಕೊಂಡ್ಬರ್ರೀ ಅಂತಽಽ .... ...."

"ಹಂಗಽಽ .... .... !!"

ಕನಿಕರದಿಂದ ಹೇಳಿದರು ನಾಬರು. **ಹುಕುಂ** ಹೊರಟಿತು ಕರೆತರಲು, ಕೀಲಿ ಕಳಚಿತು. ಗಡ್ಡದವರು ಮರುಗಿ ಹೊರಗೆ ಬರಲು ತಿಳಿಸಿದರು. ಉತ್ತರವಿಲ್ಲಾ ವಿಕ್ರಮನಿಂದ ನಾಬರ ಅಬ್ಬರದ ಕರ್ಕಶದ ಕರೆ, ಕಚೇರಿಯಿಂದಲೇ ಕೇಳಿಸಿತು. 'ಯಾರ್ನನ್ನ ಕರೆಯುವವರು !' 'ಹೇಂ ಗ್ಯಾಕ್ಮಾಡ್ತೀರೀ ಹಿಟ್ಟಿಗ್ಬಂದಾರು ?' 'ಬರುದುಲ್ಲಾಽ ಅಂತ ಹೇಳ್ರಿ'

‘ಬರುದುಲ್ಲಾ ಅಂದ್ರs ಬರೂಧುಲ್ಲಾ’ ಪ್ರತಿಧ್ವನಿಯಾಗುವಂತೆ ಆಕ್ರೋಶ ಗೈದ. ಕೋರಡೆಯೊಡನೆ ಸಾಬರೇ ಸಮ್ಮುಖಕ್ಕೆ ಬಂದರು.

"ಏನ್ರಿ ರಾಯರ!" ಸಾಬರ ವಾಕ್ಯವಾಯಿತು.

"ಏನ್ರೀ ಸಾಹೇಬರೇ" ನಿಕ್ರಮೋಉವಾಚ
"ದಯಮಾಡಿ ಕಚೇರಿಗ ಬಂತೀರೇನು?"

"ದಯಮಾಡಿ ಯಾಕs ಹೇಳ್ತೀರೇನು?"

"ಕಲಸದ ಬರ್ರಿ"

"ಏನ್ಕೆಲಸ ಹೇಳ್ರಿ!"

"ಅಲ್ಲೇ ತಿಳೀತದ"

"ನೀವೇ ತಿಳಕೊಳ್ರಿ"

"ಬರತೀರೋ ಇಲ್ರೊ!"

"ಬ.... ರು ... ದು.... ಲ್ಲಾ"

"ತಿಳಿದವರಿದ್ದೀರಿ ಹಟಾ ಮಾಡಿದರs"

"ಬರೂದಿಲ್ರಿ!"

"ಮರ್ಯಾದೆಯಿಂದ ಬರ್ರಿ"

"ಹಾಕ ನುಮ್ಮ ಹೋಗಿರಿ"

"ಏ ಬಾರೋ ಹೊರಗ. ಎಷ್ಟ ಮಾತಾಡ್ತೀದಿ"

"ಗೊತ್ತದ ಹೋಗ್ರೀ"

"ಒದ್ದು ಎಳಕೊಂಡು ಬಾರೋ?"

"ಗಂಟ್ಸಿದ್ದಾಪ ಬಲ್ಲ. ನೀನೇ ಬಾ ನೋಡ್ತೀನಿ"

"ಏನ್ಮಾಡ್ತಿಯೋ?"

"ಒಳಗ ಬಂದು ನೋಡು. ಚಾರ್ಜಸೀಟು ಕೊಟ್ಟೇದಿ ಮಾಮಲೇದಾರರ ಕಡೆಗ. ನೋಡು ಬಾ ಕಾಯಿದೇ ಕಲಸ್ತಿ ಏನೋ ಮಗನ,ಕ್ಕs ಮುಕಳೀ ಮ್ಯಾಲನ ತೂಗಲು ಕಿತ್ತು ಹಾಂಗ ಒದ್ದೇನು? "ಬಾ .... ಬಾ .... ಬಾ"

"ಇಂಥಾ ಮಂದಿನ್ನಽ ಭಾಳ ನೋಡಿನಿ. ಹೋಗೋ !!"

"ಏನ ನೋಡೀಯೋ ನಂದೊಂದು ಕೈಗುಣ ನೋಡ್ಬಿಡು. ಜೀವಂತ ಹುಗಿಸಿ ಬಿಟ್ಟೇನು"

"ಹ ! ಹ ! ಹ ! ಹ !" ತಾತ್ಸಾರದ ನಗೆ ಬೀರಿದ ವಿಕ್ರಮ. ನಾಬರು ಸಾವಿರ ಸಲ ಎಚ್ಚರಿಕೆ ಕೊಟ್ಟು ಹೊರಗೆ ಬರಲು ತಿಳಿಸಿದರು. ವಿಕ್ರಮನು ನಗುತ್ತಲೇ ಇದ್ದ. ನಾಬರು ಕೋಪಾಕ್ರಾಂತರಾದರು. ಬಾಗಿ ಲಾಕಪ್ಪಿನಲ್ಲಿ ಒಂದು ಬೂಟುಗಾಲನ್ನು ಇರಿಸಿದರು. ಟಾರ್ಚ ತೋರಿತು. 'ಬಾ...ಹೊರಗ ಬಾ !', ಎಂದರು. ವಿಕ್ರಮನು ಆವೇಶದಿಂದ ಅಡಕಿಯ ತಾಡನ ಸಾಧನೆಯನ್ನು ತೆಗೆದುಕೊಂಡ ನಾಬರು ಕೋರಡೆಯನ್ನು ಬಾರಿಸಿದರು.

"ಮುಂದ್ಬಾಽ ನೋಡ್ತೀನಿ"

"ನನಗ ಹೊಡೀತೀಯಾ ?"

"ನಿನಗ ಹೊಡಿಲಿಕ್ಕ ಹುಚ್ಚು ಅಲ್ಲಾ ನಾನು"

"ಕಲ್ಲ್ಯಾಕ ತೊಗೊಂಡೀದಿ ?"

"ನಿನ್ನಽ ಎಲ್ಲಾ ಪೋಲೀಸರ್ನ ಮನಿಗೆ ಕಳಿಸಲಿಕ್ಕ !"

"ಹುಚ್ಚು ಹಿಡದದೇನೋ ?"

"ಒಡಿದು ತಿರುಗೂಹಾಂಗ ಮಾಡತೀನಿ. ಈ ಕಲ್ಲ ಅಂದ್ರಽ ನಿನ್ನ ಗಂಡ ! ಯಮಾ ! ನೌಕರೀ ಕಳಸೂ ಜೇಲಿನ್ಯಾಗ ಕೂಡುಸೋ ಸಾಧನ ! ಡಿಸ್ಮಿಸ್ ಆದೀತ್ರೀ ನಾಬರಽ, ತಲೀ ತಲೀ ಘಟ್ಟಿಸಿಕೊಂಡೂ ರಕ್ತದ ಕಾಲುವೆ ಹರಸ್ತೀನಿ. ನಿಂದೆಲ್ಲಾ ನಂದು .... ಮತ್ತ ನಂದು !!"

"ವಾರೆ ವ್ಹಾ ಚಿಗರಕಾರಽಽ" ಅವನ ಗುರು ನಾನು. ವಿಚಾರ ಮಾಡಿಕೊಂಡು ಮುಂದಕ್ಬಾ. ಕಾಯದೇ ನೋಡಿದ್ದಿಲ್ಲಾ ಅಂದ್ರಽ ಓದಿ ಬಾಽ ಒಂದೊಂದ್ಸನೀ ರಕ್ತಕ್ಕಽ ಒಂದೊಂದು ವರ್ಷ. ಧೈರ್ಯಾ

ಇದ್ದರs ಬಾ ” ಎಂದು ಕಲ್ಲನ್ನು ಎತ್ತಿ ಹಿಡಿದು ನಿಂತ. ಮುಸುಗುಡು ತ್ತಿದ್ದ! ಒತ್ತರದಿಂದ ಉಸುರಾಡಿಸಿದ. ಕೆಕ್ಕರಗಣ್ಣಿನಿಂದ ನೋಡಿದ, ಸಾಬರು ಕಾಲನ್ನು ಹೊರಗೆ ಎಳೆದುಕೊಂಡರು. ದರ್ಪ ತೋರದೇ ಬಿಡ ಲಿಲ್ಲಾ. ಸಿಪಾಯಿಗಳು, ಗಡ್ಡದವರು ಬೇಡವೆಂದರು. ತಮ್ಮ ನೌಕರಿಯ ಚಿಂತೆಯೇ ಹಿಂದಕ್ಕೆಳಸಿತು.

“ ನೋಡೀನಿ ನೋಡೀನಿ ಅಂದೆ. ಸಾಯಕ್ಲೋಸ್ಟ್ಯಾಯಿಲ ಹೊರಗೆ ತೆಗೆದೇ ತೀರತೀನಿ.’’

‘‘ಹುಟ್ಟಿ ಬಾ ಇನ್ನೊಮ್ಮೆ. ಡಿಸ್‌ಮಿಸ್ ಆದೀರಿ ಸಾಹೇಬರ ಡಿಸ್‌ಮಿಸ್ ಆದೀರಿ. ”

---

# ಕನಸು ಬಿದ್ದಿತು ಕನಸು !

ಶಿಲಾಸ್ತ್ರ ಪ್ರಯೋಗದ ಭಯವೋ ಬೇರೆ ಕಾರಣವೋ ತಿಳಿಯದು. ಸಾಬರು ವಿಮುಖರಾದರು. ಗಡ್ಡದವರು ಗೆದ್ದರು. ವಿಕ್ರಮನಲ್ಲಿ ಗೆದ್ದ ಗರುವು ಇರಲೇ ಇಲ್ಲ. ಇರುವುದರಲ್ಲಿ ಸಾಬರು ಮೈಮೆತ್ತಗೆ ಮಾಡದೇ ಬಿಡರೂ ಎಂಬ ಅಂಜಿಕೆ ಅಳುಕಿಸುತ್ತಲಿದ್ದಿತು ವಿಕ್ರಮನಿಗೆ. ಪ್ರಶಸ್ತಿ ಪ್ರತ್ರಿಕೆ ಕೈದಿಗಳಿಂದ, ಗಡ್ಡದವರಿಂದ ದೊರೆಯಿತು. ಸಾಬರ ಅಲ್ಲಿ ಇಲ್ಲಿಯ ಕೇಡಿನ ನಡತಯ ಅನೇಕ ಕತೆಹೊರಟವು. ವೀರ ವಿಕ್ರಮನು ಕಲ್ಲುಕಾಳಗದಲ್ಲಿ ದಣಿದುದರಿಂದ, ಎಲ್ಲರೂ ಒರಗಿದರು. ಬೆಳಕಾಯಿತು. ದಿನವೂ ನಡೆಯಲೇ ಬೇಕಾದುದೆಲ್ಲವೂ ನಡೆದುವು. ಲಾಕಪ್ಪದಲ್ಲಿ ಕೈದಿಗಳು ಹೆಚ್ಚಾದುದರಿಂದ 'ಡಿಸ್ಟ್ರಿಕ್ಟ' ಜೇಲಿಗೆ ಕಳುಹಿಸಿದರು. ಲಾಕಪ್ಪಿನಲ್ಲಿ ತಗಣೆ ಗುಂಗಾಡುಗಳೊಡನೆ ಆಟವಾಡುತ್ತ ಒಬ್ಬನೇ ಕುಂತ. ಸಾಬರು

ಲಾಕಪ್ಪನ್ನು ದುರಗುಟ್ಟಿ ನೋಡಿ ನಡೆಯುತ್ತಲಿದ್ದುದನ್ನು ಒಂದೆರಡುಸಲ ಕಂಡ. ಅನೇಕ ಕಾಲ್ಪನಿಕ ವ್ಯಕ್ತಿಗಳೊಡನೆ ಸಂಭಾಷಿಸಿದ. ತಿರುಗಿದ; ಕುಳಿತ; ಮಲಗಿದ. 'ಪೌತಿ'ಯನ್ನು ಕಾಲಕ್ಕೆ ಸರಿಯಾಗಿ ಗಡಿಗೆಯಲ್ಲಿ ಉರುಳಿಸುತ್ತಲಿದ್ದ ಕಚೇರಿಗೆ ಬರಹೋಗುವ ಜನ, ಕೈದಿಗಳನ್ನು ಕಂಡು ಮರೆಯಾಗುತ್ತಲಿದ್ದರು. ತನ್ನ ಗೆಳೆಯರ ದಾರಿ ಕಾಯ್ದು. ಗಡ್ಡದವರ ಸರತಿ ಇರಲಿಲ್ಲವಾದುದರಿಂದ ವಕೀಲರ ಬರುವಿಕೆ ಬಯಸಿರಲಿಲ್ಲ.

ಅನ್ನದಲ್ಲಿಯ 'ಆಕ್ಷಿಪ್ತ' ವಾಙ್ಮಯ ದಿನದಿಂತದೂರತಿತು. ಶಿರಸ್ತೇದಾರರು ಗಡಿಬಿಡಿ ಇರುವುದರಿಂದ 'ಮಿತ್ರವಿಂದಾ ಗೋವಿಂದ ನಾಟಕದ ವಿಮರ್ಶೆಯನ್ನಷ್ಟೇ ಮಾಡಿ ಕಲಸಕ್ಕೆ ಹೊರಟರು. ಓದಿದ ಬಂದ ಕ್ರಾಂತಿ ಬುಲೆಟಿನ್ನನ್ನು. 'ರೈತರದಾಳಿ' 'ಲಾಠಿಪ್ರಹಾರ' 'ರೇಲ್ವೆಹಳಿ.ಹಾರಿದವು' 'ಮಹಾತ್ಮರ ಸಂದೇಶ' 'ಸಿ.ಆಯ್.ಡಿ.ಗಳಿಗೆ ಸ್ವಾಗತ.' ಈ ಮೊದಲಾದ ಲೇಖನ ,ಓದಿದ. ಸಾಯಕ್ಲೋಸ್ಟಾಯಲ್' ಯಂತ್ರವನ್ನು ಲೇಖಕ, ಮುದ್ರಕರನ್ನು ಹಿಡಿದುಕೊಡಲು ಸಿ.ಆಯ್-ಡಿಗಳೇ ಬಂಟರು ವರೆಂಬುದು 'ಕ್ರಾಂತಿ'ಯನ್ನು ಓದಿದನಂತರ ತಿಳಿಯಿತು ವಿಕ್ರಮನಿಗೆ.

ತನ್ನನ್ನೇ ಕೂಗಿಗಂತಾಗಲು 'ಕ್ರಾಂತಿ'ಯನ್ನು ಅಡಗಿಸಿ ಇರಿಸಿದ. ಬಿ.ಜೆ.ಗೂ ವಿಕ್ರಮನಿಗೂ ಗೆಳೆತನ. ಬಿ.ಜೇ.ನ.ನಡತೆಯು ಸರಿಕಾಣದುದರಿಂದ, ಹೊಟ್ಟೆಯ ಪಾಡಿಗಾಗಿ ಪೋಲಿಸನಾದುದರಿಂದ,ಗೆಳೆತನ ಬೀದಿಗೆ ಅಂಟಿದ್ದಿತು. ಪೋಲಿಸರ ಸಂಗ ಮಾನಭಂಗವೆಂಬ ಭಾವನೆಯೇ,ಗೆಳೆತನ ಇಳಿತಕ್ಕೆ ಬಂದಿದ್ದಿತು. ಕೂಡಿ ಕಲಿತು, ಆಡಿ, ಹಾಡಿ, ನಲಿದಾಡಿದುದೆಲ್ಲ ಮರೆತು, ದಾರಿಯಲ್ಲಿ ಕಂಡರೆ 'ನಮಸ್ಕಾರ್ರಿ' ಎನ್ನುವುದಷ್ಟು ಉಳಿದಿದ್ದಿತು. ಅವನು ಇವನ ಮನೆ ಮುಳುಗಿಸಿಲ್ಲ. ಇವನು ಅವನದನ್ನು ಕೆಡಿಸಿಲ್ಲ. ಪೋಲಿಸರಿಗೆ ತಾಯಿತಂದೆಗಳಲ್ಲಿಯೂ ಮಮತೆ ಇಲ್ಲವಾಗುವುದೂ ಸಹಜವೆ. ತಂದೆ ಮಗನನ್ನೂ ಗುಂಡಿಕ್ಕಿ ಕೊಂದ ಸಂಗತಿ ಸಾಕಷ್ಟಿವೆ, ಚಳವಳಿಯ ಇತಿಹಾಸದಲ್ಲಿ, ಬಿ ಜೆ.ನನ್ನು ಕಾಣುವ ದೃಷ್ಟಿ ವಿಕ್ರಮನಲ್ಲಿ ಪಲ್ಲಟವಾಗಿದೆ. ಮತ್ತೆ ಯಾರಿಗಾದರೂ ಮಾಡಿದ್ದರೆ ವಿಕ್ರಮನು

ದ್ವೇಷಿಸುತ್ತಿದ್ದನೋ ಇಲ್ಲವೋ, ತನ್ನ ಮನೆಯಲ್ಲಿ ತಾನಿಲ್ಲದಾಗ ಗೌಪ್ಯವಾಗಿ ಬುಲೆಟಿನ್ನುಗಳನ್ನಿಟ್ಟಿದುದೇ ಉರಿತಕ್ಕ ಕಾರಣವಾಗಿದ್ದಿತು. ಅವನನ್ನು ಕಾಣಲು ಅವನೊಡನೆ ಮಾತನಾಡಲು ಇಚ್ಛೆ ಇರಲಿಲ್ಲ.

"ವಿಕ್ರಮಾ ...ವಿಕ್ರಮಾ. " ಬಾಗಿಲಲ್ಲಿ ನಿಂತು ಕೂಗಿದ ಬಿ. ಜೆ. ಶಿರಸ್ತೇದಾರರ, ನಾಬರ ಅಪ್ಪಣೆಪಡೆಯುವ ಕಾರಣವಿರಲಿಲ್ಲ ಕೈದಿಯನ್ನು ಕಾಣಲು ಸಿಪಾಯಿಗೂ ನಿರ್ಬಂಧವೇ? ಸಮವಸ್ತ್ರದ ವೇಷದಲ್ಲಿ ಬಿ. ಜೇ. ವಿಕ್ರಮನ ಭೆಟ್ಟಿಗೆ ಬಂದಿರಲಿಲ್ಲ ಕಾಲ ಚರವುಗಳೇ ಹೇಳುತ್ತಲಿದ್ದವು, ನನ್ನನ್ನು ತುರಿಯುವವನು ಸಿಪಾಯಿಯೇ ಎಂದು. ವಿಕ್ರಮನು ಮುನಿನನ್ನು ತೋರದೇ ಬಂದ. ವಂದಿಸಿದ

" ನೀಯಾಕ ಬಂದ್ಯೋ ಬಿ. ಜೇ? "

" ಜರೂರ್ಕೆಲಸಿತ್ತು "

" ನನ್ನಡೇ ಏನ್ಕೆಲಸಪಾ ಮತ್ತs....!!"

" ಅಂಥಾದೊಂದು ಕೆಲಸದ "

" ನಾಕೂತೀನಿ ಲಾಕಪ್ಪಿನ್ನರಕದಾಗ "

" ಎಲ್ಲಿಪ್ಪ್ರೀನೂ ಆಕಲನಾ ..."

" ಎಷ್ಟೇಕು ? "

" ನನ್ನಿಂದs ಒಂತಪ್ಪಾಗೇದ ? "

" ಏ-ನು ? "

" ನಿನಗs ಗೊತ್ತಾಗೇದ "

" ಒಳಗ ಕೂತೀನಿ ನನಗೇನ್ಗೊತ್ತು "

" ಬುಲೆಟಿನ್ನವು "

" ಏನವಾ ಮತ್ತs ಫಾಲ್ಕುಟ "

" ದಪ್ಪಾಗೇನ್ನಂನ್ನಂದ ಉಳಸಗು ... ಯೋ ಇಲ್ಲೋ

" ಏನಾಗೇದ ಅಪೇ ತಿಳಿವಲ್ಲು ? "

" ನಾವಮಾಡಿದ್ದೆಲ್ಲಾನೂ ಹೇಳಿಬಿಡ್ತೀನಿ " ಅವನು ಹೊರಗೆ ಇವನು ಒಳಗೆ. ನಡುವೆ ಸಲಾಖೆಯ ಬಾಗಿಲು ಸಾಕ್ಷಿ.

" ನಿಮ್ಮನ್ಯಾಗs ಬುಲೆಟಿನ್ನ ತಂದಿಟ್ಟ್ಯಾವಾ ನಾಸೇ. ಬಡತೀ ಆಶಾಕ್ಕs ಮಾಡೀನಿ "

" ನಿನ್ಕಡೇ ಹ್ಯಾಂಗ್ಬಂದೂ ಅಷ್ಟುಬುಲಿಟಿನ್ನು ? "

" ಕೆ. ಜೀ ಬಿಂದ್ಯಾಗs ಹಂಚ್ಲಿಕ್ಕೆ ಯಾರೋ ಕೊಟ್ಟಿದ್ರಂತ. ತಿಂಗ್ಳಾನಗಟ್ಲೇ ಚಹಾಕುಡಿಸಿ ಒಡಕೊಂಡೆ "

" ಭಲೋ ಆತು. ನಿನ್ಕೆಲಸಾ ನೀ ಬರೋಬರೀ ಮಾಡೀದಿ. ತಪ್ಪೇನಿದರಾಗ ? "

" ಇಂಥಾ ಕಲಸಾs ಮಾಡ್ಬ್ಯಾರ್ದ್ದಾಗಿತ್ತು ಮಾಡೀನಿ, ಉಳಸೂ ಕೆಲಸಾ ನಿಂದು. "

" ವಕೀಲಿಕೊಡಬ್ಯಾಡಂತೀ ಏನು ? "

" ಅದೂಅಲ್ಲಾ—ಊರಾಗ ತ್ರಾಸ ಭಾಳಾಗೇದ ಅದಕ್ಕss...."

" ಪೋಲಿಸಪಾ ನೀನು. ನಿನಗೇನು ತ್ರಾಸು ? "

" ಇಲ್ಲಪಾ ನಿನಮುಂದ ಸುಳ್ಳ ಹೇಳೂದುಲ್ಲಾ "

" ಏನು ತ್ರಾಸಾಗೇದ ? "

" ಮನಿಯಿಂದ ಕಚೇರಿಗೆ ಬರೂದ್ರೊಳಗs ಮೂರ್ನಾರೇ ಪಾಂಡವರನ್ನ ss...."

" ಯಾರಪಾ ಅವರು ? "

" ಎಲ್ಲಾ ನಿನಮುಂದೀನೇ ! "

" ಬೇಡೀ ಹಾಕಿಕೊಂಡು ಜೇಲಿಗ್ಹಾಕು ? "

" ಸಾಕ್ಕಾರಾಯಾ ಏನಂತೀದೀ ? "

" ನಾ ಏನನಬೇಕು ? "

" ನಿಮ್ಮಂದಿಗೆ ಹೇಳಕಳಿಸು "

" ಏನಂತ ? "

" ಬೀ.ಜೆ.ಎಂದು ತಪ್ಪಿಲ್ಲ, ಹೊಡಿಯೂದೂ, ಬಡಿಯೂದೂ ನೋಡ ಬ್ಯಾಡ್ರೀ ಅಂತ'' ' ನಿನ್ನ ! s ಇದರಾಗ ಬಿ.ಜೇ ಪೋಲಿಸನ್ನ ! ಅದು ಯಾವ ಗಂಡ್ಸೋ ? '

" ಪಾಂಡವರನ್ನ ಕಂಡು ನಾಕಾಗಿದೆ ಪ್ಯಾಂಗಾರೇ ಹೇಳೇ...."

" ಮತ್ತೆ ನೋ ವೇಚೂ ತಪ್ಪಿದಿ ನಮ್ಮ್ಯಾಲೇ, ತಿಳೀತ ಬಿಡು "

" ಇಲ್ಲಪಾ ಇಲ್ಲ ಸೇನರಾಣಿ ಮಾಡಿ ಹೇಳ್ತಿನಿ. ಓಣ್ಯಾಗ ಅಡ್ಯಾಡ್ಲಿಕ್ಕೆ ಅಂಜಿಕೀನೇ ಒಲ್ಲಿಕ್ಕೆ ಹತ್ತೇದ "

" ನನಗೇನೂ ವಿಶ್ವಾಸಿಲ್ಲ ಬಿಡು. ನಿನ್ಮ್ಯಾಕಿನ ಮ್ಯಾಲಿ "

"ಹೆಚ್ಚಿಗೆ ಏನ ಹೇಳ್ಲಿ. ಹೆಣಮಕ್ಕ ಮದಲಮಾಡಿ ಇವನೇನೋಡ್ರೀ ಸುಟ್ಟಮಾರಿಯುವಾ, ಇವನ್ನ ಹೊಡೀವಲ್ರು, ಅಂತಾರ. ಒಂದೆರಡು ಕಲ್ಲೂಬಿದ್ದು "

'' ಏನೋ ನಾರಾಯಾ ಎಷ್ಟ ಖರೇನೋ ಎಷ್ಟು ಸುಳ್ಳೋ "

ಎಲ್ಲರ ಲಕ್ಷ್ಯ ಕಚೇರಿಯ ಕಡೆಗೆ ಧಾವಿಸಿತು. ಮೂರು ವರುಷದ ಮುದ್ದು ಬಾಲಕ, ಕಚೇರಿಯ ಮೇಲಿನ ರಾಷ್ಟ್ರಧ್ವಜ ಎತ್ತಿ ಹಿಡಿದು ಬಾಲ ಭಾಷೆಯಿಂದ ಕೂಗುತ್ತಲಿದ್ದ, ' ಇದು ನನ್ನ ಕಚೇರಿ ನನ್ನ ದೇಶದ ಕಚೇರಿ, ಈಗ ನಾವೆಲ್ಲ ಸ್ವಂತತರಾಗಿದ್ದೇವೆ. ಇದು ನಮ್ಮ ಕಚೇರಿ ಯಲ್ಲ. ಗುಲಾಮರದು. ಬ್ರಿಟಿಶರು ಓಡಲಿ. ದೇಶಸೇವೆಗೆ ಏಳಲಿ. 'ಕಿತ್ ಇಂದಿಯಾ, ಕಿತ್ ಇಂಡಿಯಾ' ಎಂದು ಕೂಗಲಿ ನೌಕರರೆಲ್ಲ ರಾಜೀನಾಮೆಕೊಡಲಿ.. ಪೋಲಿಸರೇ ಕೇಳಲಿ. ಬನ್ನಿ. ಗುಂಡು ಮದ್ದು ಗಳೊಡನೆ ಓಡಿಬನ್ನಿ. ನಮ್ಮದಾದ ಈ ನಿಶಾನೆಗೆ ನಮಸ್ಕಾರಮಾಡಲಿ. ಇದರ ಸೇವೆ ಮಾಡಲಿ. ಕಚೇರಿಗಳನ್ನು ಹಾಳುಮಾಡಲಿ. ತಂತಿ-ಯನ್ನು ಕತ್ತರಿಸಲಿ. ನಾನು ಚಿಕ್ಕವನಿರುವೆ. ನೀವು ದೊಡ್ಡವರು. ಜಯ್ ಭಾರತಮಾತೆ! ಜಯ್ ಕಾಂಗ್ರೆಸ್!! ಕಿತ್ ಇಂದಿಯಾ ಕಿತ್ ಇಂದಿಯಾ ವಂದೇ ಮಾತರಂ.

ಧ್ವಜ ಕಿತ್ತಿಕೊಳ್ಳಲು ಮಾತನಾಡದಂತೆ, ಬಾಯಿ ಒತ್ತಿ ಹಿಡಿಯಲು ಪೋಲೀಸರು ಮುಂದಾದರು. ಕಚೇರಿಯಲ್ಲಿದ್ದ ಸಾಬರು ಬೇಡವೆಂದು ಸನ್ನೆಗೈದರು. ಕೇಳಲು ಬಾಲಭಾಷೆ ಸಾಬರಿಗೆ ಸಂತಸವಾಗಿರಬೇಕು. ಕೇಳಲು ಕಿವಿಸವಿಯಾಗಿರಬೇಕು. ಬಾಲಕನ ಬದಿಯಲ್ಲಿ ನಿಂತರು. ಕಿರುನಗೆ ತೋರುತ್ತ, ಮುದ್ದು ಮಾತುಗಳನ್ನು ಆಲಿಸಿದರು. ಸಾಬರಂತೆ ಸಿಪಾಯಿಗಳೂ ಮುಗ್ಧರಾದರು. ಶಿರಸ್ತೇದಾರರೂ ಮೆಚ್ಚಿದರು. ಕಾರಕೂನರು ಬಾಲಕನ ದಿಟ್ಟತನ, ಮನಮೋಹಕ ಮುಖ, ಕಕ್ಕುಲತೆ ಉಕ್ಕಿಸುವ ವಾಣಿಗೆ ಮನಸೋತರು. ದರ್ಪಕ್ಕೆ ಬದಲು ಮನೆ ಮಗುವನ್ನು ಕಂಡಷ್ಟು ಪ್ರೀತಿಬಲಿಯಿತು. ಕಚೇರಿಯ ಕೆಲಸಕ್ಕೆ ಬಂದವರೂ ಬೆರಗಾಗಿ ನೋಡಿದರು. ದುಂಡ ಮೈಗೆ ಒಪ್ಪುವ ಉಂಡಚಣ್ಣ, ಬಿಳಿಯವೇ ಅಂಗಿ. ಬಿಳಿ ಟೊಪ್ಪಿಗೆ, ಅದೇ ತರದ ಸಂಪಿಗೆಯ ಮೈಬಣ್ಣ. ಹಣೆಯಲ್ಲಿ ಕುಂಕುಮ. ರಾಷ್ಟ್ರಧ್ವಜವನ್ನು ಎತ್ತಿ ತೋರುತ್ತ ನೆರೆದ ಸಮೂಹವನ್ನು ಸುತ್ತಲೂ ತಿರುಗಿ ನಿರುಕಿಸಿ ಕಿತ್ ಇಂಡಿಯಾ ಎಂದು ಹೇಳಿದ. ಸಾಬರು ಅವನ ಧೈರ್ಯಸ್ಥೈರ್ಯಕ್ಕೆ ಮೆಚ್ಚಿ ಕೇಳಿದರು

"ಇಷ್ಟೆಲ್ಲಾ ಮಾತು ಯಾರು ಕಲಿಸಿದ್ರಪಾ ನಿನಗ ?"

"ನಮ್ಮಪ್ಪನೇ ಕಲಿಸ್ಯಾನ"

"ನಿಮ್ಮಪ್ಪಾ ಎಲ್ಲಿದ್ದಾನ ?"

"ನನಗ ಗೊತ್ತಿಲ್ಲಾ"

"ಅವನ ಹೆಸರೇನೂ"

"ಗಾಂಧೆಪ್ಪಾ ?"

"ಸಾಲಿಗೆ ಹೋಗ್ತೀ ಇಲ್ಲೋ ?"

"ಇಲ್ಲ್ರಿ ?"

"ಯಾಕ ಹೋಗೂದಿಲ್ಲಾ ?"

"ಜೇಲಿನ ಸಾಲಿಗೇ ಹೋಗ್ಬೇಕಂತ್ಬಿಟ್ಟೆನಿ"

"ಜೇಲಿಗೆ ಕಳಸೂದೇ ಇಲ್ಲಾ ನಿನ್ನ"

" ಸೋತ್ರದೇನು ಸಲಕಾಲ "

" ನಿನ್ನ ನೋಡಿ ಹೆದರಿ ಬಿಟ್ಟೀದಪಾ "

" ಹೆಪಲಿಗಲ ಮುಂದಿನ ಊರಿಗೆ ಹೋಗತೀನಿ "

" ಯಾಕ್ರ ? "

" ಈ ಊರಾಗ ಮಾಡಿದ್ಹಾಂಗೇ ಮಾಲ್ಲಕ್ಕೆ "

" ಅಲ್ಲಿಂದ ಏನ್ಮಾಡ್ತೀ ? "

" ಹಿಂಗ ಮಾಡ್ತೀನಿ " ಎಂದವನೇ ಜೇಬಿನಲ್ಲಿಯ ನೂರಾರು 'ಕ್ರಾಂತಿ' ಪತ್ರಿಕೆಯ ಪ್ರತಿಗಳನ್ನು ಗಾಳಿಗೆ ತೂರಿದ. ಗಾಳಿಯ ವೇಗಕ್ಕೆ ಎಲ್ಲೆಲ್ಲಿಯೂ ಪಾರಿವಾಳದಂತೆ ಹಾರಿದವು. ಸಿಪಾಯರಿಗೆ ನಾಬರಿಗೆ, ನೆರೆದವರಿಗೆ ಗಾಳಿಪ್ರತಿಗಳನ್ನು ಕೊಟ್ಟಿತು. ಜನ ಆತುರಗೊಂಡು ಓದಿದರು. ಕಸಿಯಲು ಹೇಳಿದುದಕ್ಕೆ ಜನಕೊಟ್ಟರು. ಬಾಲಕನು ಕೈತಟ್ಟಿ ನಗುತ್ತಲಿದ್ದ. ಬಾಲಕನ ವರ್ತನೆ ಅಸಹನೀಯವೆಂದು ನೆರೆದ ಜನಕ್ಕೆ ಅನ್ನಿಸಿದರೂ, ನಾಬರಿಗೆ ಕೋಪ ಬರಲಿಲ್ಲ. ಧ್ವಜಹಿಡಿದು ಎದೆಉಬ್ಬಿಸಿ ನಿಂತ ಬಾಲಕನನ್ನು ಎತ್ತಿದರು. ನಾಬರು ವಾತ್ಸಲ್ಯದಿಂದ ನೋಡಿದರು. ಬಾಲಕನು ಅನುಕೂಲವಾಯಿತೆಂದು ಧ್ವಜವನ್ನು ಸಾಬರ ಶಿರೋಭೂಷಣೆಯನ್ನಾಗಿಸಿದ. ಕೆಳಗಿಳಿಸಿದರು; ಕೇಳಿದರು.

' ಈ ಕಾಗದಾ ಯಾರು ಕೊಟ್ರವಾ ನಿನ ಕೈಯಾಗ ? '

' ಅದು ಒಂದು ಮಜಾನೆ ಅದಲ! ' ನಕ್ಕು ನುಡಿದ ಬಾಲಕ.

ನಾಬರು ಕೇಳಿದರು ಹೇಳೂ ಎಂದು. ಪ್ರಾರಂಭವಾಯಿತು, ಬಾಲಕನ ಹೇಳಿಕೆ.

' ದಿನಾ ಕನಸು ಬಿದ್ದು '

' ಈ ಕಾಗದಾ ನಿನ್ಗೆ ಹ್ಯಾಂಗ್ಬಂದೂ ಹೇಳು. ಕನಸ್ಹೇಳ ಬ್ಯಾಡಾ....'

'ಒಂದು ದೊಡ್ಡ ಕನಸು ಬಿತ್ತು. ಕನಸಿನ್ಯಾಗs ಏನೇನೋ ಕಾಣಿಸ್ತು. ಅವೆಲ್ಲಾ ಮತ್ತೆ ಹೋತು. ಒಂಚೆಿತ್ಲಿತ್ತು. ಗಾಡೀ ಮ್ಯಾಲೇ ದೇವಲು, ನಾನೋತ್ತಿದ್ದ. ದೇವಲ ಚಿತ್ರಹೋಗಿ ಗಾಂಧೀದಾತು. ಅದಲಾಗಿಂದ ಬದಿಗೀ ಊಲ್ಕೋತ ಉಲ್ಕೋತ ಬಂದಾ ಗಾಂಧಿವ್ಹಾ ? ' ಸಾಬರನ್ನ ನೋಡಿದ. ಸಾಬರು ಹೇಳಲು ಹುರಿದುಂಬಿಸಿದರು.

"ಬಂದವನೇ ಕೃಪಿಟಮ ಎಚ್ಬಿಸಿ ಕೂಲಿಸಿ. ಆಗ ಹೇಳಿದ್ನೆಲ್ಲಾ ಅವೆಲ್ಲಾ ಮಾತು ಕಲಿಸಿದಾ. ಕಲ್ಬುಡಕs ಕಾಗ್ದನs ಕಚೇಲ್ಯಾಗs ಹಂಚೂ ಅಂದಾs ಎಚ್ಚಲಿಕ್ಯಾತು."

"ಮುಂದೇನ್ಮಾಡಿದೀ"

"ಕನಸೂ ಮತ್ತೇ ಹೋಗಿತ್ತು, ಹೊಲಗೆ ಹೋದೆ ಆಡ್ಲಿಕ್ಕೆ ಅಲ್ಲೇ ಒಂದು ಕಲ್ಲು ಬಿದ್ದಿತ್ತು. ಕಲ್ಕೋಡಿ ಮತ್ತs ಕನಸು ನೆನಪಾತು. ಎತ್ತಿ ತಗೊಂಡ್ನಾಗ ಈ ಸಿನಾಸಿ ಕಾಗದಾ ಸಿಕ್ಕೊ. ತಗೊಂಡು ಓಡಿಕೋತ ಬಂದೆ.

"ಬಂದೀದಿ ಕೆಲ್ಸ ಮಾಡಿದಿ. ಹೋಗಿನ್ನ" ಎಂದು ಸಾಬರು ಧ್ವಜ ಕಸಿದುಕೊಳ್ಳಲು ಮುಂದಾದರು. ಬಾಲಕನು ಹಟ ಮಾಡಿದ. ಕಚೇರಿಯಲ್ಲ ಕರಮೊಯ್ದರು ಬಾಲಕನನ್ನು. ವಿಕ್ರಮನು 'ಕನಿಸ್ಬಿದ್ದಿತ್ತು ಕನಸು. ಎನ್ನುತ್ತ ತಿರುಗ ತೊಡಗಿದ ಲಾಕಪ್ಪಿನಲ್ಲಿ.

———

# ಅಯ್ಯೋ ! ಪಾಪ !!

ಬಿ. ಜೇ. ಹೇಳಿದುದು ನಿಜವೇ ? ಅಣಕವಾಡಿದನೇ ? ಅವನು ಹೇಳಿದಂತೆ ಪಾಂಡನ ಪ್ರತಿಷ್ಠಾಪನೆ ಆಗಿದ್ದಲ್ಲಿ ಉತ್ತಮವೇ ಆಯಿತೆಂದ. ಇನ್ನೂ ತೊಂದರೆಗಳು ಮುತ್ತಲಿ. ನಾಕಾಗಿ ರಾಜೀನಾಮೆಕೊಡಲಿ ಎಂದು ಹಾರೈಸಿದ. ಒಬ್ಬನೇ ಕುಳಿತು, ತಿರುಗಿ, ವಿಚಾರಿಸಿಯೂ ಬೇಸರಗೊಂಡ. ಬಾಲಕನ ವಿಷಯ ತಿಳಿಯಲು ಆತುರ ಅವನಿಗೆ. ಕಲಿಸಿದವರ ಹೆಸರು ಕೇಳಲು ಹೊಡೆದರೆ ? ಎಳೆ ಮಗುವನ್ನು ಬೂಟಿನಿಂದ ತುಳಿದರೆ? ಗುಣೆ ಯಿಂದ ಘಟ್ಟಿಸಿದರೇ? ತಿಳಿಯುವ ಬಗೆ ಹೇಗೆ? ಯಾರನ್ನು ಕೇಳುವುದು? ಬಾಲಕನ ಗತಿ ಏನಾಯಿತು? ಭಾರತಪ್ಪನಂತೆ ಬಾಲಕನಿಗೆ ಆಗದಿರಲಿ ಎಂದು ದೇವರಿಗೆ ಬೇಡಿದ.

ಭಕ್ತವತ್ಸಲನಲ್ಲವೇ ಭಗವಂತ. ವಿಕ್ರಮನ ಮೊರೆ ಕೇಳಿದ. ಬೇಡಿಕೆ ಈಡೇರಿಸಿದ. ಬಿ.ಜೆ. ಸಂದೇಶ ತಂದ. ಬಾಲಕನನ್ನು ಮನೆಗೆ ಕಳುಹಿದರಂತೆ! ತಂದೆತಾಯಿಗಳಿಗೆ ಬಾಲಕನನ್ನು ಒಪ್ಪಿಸಿಬರಲು ಜೊತೆ ಪೋಲಿಸನನ್ನು ಕಳುಹಿದರಂತೆ ಸಾಬರು. ಸಾಬರು ಬಾಲಕನ ವಿಷಯ ವಾಗಿ ತೋರಿಸಿದ ಪ್ರೀತಿಆದರಗಳನ್ನು ಕೇಳಿ, ಕೊಂಡಾಡಿದ. ತನ್ನ ಅಪೇಕ್ಷೆಯಂತೆ ಬಿಡುಗಡೆ ತೊಂದರ ಇಲ್ಲದೇ ಆದುದಕ್ಕೆ ಹಿಗ್ಗಿದ.

ಬಿ. ಜೇ. ತನ್ನ ಕತೆ ಬೆಳಿಸಿದ. ವಿಕ್ರಮನಿಂದ ಆಶ್ವಾಸನೆ ಪಡೆಯಲು ಯತ್ನಿಸಿದ. ಪೂರ್ವ ಸ್ನೇಹದ ದಿನಗಳನ್ನು ಸ್ಮರಿಸಿದ. ವಿಕ್ರಮನ ಸಾಶಂಕವೃತ್ತಿ ದೂರವಾಗಲಿಲ್ಲ. ಎಲ್ಲದಕ್ಕೂ ಎದುರುಮಾತು. ಪೋಲಿಸ ಬಿ.ಜೆ. ದ್ರಾವಿಡ ಪ್ರಾಣಾಯಾಮಗೈದ. ಪೋಲಿಸ ಜೀವನವು ಮುಳ್ಳು ಹಾಸಿಗೆಯೆಂದ. ದೇಶದ್ರೋಹಿ ಎಂದು ತನ್ನನ್ನು ತಾನೇ ಹಳಿದುಕೊಂಡ. ಏನಾದರೂ ವಿಕ್ರಮನಲ್ಲಿ ಕರುಣೆಕೊನರಲಿಲ್ಲ. ಅಭಿವಚನ ನೀಡಲಿಲ್ಲ. ಹೊಟ್ಟೆಯಲ್ಲಿಹೊಕ್ಕು ಬಿರಿಯುವ ಉಪಾಯವೆಂದೇ ಭಾವಿಸಿದ ವಿಕ್ರಮ. ಬಿ ಜೇ. ನಿರುಪಾಯನಾಗಿ ನಮಸ್ಕಾರ ಕೊಟ್ಟು ನಡೆದ. ವಿಚಾರ ಲೋಕಕ್ಕೆ ವಿಕ್ರಮನು ತೆರಳಿದ.

ಪೋಲೀಸರ ಕಾವಲಿನಲ್ಲಿ ಕೈದಿಗಳ ಹೊಸ ತಂಡ, ಸಿರಸ್ತೇದಾರರ, ಸಂದರ್ಶನ ಕೊಂಡಿತು. ವಿಕ್ರಮನಿಗೆ ಜೊತೆಗಾರರು ದೊರಕಿದರು. ಹದಿಮೂರು ಗೆಳೆಯರು ದೊರೆತುದುದಕ್ಕೆ ಕುಣಿದ. ಹನ್ನೆರಡು ವರುಷದ ಹುಡುಗನೂ ಅದರಲ್ಲಿದ್ದ. ಅವನು ಯಾವ ಅಪರಾಧ ಗೈದಿರಬಹುದು? ಏತಕ್ಕೆ ಬಂಧಿಸಿದರು? ಕದಿದ ವಸ್ತುವು ದೊರೆತಿರಬಹುದೆಂದು ನಿರ್ಧರಿಸಿದ. ಕೆಲವರು ನಗುವರು! ಒಬ್ಬಿಬ್ಬರು ಮೊಳಕಾಲಲ್ಲಿ ಮುಖವಿರಿಸಿ ಮೌನತೆ ವಹಿಸಿದ್ದರು ಕೆಲವರು ಮುಂದಿನ ಚಿಂತೆಗೆ ತೊಡಗಿದ್ದರು. ಒಬ್ಬನು ಚಿಂತೆ ಪರಿಹಾರ ಪರಮಾತ್ಮನೇ ಆಗಿ ರುಮಾಲದ ಗಂಟನ್ನು ಸಡಿಲಿಸಿದ. ಹರ್ಷೋದ್ರೇಕದಿಂದ ನಲಿದರು, 'ಕೃಷ್ಣಮುಖಿ' ಯು ಎಲ್ಲರ ಕೈಬೆರಳ ಸಂದಿ ಸೇರಿ ಅಗ್ನಿ ಸಂಸ್ಕಾರ ಹೊಂದಿ, ಹೊಗೆ ಹೊರಡಿಸಿತು. ಗೆಳೆಯರ ಬಳಗದ ಪರಿಚಯಕ್ಕೆ ತೊಡಗಿದ. ಅವರು ಲಾಕಪ್ಪು

ಗಳನ್ನು ಕಂಡ ಕಾರಣ, ಮಾಡಿದ ಅಪರಾಧ, ಊರು, ಕುಲಗೋತ್ರ ಗಳನ್ನು ತಿಳಿದ. ಬಾಲಕನ ವಿಚಾರ ಅವನ ಅಂತಃಕರುಣವನ್ನೇ ಕಲುಕಿತು. ಏತಕ್ಕೆ ಹಿಡಿತಂದರು ಎಂದು ಕೇಳಿದುದಕ್ಕೆ ಕಣ್ಣೀರೇ ಉತ್ತರ. ಹರಕು ಹರಕಾದ ದಪ್ಪಂಚಿನ ಪಂಜಿ ಉಟ್ಟಿರುವ. ಕೆಂಪು ಬಣ್ಣದ್ದೇ ಇರಬಹು ದೆಂದು ಅನ್ನಿಸುವ ಹರಕು ಅಂಗಿ, ನಿಸ್ತೇಜ ಮುಖ, ಅರ್ಥಭಾವವು ಮುಖದಲ್ಲಿ. ದೀನಭಾವದಿಂದ ನೋಡುತ್ತಲೇ ಇದ್ದ. ತಾನು ಎಲ್ಲಿಗೆ ಬಂದೆ? ತನ್ನ ತಂದೆ ತಾಯಿಗಳು ಎಲ್ಲಿ? ಮುಂದೆ ತನಗೇನು ಮಾಡು ವರು? ಇವರೆಲ್ಲರೊಡನೆ ಹೇಗೆ ಇರಲಿ? ಎಂಬ ವಿಚಾರಗಳು ಹುಡುಗನಲ್ಲಿ ಹುಟ್ಟಿರಬಹುದು.

ಗಡ್ಡದಸಾಬರು ಸಾದಾ ವೇಷದಲ್ಲಿ ವಿಕ್ರಮನನ್ನು ಮಾತನಾಡಿಸಿ, ತಾತ್ಪೂರ್ತಿಕವಾಗಿ ಮುಕ್ತಮಾಡಿದರು. ಸಿಪಾಯಿಗಳ ಸಮೂಹ ಗಂಟೆಯ ಬುಡಕ್ಕೆ ಕುಳಿತಿದ್ದಿತು. ವಿಕ್ರಮನನ್ನು ಮರ್ಯಾದೆಯಿಂದ ಬರಮಾಡಿ ಕೊಂಡರು. ಗಡ್ಡದವರಿದ್ದುದರಿಂದ ಭಯಕ್ಕೆ ಕಾರಣವೇ ಇರಲಿಲ್ಲ. ಅಷ್ಟೂ ಜನಕ್ಕು ಮಿಗುವಷ್ಟು ಸಿರಾ, ಉಪ್ಪಿಟ್ಟು, ಚಹ, ಬಿಸ್ಕೀಟು ಆಗ್ರಹಮಾಡಿ ತಿನಿಸಿದರು. ತಾವೂ ತಿಂದರು. ವಿಕ್ರಮನ ವಶಕ್ಕೆ ನಾಲ್ಕು ದಿನ ನಾಲ ಬಹುದೆನ್ನುವಷ್ಟು ಪೌತಿಯ ಸಾಮಗ್ರಿಗಳನ್ನು ಅನುಗ್ರಹಿಸಿದ. ವಿಕ್ರಮ ನಿಗೆ ನಿಲುಕದ ವಿಷಯವಾಯಿತು. ತನ್ನಮನೆಯಿಂದ ಈ ತರಹದ ಸಾಮ ಗ್ರಿಗಳು ಬಂದಿವೆ ಎಂದು ಯಾರು ಹೇಳಿದರೂ ನಂಬುತ್ತಿರಲಿಲ್ಲ. ಯಾರು ಕಳಿಸಿರಬಹುದು? ಗೆಳೆಯರೇ? ಅವರಲ್ಲಿ ಯಾರು? ಗೆಳೆಯರ ಗುಣ ಕರ್ಮವಿಭಾಗಿಸಿದ. ಅವರಲ್ಲಿ ಯಾಗೂ ದೊರೆಯಲಿಲ್ಲ. ಪೋಲಿಸರೇ.... ಉಂಟೇ ಎಲ್ಲಿಯಾದರೂ ಈ ವಿಚಾರ! ಕೊನೆಗೆ ಯಾರಿಂದ ತಿಂಡಿತೀರ್ಥ ಗಳು ಬಂದುವೆಂಬುದು ನಿರ್ಧಾರವೇ ಆಗದಿರಲು, ಯಾರೇ ತಂದಿರಲಿ, ತಿನಿಸಿದರು. ಸಾಕು. ಎಂದು ಸುಮ್ಮನಾದ ಅರ್ಥಾತ್ ಯೋಚನೆ ನಿಲುಕದ್ದಕ್ಕೆ ಬೆಪ್ಪನಾದ.

ತಿಂಡಿತೀರ್ಥಗಳು ಸಿಪಾಯಿಗಳನ್ನು 'ಅs. ಬ್ಬ.s ಎನ್ನಿಸಿ ಉಳಿದಿ ದ್ದವು. ವಿಕ್ರಮನು ಕೈದಿಗಳಿಗೆ ಹಂಚಬೇಕೆಂದು ಮನದಲ್ಲಿ ಯೋಚಿಸಿದ.

ತನ್ನದು ಅಹುದೋ ಅಲ್ಲವೋ ಕೇಳಿದುದಕ್ಕೆ ಬೇಡವೆಂದರೆ ಎಂಬದು ಕಾಡಿತು. ಗಡ್ಡದಸಾಬರು ವಿಕ್ರಮನ ಅಪ್ಪಣೆ ಕೇಳಿದರು. 'ರಾಯ್ರು ಇವನ್ನೆಲ್ಲಾ ಕೈದಿಗೆ ಕೊಡೋಣು ಹ್ಯಾಂಗ? ನಿಮ್ಮನ್ನ ಕೇಳಬೇಕು.'

"ನಾಯಾಕ ಬ್ಯಾಡ ಅನ್ಲಿ, ಕೊಡ್ರೀ"

"ನಿಮಗಂತ ಕಳಿಸಿದ್ದು, ಇಟ್ರ ಕೆಟ್ಟು ಹೋಗ್ತದ, ಪಾಪ ಕಂಡಿರೋದೇ ಇಲ್ಲಾ, ಸೆನಿಸಿತಿಂತಾವ." ಎಂದು ಸಾಮಗ್ರಿಯನ್ನು ಎತ್ತಿದರು ಗಡ್ಡದವರು. ಕೈದಿಗಳಿಗೆ ವಿಕ್ರಮನದೆಂದು ಹೇಳಿ ಎಲ್ಲರಿಗೂ ಸಮ ಪ್ರಮಾಣದಿಂದ ಹಂಚಿದರು. ಎಂತಹ ಆನಂದ ಕೈದಿಗಳಿಗೆ ಕಾಣೆವೂ ಎಂದುದು ಕೈಸೇರಿದುದಕ್ಕೆ ಆನಂದಿಸಿದರು. ಗಡ್ಡದವರೇ ನಿಷ್ಪಕ್ಷಪಾತದಿಂದ ಕೊನೆಗ ಚಹವನ್ನು ನೀಡಿದರು. ವಿಕ್ರಮನು ಗಡ್ಡದವರ ಗುಣ ವರ್ಣನಮಾಡುತ್ತ ಕೈದಿಗಳ ಸಂತೃಪ್ತ ಭಾವನ್ನು ಕಾಣುತ್ತ ನಡೆದ.

ವಿಕ್ರಮನು ತನ್ನ ಕೋಣೆಯ ಎದುರುನಿಂತು ಬಾಗಿಲು ತೆರೆಯಲು ಹೇಳಿದ

ಕುಳಿತಲ್ಲಿಂದಲೇ ಕ... ...ಗರು. ಹೊರಗೇ ...ದಲು. ವಿಕ್ರಮನಿಗೆ ಒಳಗಿರುವದೇ ಪ್ರಿಯವಾಗಿದ್ದಿತು. ಬರೆವುದಕ್ಕೆ ವಿಷಯ ಸಮಂಜಸ ಸಮಶ್ಯಾತ್ಮಕವಿದ್ದರೆ ?

ಕೈದಿಗಳ ಬಳಗದ ಅಧ್ಯಕ್ಷತೆ ವಹಿಸಿದ ಅವನನ್ನು ಕೂಳು ಕಾಣದ ಕೈದಿಗಳು ಬಾಯ್ತುಂಬ ಹೊಗಳಿದರು. ರುಚಿಯಾದ ಸಿರ, ಉಪ್ಪಿಟ್ಟು, ಹೊಟ್ಟೆ ಹೊಕ್ಕದುದರಿಂದ ಹೊಗಳಿಕೆ ಬಹಳವಲ್ಲ ಅವನಿತ್ತ ಅನ್ನ ಒಳಗಿರುವುದರಿಂದಲೇ ಇರಬಹುದು. ತಾವು ಬಂದ ಕಾರಣವನ್ನು ವರ್ಣನೆ, ಅತಿಶಯೋಕ್ತಿ ಅಸತ್ಯಗಳಿಲ್ಲದೆ, ಇದ್ದುದನ್ನು, ಮಾಡಿದುದನ್ನು, ಇದ್ದಂತೆ ಹೇಳಿದರು. ಕಾಯಿದೆ ಕೇಳಿದರು. ಬಿಡಬಹುದಲ್ಲವೇ ಎಂದರು. ತಮ್ಮದು ಮೊದಲು, ತಮ್ಮದು ಮೊದಲೆಂದು ಹೇಳಿದರು. ಯಮಧರ್ಮನ ಹಿಂಸೆಗೂ ಬಾಯಿ ಬಿಡದ ಬಂಟರು. ವಿಕ್ರಮನ ಸವಿನುಡಿಗೆ ಮಾಡಿದ ಗುಹ್ಯಕೃತಿ-ಗಳನ್ನು ಬಹಿರಂಗಪಡಿಸಿದರು.

ತಾಯಿಯ ತಂಗಿಯನ್ನು, ಹೆಂಡತಿಯನ್ನು, ನಡತೆ ಸರಿ ಇಲ್ಲವೆಂದು ನಿರ್ಧರಿಸಿ, ಅಕ್ಕನೇ ಆದ ಹೆಂಡತಿಯ ತಾಯಿಗೆ ತಿಳಿಸಿ, ಕುಡುಗೋಲಿಗೆ ಬಲಿಕೊಟ್ಟ ಕುಂಟ! ತುಡಗೇ ಜೀವನದ ಆದ್ಯ ಕರ್ತವ್ಯವೆಂದು ಸಾರುವ ಬಂಟ!! ಸಂಗೀತ ಶಿಕ್ಷಕ ಪ್ರೇಮದ ಬೀಜಬಿತ್ತಿ ಫಲವೆಂದು ಜೇಲಿಗೆ ಬಂದ ಮಾಸ್ತರ. ಒಡವೆ ಮಾಡಿಸಲು ಬಂದವಳನ್ನು ಕೆಡಸಿದನೆಂದು ಅಪವಾದ ಹೊತ್ತು ಬಂದ, ಪತ್ತುಗಾರ. ತೆನೆ ಕದ್ದುದಕ್ಕಾಗಿ ಶೆರೆಮನೆ ಕಂಡ ಶೂರ, ಪೋಲಿಸ ಇನ್ಸಸ್ಪೆಕ್ಟರರ ಮನೆಯ ದಂತದ ಒಡವೆ ತುಡುಗು ಮಾಡಿದ ಚಿಗರಕಾರ. ಊರಿಗೇ ಹೊತ್ತುನಿಂತ ಹೆಣ್ಣನ್ನು ಉರಿಯುವ ಬಣಿವೆಗೆ ಹಾಕಿದವ, ಹೊಲದ ಬದುವಿನ ನ್ಯಾಯದಲ್ಲಿ, ಎದುರಾಳಿಯ ಕೈಕಡಿದವ. ಜೂಜಾಡಿದಾಗ ಸಿಪಾಯಿಗಳಿಗೆ G. P. L. ಕೊಡದ್ದಕ್ಕೆ ಬಂದರೆಲ್ಲರೂ, ಚಿಕ್ಕದಾದ ರೀತಿಯಲ್ಲಿ, ವಿಕ್ರಮನಿಗೆ ಕಥಾಶ್ರವಣ ಮಾಡಿಸಿದರು, ವಿಕ್ರಮನಿಂದ ಸಲಹೆ ಸೂಚನೆಗಳನ್ನು ಬಯಸಿದರು.

ವಿಕ್ರಮನು ವಕೀಲನೆಂಬುದಾಗಿದ್ದಿತೋ ಅವರೆಲ್ಲರ ಭಾವನೆ. ವಿಕ್ರಮನು ಮನೆ, ಮಕ್ಕಳ ಚಿಂತೆಇಲ್ಲದೆ ಬರೆಯುವ ಹುಚ್ಚು ಸಾಹಿತಿ ಎಂಬುದು, ಕೈದಿಗಳಿಗೆ ತಿಳುವುದು ಸಾಧ್ಯವಿಲ್ಲ. ವ್ಯವಹಾರ ಜ್ಞಾನಿಯನ್ನ ಬೇಕೇ.— ಪೇಟೆಗೆ ಕಾಲಿಕ್ಕಿದರೆ ತಮ್ಮ ಕಡೆಗೇ ಗಿರಾಕಿ-ಬರಲಿ ಎಂದು ಆಗ್ರಹದಿಂದ ಕರೆಯುವರು. ವಿಕ್ರಮನು ತಿಳುದುದು – ತಾನು ಎಲ್ಲರಿಗೂ ಬೇಕಾದವನೆಂದು. ಹೇಳಿದ ಬೆಲೆಕೊಟ್ಟು ವಸ್ತುವನ್ನು ಒಯ್ಯುವೇ ಆಗ್ರಹದ ಕಾರಣ. ಲೋಕಾನುಭವವೇ ಗುರು[illegible]ಪರಮರೇ ಗಂಭೀರನಿನಾದ. ಶ್ರೀಮಂತನ [illegible]

[illegible]

ಚಿತರು ಕಸಗೂಡಿಸುವವರು. ಹುಲ್ಲು ಗುಡಿಸಿಲಲ್ಲಿ ಇರುವವರು, ಥಿರುಕರು, ಕುರುಡರು, ಇವರೇ. ಜಗಳವಿರಲಿ ಅತ್ತೆಸೊಸೆಯರ ಕಾಳಗ ಸಂಧಿಸಿರಲಿ, ಪ್ರಣಯಿಗಳ ಪ್ರಿಯಮಾತಿರಲಿ, ಕದ್ದು ಕೇಳುವ ದೇ. ಭ. ಗಳ

ಗೆಳೆತನ ನರಕಕ್ಕೆ ಎಳೆದುದರಿಂದಲೇ ಬಂದವ. ದೇಶಪ್ರೇಮವೆಲ್ಲ ಬರೆಹ ದಲ್ಲಿಯೇ! ಒಂದೊಂದುಸಲ ಹೇಳಿಕೊಳ್ಳುವ ಸ್ವಭಾವವೂ ಇದೆ. ಜೇಲಿ ನಲ್ಲಿ ಮಾತ್ರ ಸ್ವಭಾವದ ಪರಿವರ್ತನೆಯೂ ಆಗತೊಡಗಿದೆ.

" ಏನು. ಕಲ್ಲಿದೀ ಜನಾನಪಾ! ಅಬ್ಬಬ್ಬಾ!! "

" ಯಾರ್ರೀ ರಾಯ್ರs." ಎಲ್ಲರೂ ಕೇಳಿದರು.

" ಈ ಪೋಲಿಸರಿಗೆ ಕರುಣಾ ಅನ್ನೂದು. ಎಳ್ಳಷ್ಟೂ ಇರೂದಿಲ್ಲಾ "

" ಈಗೇನಾತ್ರಿ ಮತ್ತs ? "

" ಈ ಹುಡಗನ್ನೋಡ್ರಿ s ...." ಹುಡುಗನನ್ನು ಹತ್ತಿರ ಕೂಡಿಸಿ ಕೊಂಡು ಕಕ್ಕುಲತೆ ತೋರಿದ. ಹುಡುಗನು ವಿಕ್ರಮನಿಂದ ದೂರ ಸರಿದು ಅನಾಥನಂತೆ ನೋಡಿದ. ಆಪ್ತರು ಯಾರೂ ಇಲ್ಲವೆಂದು ಮನದಲ್ಲಿಯೇ ಮರುಗಿರಬೇಕು. ಮಾತನಾಡಿಸುವದರಲ್ಲಿ ಜಯಶೀಲಯಾದನು ವಿಕ್ರಮ. ಕೆಲವರು ತಮ್ಮ ಕಥೆಯೇ ಮಹಾಭಾರತದಷ್ಟಿರುವಾಗ, ಹುಡ ಗನದು ಬೇಡವೆಂದು, ಒರಗಿದರು. ವಿಕ್ರಮನಿಗೆ ಅವಮರ್ಯಾದೆ ಆದೀತೆಂಬ ಭಯ ದಿಂದ, ಒರಗದೇ ಕುಳಿತರು ಕೆಲವರು. ಕೇಳುವ ಕುತೂಹಲದಿಂದ ವಿಕ್ರ ಮನಂತೆ ಕುಳಿತರು ಕೆಲವರು. 'ಆಗ ಅವ್ವ ಎಡ್ಡು ರೊಟ್ಟಿ ತಗೂಂಡು ಒಂದು ತುಣುಕು ಮುರಿದು ಕುಂತಿದ್ದೆ' ಹೇಳಿದ ಹುಡುಗ.

" ಯಾವಾಗs "

" ಗೌಡಪ್ನವರು ವಾಲೀಕಾರನ ಕೂಡ ಬಂದಾಗ "

" ಯಾಕ ಬಂದಿದ್ರು ! "

" ನನ್ನ ಹಿಡಕೊಂಡು ಹೋಗಾಕರೀ "

" ಏನ್ಮಾಡಿದ್ದೀ ? "

" ನೋಡ್ರೀ ಬೆಳಗಿನ್ಯಾಗೆದ್ದು ಎತ್ತು ಬಿಟಗೊಂಡಕ್ಯಾಸ ಹೊಲಕ್ಕೆ ಹೋದ್ವಿ "

" ಯಾರ್ಯಾರು ? "

"ನಾನ್ರೀ-ನಮ್ಮ ತಂಗೀ ಗಂಡಾ ಶಿವಬಸಪ್ಪ್ರ, ಮತ್ತಽ ಗುರುಸಿದ್ದಾ- ದ್ಯಾವಾ ?"

"ಮುಂದ ?"

"ಗುರುಶಿದ್ದಾ- ದ್ಯಾವಾಽ ತಮ್ಮ ತ್ವಾಟದಾಗ ಹೋದರ್ರೀ! ಅವರ ತ್ವಾಟದಿಂದಽ ನಮ್ಮ ಹೊಲಾಬಂದಽ ಕೂಗಳತೀ ಮ್ಯಾಗ ಐತ್ರಿ ನಮ್ಮ ಹೊಲದ ಅತ್ಲಾಗಿನ ದಂಡ್ಯಾಗಽ , ಹೊಳಿಗಂಗವ್ವಾ ಕಲ್ಲಾಗಿಂದ ಹರಿದು ಬಂದಾಳ್ರಿ"

"ಆಮ್ಯಾಗ"

'ಆಮ್ಯಾಗ ನೋಡ್ರೀ, ಎಡೀ ಹೊಡೆಯೂ ಹಂಗಾಮು. ಗೇಣ ಎಡ್ಡಗೇಣ ಮ್ಯಾಗ ಎದ್ದಿದ್ದೂರಿ. ಹಚ್ಚಾಽಗ ಮುರೀತಿತ್ತು ಭೂಮಿ. ಎಮ್ಮಿ ಕಾಯ್ಕಂತ ಕುಂತೆ ಬದುವಿನ ಮ್ಯಾಗ"

"ನಿಮ್ಮ ತಂಗೀ ಗಂಡಾ ?"

"ಶಿವಬಸಪ್ಪ್ರೀ ? ಎಡೀ ಹೊಡ್ಯಾಕ ಸುರು ಮಾಡಿದ. ನಾನೂ ಎಮ್ಮಿ ತಿರುವಿಕೊಂಡು ಸುತ್ತಾಡಿದಿನ್ರಿ. ಆರ್ತಾಸು ಹೊತ್ತಾಗಾಣಾ, ಎತ್ತು ಬಿಚ್ಚಿ, ಕ್ಯಾಕೀ ಹಾಕಿದಾ ಶಿವಬಸಪ್ಪ. ಕ್ಯಾಕೀ ಕೇಳಿ, ಅಲ್ಲಿಂದ ಎಮ್ಮಿ ಓಡಿಸಿಕೊಂಡು ಹೊಳೀ ಹೊಕ್ಕೆ. ಎಮ್ಮೀ ನೀರಾಗ ಬಿಟ್ಟು, ಜಳಕಾ ಮಾಡಾಕ ನೀರಾಗ ಇಳೂತಿದ್ವೀ, ಗುರುಶಿದ್ದಾ-ದ್ಯಾವಾ ಕೂಡಿಕೊಂಡು ಜಳಕಕ್ಕೆ ಇಳದ್ರು ?"

"ದ್ಯಾವಪ್ಪ ಅಂದ್ರ ಯಾರು ?"

"ಗುರುಶಿದ್ದಪ್ಪನ ಮನ್ಯಾಗಿನ ಜೀತದವಾ. ದ್ಯಾವಗಽ ನನಗಽ ನೀರಾಗ ಇರೂದೂ ಅಂದ್ರ ಮುಗೀತ್ರಿ. ಗುರುಶಿದ್ದಪ್ಪಾ ಅಂದ್ರ ಽ ಇದ್ದುಳ್ಳವ್ರಿ. ಗುರುಶಿದ್ದಪ್ಪ 'ಏಳ್ರಲೇ ಮಕ್ಳ್ಯಾ' ಅಂದಾ, ಎದ್ದ್ವ. ಒಂದೆರಡು ಹೊಲಾಽ ದಾಟಿರಬೇಕ್ರಿ, ಎಮ್ಮೀ ಈಟು ಹಿಂದಾತು. ಗುರುಶಿದ್ದಾ- ದ್ಯಾವಾ ಮಾತಾಡಕೊಂತಽ ಬರ್ತಿದ್ರು ಹಿಂದ್ಹಿಂದ, ಒಂದು ಕಲ್ಲು

ತಗೊಂಡು ಒಗೀಬೇಕಂತನಿಂತೆ, ಶಿವಬಸಪ್ನೂ 'ಬರ್ತೀನ್ನಡೀ' ಅಂದಾ, 'ಎಮ್ಮೀ ಬಿಟ್ಟ್ಯಾಕ್ಬಂದೆಲೇ ಮೂಳಾ' ಅಂತಾಳಎವ್ವಾ ಅಂದು, ಗಡಾ ಬರಾಕ ಬಾಯ್ಮ್ಯಾಡಿ, ಕಲ್ಲು ಒಗ್ದ-ಕಲ್ಲು ! ಆ ಕಲ್ಲು ಗುರಶಿದ್ದಗ ಬಡೀತು, ತಿರಿಗಿ ಒಗೀತಾನಬಾಯಿನ್ನಅಂದದ್ದ್ಽ ರಪಾಟಿ ಬಿಟ್ಟೆ. ಮನೀಗಿಬಂದಾವ್ನಽ ರೊಟ್ಟೀ ತಗೊಂಡಾಗಽ ಬಂದದ್ದು ವಾಲೀಕಾರ್ರು ''

'' ಎಲ್ಲಿ ಕರಕೊಂಡ್ಹೋದ್ರು ? ''

'' ಹೊಡಕೊಂತ ಬಡಕೊಂತಽ ಎಳಕೊಂಡು ಹೋದ್ರು ಚಾವಡ್ಯಾಗ ನಮ್ಮ ಎವ್ವಾ ಅತಗೊಂತ ಬಂದ್ಲು. ಕಂಬಕ್ಕ ಕಟ್ಟಿದ್ರು. ಶಿವಬಸಪ್ಪನ್ನೂ ಬಿಗದ್ರು ''

'' ಯಾಕಽ ''

'' ಗುರುಶಿದ್ದಪ್ಪ ಸತ್ತಽ ಹೋದ್ನಂತ್ರಿ !! ನಾ ಎಮ್ಮಿಗೆ ಒಗೆದ ಕಲ್ಲು ಮಲಿಕಿಗೆ ಬಡದೈತ್ರಿ, ಒದ್ದ್ಯಾಡ್ಯಾನ ! ಸಂಕಟಕ್ಕ ಚೀರ್‍ಯಾನ್ರಿ ! ಹೋಗೇ ಬಿಟ್ಟೈತ್ರಿ ಜೀವಾ !! ''

" ಪಾಪಾ !! "

" ಹೆಣಾ ಚಕಡ್ಯಾಗ ಹಾಕಿ, ದವಾಖಾನ್ಯಾಗ ಹಾಕಿದ್ರು, ನಮ್ಮಪ್ಪರ್ನೂ .... "

" ಏನಪಾ ಇದೂ "

" ಈಗೇನೇನೋ ಅಂತಾರಂತ್ರೀ. ಶಿವಬಸಪ್ಪನ ಹೆಂಡತಿಗೇ ಹೋಗ್ತಿದ್ಲಂತ್ರಿ ಆದಽ ಹೆಂಗಸಿಗೆ ಗುರುಶಿದ್ದಪ್ಪಾ ! ಅದಽ ಸಿಟ್ನಿಂದ ಶಿವಬಸಪ್ನಽ ಹೊಡದಿಸಽ ಅಂತಾರಂತ್ರಿ. ಖರೇ ಅಂದ್ರಽ ನಾನೇ ಕೊಂದೀನೀ. ಅವಾ ಸತ್ತದ್ದು ನನ್ನಿಂದರೀ. ಏನ್ಮಾಡ್ಬೇಕರೀ ! ಜಾಕತೇ ಒಗದೇನ್ರೀ ಕಲ್ಲು. "

ವಿಕ್ರಮನು ಅಯ್ಯೋ ಪಾಪ ! ಎಂದು ಕನಿಕರದಿಂದ ನುಡಿದು ನಿಟ್ಟುಸಿರನ್ನು ಬಿಟ್ಟ.

# ನನ್ನ ಪ್ರೀತೀ ರತ್ನಾ ಇರ್ಲಿಕ್ಕೆ !!

ಜನನ ಮರಣ ! ಜನನ ಮರಣಗಳು ಪ್ರಕೃತಿಯ ನಿಯಮಕ್ಕೆ ಅನುಸಾರವಾಗಿ ನೆರವೇರುವುವು. ಮರಣವು ಅನಿವಾರ್ಯ ಮರಣದಿಂದ ಉಳಿಸುವುದು ಮನುಷ್ಯಮಾತ್ರರಿಂದ ಸಾಧ್ಯವಿದೆಯೇ? ಮರಣಕ್ಕೆ ಕಾರಣಗಳು ಸಾವಿರವಿರಬಹುದು. ಬೇನೆಯೂ ಕಾರಣ ಮರಣಕ್ಕೆ, ಬೇನೆಯೂ ಕೊಲೆಗಾರರ ಸಂಗಡಕ್ಕೇ ಸೇರಿದುದಲ್ಲವೇ? ಬೇನೆಯು ಮನುಷ್ಯ ರೂಪದಲ್ಲಿದ್ದರೆ, ಸರಕಾರದವರಿಂದ ಕರಿನೀರಿನ ಶಿಕ್ಷೆಯನ್ನೋ ಗಲ್ಲಿನ ಶಿಕ್ಷೆಯನ್ನೋ ಅನುಭವಿಸುತ್ತಿದ್ದಿತು. ಮರಣವು ಪ್ರಕೃತಿ ನಿಯಮವೇ ಆಗಿರುವಾಗ ನಿಮಿತ್ತಕನಿಗೆ ಶಿಕ್ಷೆ ಏಕೆ? ಪ್ರಕೃತಿಯನ್ನೇ ಆರೋಪಿಯಾಗಿ ಶಿಕ್ಷೆಯನ್ನು ಏತಕ್ಕೆ ವಿಧಿಸಬಾರದು? ಪ್ರಕೃತಿಯ ಅಪರಾಧವು ಅಕ್ಷಮ್ಯವಾದುದು. ಜನನಕ್ಕೆ ಕಾರಣವಾಗುವದೇ ಪ್ರಕೃತಿ. ಮರಣಕ್ಕೂ ಅದೆ.

ತನ್ನ ಮಕ್ಕಳನ್ನು ತಾನೇ ಕೊಲೆಗೈವುದೆಂದರೆ ಪ್ರಕೃತಿಯ ಪ್ರಕೃತಿ ಎಂತಹ ಕ್ರೌರ್ಯತರ ! ರಾಕ್ಷಸತರ !!

ಬೇನೆಯಿಂದ ಬಳಲುವವನ ತಾಯ್ತಂದೆಗಳು, ಡಾಕ್ಟರರನ್ನು ಬದುಕಿಸಲು ಬೇಡುವರು. ಕೊನೆಗೆ ಅವನ ಉತ್ತರ "ಪ್ರಯತ್ನಿಸುವೆ, ದೈವದಲ್ಲಿ ಇದ್ದಂತಾಗಲೀ"ಎಂದು. ದೈವ! ಅದೂ ಪ್ರಕೃತಿ. ಪ್ರಕೃತಿಯು ಜನ್ಮವಿತ್ತ ಜೀವಕೋಟಿಗಳಿಗೆಲ್ಲಾ, ಮರಣ, ಜೊತೆಗೆ ಕಾರಣ ನೀಡಿರುವಳು. ಎಡವಿಬಿದ್ದು ಪ್ರಾಣಬಿಟ್ಟ, ರಕ್ತಸ್ರಾವವಾಯಿತು, ಹೃದಯವಿಕಾರದಿಂದ, ಅನೇಕ ಕಾರಣಗಳಿಗೂ ಜನ್ಮದಾತೆ ಪ್ರಕೃತಿಯೇ. ಅಲ್ಲವೆ ? ಒಬ್ಬನನ್ನು ಹೊಡೆದು ಹಾಳು ಬಾವಿಯಲ್ಲಿ ಚಲ್ಲಿದಾಗ, ಎದ್ದು ಬಂದು ನಿಲ್ಲುವನು. ಆಗ ಯಾರು ರಕ್ಷಿಸಿದರು ? ಪ್ರಕೃತಿ. ಮಾನವನು ನಿಮಿತ್ತಕನಾದರೂ ಜೀವಕೋಟಿಯ ನೈಜ ಕೊಲೆಗಾರ ಪ್ರಕೃತಿಯೇ!!

ಎಮ್ಮೆಗೆ ಎಸೆದ ಕಲ್ಲು ಗುರಸಿದ್ದನಿಗೆ ತಾಕಿತು. ಮರಣವು ಪ್ರಕೃತಿಯ ನಿಯಮದಂತೆ ಒದಗಿತು. ಕಾರಣ-ಕಲ್ಲು, ಹುಡುಗ. ಇವರ ಹಿಂದೆ ಪ್ರಕೃತಿ ! ದೈವ ! ಹುಡುಗನಲ್ಲಿ ಕೊಲೆಗೈಯುವ ಆಶೆ, ಇಚ್ಛೆ ಇದ್ದಿತೇ ? ಯಾರು ಕಾರಣರು ? ಪ್ರಕೃತಿಯ ಪಾಪ ಕೃತ್ಯಕ್ಕೆ ಹುಡುಗನು ಕಾರಣನಾಗಬೇಕೆ ?

ಪೋಲೀಸರ 'ಅಪಘಾತ' ಸೂಚಕ ಸೀಟಿಗಳು ಕೇಳತೊಡಗಿದವು. ಟ್ರೇಝುರಿಯ ಸಿಪಾಯಿಗಳು ಮಾತ್ರ ಕಕ್ಕಾವಿಕ್ಕಿಯಾಗಿ ಸ್ವರ ಬರುವುದು ಎಲ್ಲಿಂದ? ಎಂಬುದನ್ನು ಹುಡುಕುತ್ತಲಿದ್ದರು. ಬಡಿಗೆ ಬಂದೂಕಗಳೊಡನೆ ಸಿಪಾಯಿಗಳು ಓಡಿದರು. ಕೈದಿಗಳು ಬಾಗಿಲಲ್ಲಿ ನಿಂತು ನೋಡಿದರು. ಆಫೀಸರರು ಹೌಹಾರಿರಬೇಕು. ಒಳಗಿಂದ ಹೊರಕ್ಕೆ, ಹೊರಗಿನಿಂದ ಒಳಕ್ಕೆ ಬರುತ್ತ ಏನಾಗಿದೆ? ಸೀಟಿ ಏಕೆ? ಎಂದು ಕೇಳುತ್ತಲೇ ಇದ್ದರು. ವಿಕ್ರಮನ ಮನದಲ್ಲಿಯ 'ಪ್ರಕೃತಿ' ಮಾಯವಾಗಿ ಸೀಟಿಯ ಬೆನ್ನಟ್ಟಿತು. ಹೊರಗಿನವರು ' ಇಂತಹ ಅಪಘಾತವಾದುದಕ್ಕೇ ಸಿಪಾಯಿಗಳು ಓಡಿದರು.' ಎಂದು ಬೇಗನೆ ಏತಕ್ಕೆ ತಿಳಿಸಬಾರದೂ ಎನ್ನಿಸಿತು.

ಗಂಟೆಗಳು ಉರುಳಿದವು. ಓಡಿ ಹೋದ ಪೋಲೀಸರು ತಿರುಗಿ ಬರಲೇ ಇಲ್ಲ. ಕುತೂಹಲವು ಅಭಿವೃದ್ಧಿ ಪಡೆಯುತ್ತಲೇ ಇತ್ತು. ಸಂಗತಿ ತಿಳಿಯಲೇ ಇಲ್ಲ. ಚಳವಳಿಯೇ? ರಾಷ್ಟ್ರಧ್ವಜದ ಮೆರವಣಿಗೆ ಪ್ರತಿಬಂಧಗೊಳಿಸಿದರೇ? ಹಿಂದು-ಮುಸಲ್ಮಾನರ ದಂಗೆಯೋ? ಏನು? ಏನಾಗಿರಬಹುದು? ಏತಕ್ಕೆ ಧಾವಿಸಿದರು? ತಿರುಗಿ ಏತಕ್ಕೆ ಬರಲಿಲ್ಲ? ತಾಕಲಾಟಗಳು ಸೆಣಸುತ್ತಲಿದ್ದವು. ವಿಕ್ರಮನು ಕಾತರಗೊಂಡು ಕಿಟಕಿಯಿಂದ ಒಬ್ಬನ ಹೆಗಲಲ್ಲಿ ನಿಂತು ನೋಡಿದ. ಓಡಿ ಜನ ಹೋಗುವುದು ಕಾಣುತ್ತಲೇ ಇತ್ತು. ಹಾಹಾಕಾರದ, ಜನ ಜಂಗುಳಿಯ ಅಬ್ಬರದ ಸ್ವರ ಕೇಳುತ್ತಲಿದ್ದವು. ಬೀದಿಯ ಜನ ಗಾಬರಿಗೊಂಡು ಓಡುತ್ತಲಿದ್ದರು. ಕಿಡಕಿಯಿಂದ ನಿರಾಶನಾಗಿ ಇಳಿದ. ಕುತೂಹಲಕ್ಕೆ ವಿಷಯದ ಜ್ಞಾನಾನ್ನ ದೊರೆಯಲಿಲ್ಲ.

ಶಿರಸ್ತೇದಾರರ ಕಚೇರಿಯಲ್ಲಿ ಎಡಬಲ ಸೇವಕರ ನಡುವೆ ವಿಕ್ರಮನು ನಿಂತ. ಕೈದಿಗೆ ಖುರ್ಚಿಯ ಮನ್ನಣೆ ದೊರೆತಿತು. ವಕೀಲರ ಕಾಗದಕ್ಕೆ ವಿಕ್ರಮನ ಸಹಿ ಮೂಡಿತು. **ಈವರೆಗು ಸುಕ್ಷೇಮಿಗಳು ನಿಮ್ಮಯ ಕ್ಷೇಮ ಪದಾಬ್ಜವಾರ್ತೆಯನರುಹುಗಳು** ನಡೆದುವು. ವಿಕ್ರಮನು ವಕೀಲರನ್ನು ಕೇಳಿದ. 'ಸಿಪಾಯಿಗಳು ಓಡಿಹೋದುದು ಏಕ?' ಎಂದು. ಧೈರ್ಯ ಧುರಂಧರೇತ್ಯಾದಿ ಬಿರುದಾಂಕಿತ ವಕೀಲರು, ಕಾಗದಗಳನ್ನು ಜೇಬುಗಿಟ್ಟು, ವಿಕ್ರಮನನ್ನು ಹಳಿದು ನಡೆದರು. ಸ್ಥಾನಕಾಲಗಳ ಜ್ಞಾನವೇ ವಿಕ್ರಮನಿಗಿಲ್ಲವೆಂದರು. 'ಬರೆವವರಿಗೆ ಬುದ್ಧಿ'? ಎಂದರು.

ಸ್ವಸ್ಥಾನೇವಾಸಃ ಆದನು ವಿಕ್ರಮ. ಸ್ಥಾನಭ್ರಷ್ಟ ಸುಯೋಗವು ಉಳಿದ ಕೈದಿಗಳಿಗೆ ಒದಗಿತ್ತು. ಗ್ರಹಗಳ ಗತಿಯೇ ಬದಲಾದುದರಿಂದ ಜಾಮೀನಿನ ಜೋಕಾಲೀ ಏರಿ, ಗೃಹಕ್ಕೆ ತೆರಳುವಂಥವರಾದರು. ಏಕೈಕ ವೀರನಾಗಿ ವೈರಿಗಳೊಡನೆ ಹೋರಾಡುವದರಲ್ಲಿ ನಿರತನಾದ. ಕಾದಿ ದಣಿದುದರಿಂದ ಒರಗಿದ ನಿದ್ರೆಯೂ; ಆವರಿಸಿತು.

ಬರುವವರ ಎಣಿಕೆ ಆಗದು. ಬರುವರು ಹೋಗುವರು. ಲಾಕಪ್ಪು ಧರ್ಮಶಾಲೆಯಂತಾಗಿದೆ. ವಿಕ್ರಮನ ಕೊಠಡಿಗೆ ತರುಣರ ಆಗಮನ

ವಾಯಿತು. ತೀರ ಪರಿಚಿತವಿರಬೇಕು. ಲಾಕಪ್ಪು ಅವನಿಗೆ. ಅಡಿಯಾಡಿದ, ಬರಿಮೈಯಿಂದ ವಿಚಾರಪರನಾಗಿ ತಿರುಗಿದ, ಕೈಕಟ್ಟಿ ತಿರುಗಿದ, ಕೈ ಬೀಸಿದ. ತಲೆಗೆ ಎರಡೂ ಕೈಗಳನ್ನು ಹೇರಿಸುತ್ತಿದ. ಗೋಡೆಯನ್ನು ದಿಟ್ಟಿಸಿದ. ಕುತ್ತಿಗೆಯನ್ನು ಬೆರಳಿನಿದ ತಿಕ್ಕಿ ಮಣ್ಣನ್ನೇ ಹೊರಡಿಸಿದ. ಗೋಡೆಯ ಮೇಲೆ ಮಣ್ಣಿನಿಂದಾ 'ರತ್ನಾ' ಎಂದು ಬರೆದ. ಮೈ ತಿಕ್ಕಿ ಮಣ್ಣನ್ನು ತೆಗೆದ. ಬೇರೊಂದು ಕಡೆಗೆ ಬರೆದ 'ರತ್ನಾ' ಎಂದು. ಮಣ್ಣು ಹೊರಡದೇ ತಿಕ್ಕಿದುದಕ್ಕೆ ಮೈ ಉರಿದಿರಬೇಕು ! ಬರೆದ. ನಾಲ್ಕೂ ಗೋಡೆಗಳಿಗೂ. 'ರತ್ನಾ' 'ರತ್ನಾ' ರತ್ನಾ' .... ಬರೆದ ಶಬ್ದವನ್ನು ತುಂಬಿ ಒಲುಮೆಯಿಂದ ನೋಡಿದ. ಗೋಡೆಯ ಶಬ್ದಕ್ಕೆ ಮುದ್ದಿಕ್ಕಿದ. ಮನಬಂದಷ್ಟು ದೂರ ನಿಂತು 'ರತ್ನಾ' ಶಬ್ದವನ್ನು ನೋಡಿದ, ಸಾಮೀಪ್ಯ ದರ್ಶನಕೊಂಡ. ಓರೆಗಣ್ಣಿಂದ ಕಂಡ. ಕುಳಿತು ಮಲಗಿ ನೋಡಿದ. ಎದ್ದವನೇ ಚುಂಬಿಸಿ 'ರತ್ನಾ' 'ರತ್ನಾ' 'ರತ್ನಾ' ಎಂದು ಕರುಣಾಸ್ವರ ತೆಗೆದ.

ವಿಕ್ರಮನಿಗೆ ಎಚ್ಚರವಾಯಿತು. ಹೊಸಬನು ವಿಕ್ರಮನನ್ನು ಬೆದರಿ ನೋಡಿದ. ಕುಳ್ಳಿರಲು ಬೇಡಿಕೊಂಡ ವಿಕ್ರಮ. ಗೋಡೆಯನ್ನು ಅಲಂಕರಿಸಿದ 'ರತ್ನಾ' ನೋಡಿದ. ಹೊಸಬನು ಕಣ್ಣು ತಿಕ್ಕುತ್ತಿದ್ದ. 'ಪ್ರೇಮಭಂಗದ ಇಲ್ಲವೆ ವಿರಹಿ, ಎಂದು ಕಲ್ಪಿಸಿದ. ಗೋಡೆಯ ರೂಪ ಕಂಡು 'ರತ್ನಾ' ಎಂದುದಸು ನೆನೆದಾಗ ಕಾಳಿದಾಸನ ಮೇಘದೂತನು ಸುಳಿದ. ಗೋಡೆಗೆ ರತ್ನಾ ಎನ್ನುವ ಹೊಸಬನೇನು ! ಮೇಘಗಳೊಡನೆ ಸಂದೇಶ ಕಳುಹಿದ, ಕಾಲಿದಾಸನ ವಿರಹಿ ಯಕ್ಷನೇನು? '**ಧೂಮಜ್ಯೋತಿಃಸಲಿಲಮರುತಾಂ ಸನ್ನಿಪಾತಃಕ್ವಮೇಘಃ ಸಂದೇಶಾರ್ಥಾಃ** ಕ್ವ ಪಟುಕರಣೈಃ ಪ್ರಾಣಿ**ಭಿಃಪ್ರಾಪಣೀಯಃ**' ಎಂದು ಕಾಲಿದಾಸನು ಕರುಣೆ ಇಲ್ಲ[illegible] ಹೇಳಿದಂತೆ, ಹೊಸಬನಿಗೆ ವಿಕ್ರಮ ಹೇಳಲಿಲ್ಲ. ಅವನ ದುಃಖದಲ್ಲಿ, ವಿರಹವ್ಯಥೆಯಲ್ಲಿ, ಸಮಭಾಗಿಯಾದ, ವಿಚಾರಣೆ ಉಚಿತ ರೀತಿಯಲ್ಲಿ ನಡೆಯಿತು.

" ನಿಮ್ಮ ಹೆಸರೇನಂದ್ರಿ? '

" ಹೆಸರು ಹೇಳೂ ಇಚ್ಛಾ ಇಲ್ಲಾ. ನನ ತಲಿ ಸಮಾ ಅದೋನೋ ಇಲ್ಲೋ ನೋಡಿ ಹೆಳ್ರಿ; ನೀವೂ ಶಾರದಾನ ಭಕ್ತರು. ಕವಿಗಳು. ನಿಮಗ ಎಲ್ಲಾ ತಿಳೀತದ. ಹೇಳ್ರಿ ನನಗs ಪೂರಾs ಹುಚ್ಚೇ ಹಿಡದದs ದೋ, ಅಥವಾ ಹಿಡಿಯೂದ್ರೊಳಗ ಅದನೋ? ನೀವೇ ಹೇಳ್ರಿ." ಹೊಸಬನೆಂದ

" ನೀವು ಹುಚ್ಚ್ರು ಅಂತ ಯಾರ ಹೇಳ್ತಾರೆ? "

" ಯಾರ ಹೇಳೂದು ಬ್ಯಾಡ, ನೀವು ಹೇಳಿದರಾತು "

" ನನಗುರ್ತು ನಿಮಗದನs ?" "ಅದ. ಸಭಾದಾಗ ನೋಡೀನಿ. ಮಾತಾಡೂದು ಕೇಳಿನಿ, ನಿಮ್ಮ ನಾಟಕಾ - ಕಾದಂಬರಿ ಓದೀನಿ, ಅದಕೇ ಕೇಳತಿನಿ. ನೀವು ನಮಾಜದ ಡಾಕ್ಟರರಿದ್ಹಾಂಗ ಹೇಳ್ರೀ ? "

" ನಿಮ್ಮ ತಲ್ಯಾಗ ಹುಚ್ಚ್ಹು ಅಂತ ಯಾಕನೇರೀದs ? " "ನೀವು ಇಲ್ಲದ ನಮಾಧಾನ ಮಾಡ್ಲಿಕ್ಕೆ ಪ್ರಯತ್ನ ಪಡಬ್ಯಾಡ್ರಿ ಹುಚ್ಚ್ಹು ಅಂದ್ರs ನನಗೇನೂ ಕೆಡಕೆನಸೂದಿಲ್ಲಾ. ಸಂತೋಷಾನೇ ಆಗ್ತದ. '

" ಹುಚ್ಚಿನಾಗ ಏನ್ ಸಂತೋಷಾ ? ? "

" ನಾವೇನೂ ಕವಿ ಅಲ್ಲಾ. ಕಲ್ತಾವಲ್ಲಾ. ಈಗ ನೋಡ್ರೀ........ ನೀವೇನೂ ತಿಳಕೊಂಬೂದಿಲ್ಲಾ, ಅಂದ್ರs, ಹೇಳ್ತಿನಿ?" " ಅದರಾಗೇನಿದ್ರು ಏನೂ ತಿಳಕೊಂಬುದಿಲ್ಲಾ, ಹೇಳ್ರಿ." "ಹುಚ್ಚು ಅಂದ್ರೇನು ? ತಾದಾತ್ಮ್ಯವೇ! ಹುಚ್ಚು ! ಭಾವನಾಪರವಶವಾಗೂದೇ ಹುಚ್ಚು ! ವೇದಾಂತೀ ಯಾರು ? ಹುಚ್ಚ !! ಜಗತ್ತೇ ಹುಚ್ಚದ !!! "

" ಸಾಗಲಿ ನಾಗಲಿ ಸ್ವಾರಸ್ಯದs ಸಾಗಲಿ "

" ಕೂಳೂ ನೀರಿನ ಖಬರಿಲ್ದೇ ವ್ಯಾಪಾರ ಮಾಡೂದು, ಅದೂ ಒಂದು ಹುಚ್ಚೇ, ಸಂಪಾದನ ಮಾಡುದೂ, ಸಂಸಾರ ಮಾಡುದೂ ಹುಚ್ಚೇ ! ಪೂರ್ಣ ಹುಚ್ಚದಾಗೇ ಅನುಭವ ಕಾಣಸ್ತದ. ದೇವರು ಕಾಣಿಸುವದು ಯಾವಾಗs? ಪೂರ್ಣ ದೇವರ ಸಲುವಾಗಿ ಹುಚ್ಚು ಹಿಡಿದಾಗೆ. ಹೆಣ್ಣಿನ ಹುಚ್ಚೂ ಅಂದ್ರ s ಹುಚ್ಚೆ! ಹುಚ್ಚು ಹಿಡಿಯುದೂ

ಅಂದ್ರs, ಪ್ರಜ್ಞಾತಪ್ಪಿ, ಹೇಸಿ ಹೊಲಸಿನ ಭಾವನಾ ಇಲ್ಲದ್ಹಾಂಗ ಆಗಿ, ಒಂದೇ ವಿಷಯ, ಒಂದೇ ವ್ಯಕ್ತಿ ಸಮರಸ ಆಗುವದೇ ಹುಚ್ಚು! ಏನಂ-ತೀರಿ'? "ಬರೋಬ್ಬರಿ ಅದ ನಿಮ್ಮ ವಿಚಾರ." 'ಹೌದs! ವಿಚಾರ ಬರೋ ಬರದನs? ಹಂಗಾರs ಹೇಳ್ರಿ? ನಾಹ್ಯಾಂಗಿದ್ದೀನಿ? ಪೂರ್ಣತ್ವಕ್ಕ ಮುಟ್ಟೇನೋ ಇಲ್ಲೋ?' ವಿಕ್ರಮನು ಇರುಕಿನಲ್ಲಿ ಸಿಲುಕಿದ. ಹುಚ್ಚ-ನಾಗಿರುವೆ ಎಂದರೂ ಕಷ್ಟ, ಇಲ್ಲವೆಂದರೂ ಕಷ್ಟ, ಉತ್ತರಕೊಡದೇ ಗತ್ಯಂತರವಿಲ್ಲ. ಹುಚ್ಚನ ಕೂಡಾ ಮಾತನಾಡುವದೇ ಶ್ರಮವೆನ್ನಿಸಿತು. ವಿಚಾರ ಸರಣಿಗೆ ತಲೆ ದೂಗುವನು. ಒಂದೆರಡು ದಿನ ಅವನೊಡನಿದ್ದರೆ ತಾನೂ ಪೂರ್ಣತ್ವ ಪಡೆಯುವವರಲ್ಲಿ ಸಂಶಯವಿಲ್ಲವೆಂದ. ಅಗ್ನಿ ಸಾಕ್ಷಿ ಯಾಗಿ ಪ್ರತಿಜ್ಞೆಮಾಡಬೇಕೆಂದರೆ ಚುಟ್ಟದ ದಾವಾಗ್ನಿಯೂ ಇರಲಿಲ್ಲ. ಇನ್ನು, ಜೇಲಿನಲ್ಲಿ ಇರುವವರೆಗೆ, ಯಾರೊಡನೆಯೂ, ಯಾವ ರೀತಿ ಯಿಂದಲೂ, ಯಾವದೇ ತರಹದ ಸಂದರ್ಭದಲ್ಲಿಯೂ, ಮಾತನಾಡತಕ್ಕ ದ್ದಲ್ಲ! ವಾಙ್ಮಯಕ್ಕ ವಿಷಯಗಳನ್ನು ಜೇಲಿನಲ್ಲಿ ಸಂಶೋಧಿಸತಕ್ಕದ್ದಲ್ಲ! ಇದು ವಿಕ್ರಮ ಪ್ರತಿಜ್ಞೆ. ವಿಜಯನ ಪ್ರತಿಜ್ಞೆಯಲ್ಲ.

"ಕವಿಗಳs ತಿಳಿತು ನೀವೂ ಯಾಕವಿಚಾರದಾಗ ಒದ್ದಾಡ್ತೀರೀ ಅನ್ನುದು ತಿಳೀತು ರೋಗೀ ತನಗ ಏನೇನಾಗ್ತದs, ಏನೇನು ತಿಂದಾ, ಏನೇನಮಾಡಿದಾ, ಎಲ್ಲಾನೂ ವೈದ್ಯನಮುಂದ ಹೇಳ್ಳಿಕ್ಕೇಬೇಕು. ಇಲ್ಲದೇ ಇದ್ದ್ರs, ತಿಳೀಬೇಕ ಹ್ಯಾಂಗs, ನೀವು ಡಾಕ್ಟರರು! ಸಮಾಜದ ನಾಡೀ ನೋಡ್ತೀರಿ, ಸಮಾಜದ ಸಂಗತಿ ತಿಳಕೋತೀರಿ. ಆಮ್ಯಾಲೆ ಔಷಧಾ ತಯಾರಮಾಡ್ತಿರಿ, ಕೇಳ್ರಿ ಪೂರಾ ಕೇಳ್ರಿ, ಆಮ್ಯಾಲೆ ಹೇಳ್ರಿ ಹುಚ್ಚು ಹೌದೋ ಅಲ್ಲೋ. ಕೇಳ್ರಿ, ಕೆಳಿದ್ದಕ್ಕೆ ಉತ್ತರಾ ಹೇಳ್ತೀನಿ" ಹೊಸಬನು ಹೇಳಿದ.

ಪ್ರತಿಜ್ಞಾ ಭಂಗವಾಗಲೇ ಬೇಕಾಯಿತು. ಒಂದು ಸಮಾಧಾನ ಪ್ರತಿಜ್ಞೆ ಭಂಗವಾದರೆ ಅಗ್ನಿ ಪ್ರವೇಶದ ನಿರ್ಬಂಧವು- ಇರಲೇಇಲ್ಲ. ತನಗೂ ಪೂರ್ಣತ್ವದ ಸಂದರ್ಭವೇ ಒದಗುವಂತೆ ಕಂಡಲ್ಲಿ, ಬೇರೊಂದ :

ಕೊಠಡಿಗೆ, ಬೇಡಿಕೊಂಡು ತೆರಳುವೆನಾಗಿ, ಹೊಸಬನ ಸಾಕ್ಷಿ ಪ್ರತಿಜ್ಞೆ ಕೈಕೊಂಡ. ಅದಕ್ಕೆ ತಪ್ಪಿದಲ್ಲಿ ಒಂದು ರಾತ್ರಿ ನಿದ್ರೆ ಇಲ್ಲದೇ, ಘೋರ ಹೋರಾಟವನ್ನು ಹುಚ್ಚನೊಡನೆ ಸಾಗಿಸಬೆಸೆಂಬ ನಿರ್ಬಂಧಕ್ಕೆ ತೊಡಗಿದ.

"ನೀವೂ ಹೆದರಿದ ಹಾಗೆ ಕಾಣಸ್ತದ. ಕಲ್ಲೊಗದು ಕುಣಿಯೂ ಹುಚ್ಚಾ ಅಲ್ಲಾ. ನಿಮಗs ತ್ರಾಸಕೊಡುದಿಲ್ಲಾ. ನೀವು ಡಾಕ್ಟರಂತ ಮಾತಾಡಿ ತಿಳಕೋಬೇಕಂತೀನೀ ಯಾರ ಸಂಗತಿನೂ ಮಾತಾಡಿಲ್ಲ. ನೀವು ಹೇಳೂ ಅಂದ್ರs ನನ್ನ ರೋಗದ ಕಥೆ ಹೇಳ್ತೀನಿ. ಬ್ಯಾಡಂದ್ರ ಸುಮ್ನ ಮಲಕೋತೀನಿ ಹೆದರ್ಬ್ಯಾಡ್ರೀ" "ಛೇ! ಛೇ! ಹಾಂಗೇನಿಲ್ಲಾ. ನಿಮ್ಮ ವಿಚಾರದಾಗ ಮಗ್ನಾಗೀನಿs. ಬರೋಬರ ವಿಚಾರ ಮಾಡೂ ಹಾಂಗದ ನಿಮ್ಮಾತು ಹೆದರೂದ್ಯಾಕ? ದೆವ್ವs ಭೂತss 'ವಿಕ್ರಮನೆಂದ' 'ನಿಮಗ ತ್ರಾಸಾಗ್ತಿದ್ದಿಲ್ಲಾ ಅಂದ್ರs ಹೇಳ್ತಿನಿ. ನಾತಿಳಕೊಂಡದ್ದನಕಾ, ನೀವೂ ನಮ್ಮ ಜಾತೀ ಅವರೇ ಅಂತಾ ಹೇಳಂದ್ರ ಹೇಳ್ತೀನಿ? ಹೊಸಬನು ಹೇಳಿದ. 'ಮಂದೀ ಮಾತು ಕೇಳ್ಲಿಲ್ಲಾ ಅಂದ್ರs ಬರದೇವ್ಹ್ಯಾಂಗ! ನಾಚ್ಕೀಬಿಟ್ಟು, ಬರಿಯೂಅವಾ ಆಗಬೇಕು.'

"ನಾವೂ ನೀವೂ ಒಂದೇ ಅಂತಾ ಯಾಕ ಹೇಳ್ತಿನಿ. ಅದಕ್ಕೆ ನಾಚ್ಕೀ ಅಂದ್ರ ಏನು? ಅದು ಪೂರ್ಣತ್ವದ ಒಂದು ವಿಘ್ನ!! ಹೊಸಬನೆಂದ" "ನಿಮಗs? ನೀರುಗೀರು ಏನಾರಬೇಕೇನು? ನಡುವೇ ನಿಂದರಬಾರ್ದೂ ಅಂತ, ಯಾಕಂದ್ರs ಇಷ್ಟೊತ್ತನಕ ಮಾತಾಡೀರಿ," "ಪೂರ್ಣತ್ವಕ್ಕ, ಮೇನಕಾ ರಂಭಾ ಇದ್ದಾಂಗ ನೀರೂ,ನಿಂದ್ರೂ ಅನ್ನೂವು. ದಣವು ಯಾರಿಗೇ.....ಸಾದಾ ಮಂದಿಗೆ? ಹುಚ್ಚುತನದ ಮಾರ್ಗ ಹಿಡಿದವರಿಗೆ. ನಮನಿಮಗೆನೂ "ಪ್ರಾರಂಭಾಗ್ಲಿ?" ವಿಕ್ರಮ ವಿನಂತಿಯನ್ನು ಮಾಡಿದ, ಇಲ್ಲಿಗೆ ನಾಯಾರ ಪ್ರೇರಣಾದಿಂದ ಬಂದೆ?

"ಯಾರ ಪ್ರೇರಣಾದಿಂದ?"

"ದೇವತಾ ಪ್ರೇರಣಾನೇ ಕಾರಣ?"

" ಯಾವ ದೇವತಾ "

" ರತ್ನಾ ದೇವತಾ "

" ಯಾದೇವತಾ! ಪಾರ್ವತಿಯೋ, ಲಕ್ಷ್ಮೀಯೋ, ದುರ್ಗಾನೋ? 'ಇಂತಿ ಇಂತಿವಳ್ಗಂ ಸಾಕ್ಷಾತ್ ಪರಮೇಶ್ವರರಾಮುಂಗುಂ ಆಕಾರದೊಳ್ ನಸುಭೇದ ಮಿರದು,' ಅಂತ ಮುದ್ದಣಕವಿ ಹೇಳಿಲ್ಲ. " 'ಎಲ್ಲಾರೂ ಒಂದೇ ತಿಳೀತ್ರಿ ಆನನ್ನ ದೇವತಾ ರತ್ನಾನ್ನ ಪ್ರೇರಣಾದಿಂದ, ರಾಷ್ಟ್ರ ಧ್ವಜಾತಗೊಂಡು, ಜಯಕಾರ ಮಾಡಿದೆ. ಹಿಡಿದ್ರು, ಬಂದೆ.

" ರಾಷ್ಟ್ರದ ಪ್ರೇಮಾ ! "

" ರಾಷ್ಟ್ರದ ಪ್ರೇಮಾ ಅಂತ ಬಂದಿಲ್ಲಾ. ದೇಶಭಕ್ತ ನಾಅಲ್ಲಾ, ರತ್ನಾನ ಭಕ್ತಿ, ಪ್ರೀತಿಯಿಂದ ಬಂದೀನಿ, ರತ್ನಾ ಅಂದ್ರ ಯಾರು ? ನಾ ಅಂದರ ಯಾರು? "

" ನನ ಪ್ರೀತೀ ರತ್ನಾ ಇರ್ಲಿಕ್ಕೇ .... **ರಾಷ್ಟ್ರಪ್ರೇಮುಂತs .... ರಾಷ್ಟ್ರಪ್ರೇಮು.**

---

## ಯಾ-ಅಲ್ಲಾ.

"ಯಾಕ್ರೀ ರಾಯ್ರು ಏನ್ನಡವನ?"

"ಯಾರು?" ಎಂದು ನೋಡಿದ. ಗಡ್ಡದ ಸಾಬರು. ಪೋಲಿಸರು ಓಡಿದುದೇಕೆ ಎಂಬ ಕಾರಣ ಇನ್ನು ಗುಹ್ಯವಾಗಿರದೆಂದು ನಂಬಿದ, ಕೇಳಿದ. ಗಡ್ಡದ ಸಾಬರು ಉಪನ್ಯಾಸ ಪ್ರಾರಂಭಿಸುತ್ತಲೇ ಬಂದರು.

"ಗಂಡಗಬರೂವಂದಿ ನೋಡ್ರೀ, ಈಸರ್ತೀ ಚಳವಳೀ ಮಾಡೂ ಅವರು, ಒಬ್ಬ್ರಾರೇ ಸಿಕ್ಕಾರೇನು? ಹೌದಂದೇನವರಿಗೆ"

"ಓಡಿ ಹೋದ್ರು? ಇಷ್ಟಮಂದಿ ಪೋಲಿಸ್ರಿದ್ರೂ ತಪ್ಸಿಹೋದ್ರು?"

"ನಿಮಗ ಗೊತ್ತೇ ಇಲ್ಲ ಏನು?"

"ಗೊತ್ತು ಆಗಬೇಕ್ಯ್ಯಾಂಗs. ನಾನಿವ್ಹಾದೀನೇ ನೋಡ್ತಿದ್ದೆ. ನೀವು ಬಂದ್ರೀ ಖರೇ ಸುದ್ದಿ ತಿಳಿಯೂದುs"

"ಇದನೋಡ್ರಿ. ಪೋಲಿಸ್ರೂ ಪೋಸ್ಟ ಆಫೀಸು ಕಾಯ್ಲಿಕ್ಕೆ ಹೋಗ್ತಾರ ದಿನಾ. ಒಬ್ಬನ್ನ ಕೂಡ್ಸಿ ಚಹಾಕ್ಕ ಹೋಗ್ಯಾರ, ಊಟದ ಮಬ್ಬಿನ್ಯಾಗ ಮಲಗಿಬಿಟ್ಟಾನ ಅವಾ !! ನೋಡ್ರೀ 'ಹಗಲಹೊತ್ತು, ಸಾವಿರ ಮಂದಿ ಬರತಾರ, ಹೋಗ್ತಾರ. ಈ ಹೊತ್ತಿನ್ಯಾಗ ಬರುವವರು ಯಾರು?' ಅಂತಾ ಅವನ ವಿಚಾರ. ಮುಸುಕು ಜಡದಾನ. ಚಾಕುಡ್ದು ಬಂದ್ನೋಡ್ತಾರs ! ಬಂದೂಕಾs ಕತ್ತೀ ಮಾಯಾಗ್ಯಾವ ! ಹೊಡದೇ ಕೇಳ್ಯಾರ, ತಂದೂ ಹೋದದ್ದಕ್ಕs ಅವನೂ ಘಾಬ್ರ್ಯಾದಾ! ಏs ಕ್ದಂ 'ಢಂ' ಅಂತಾ ಅವಾಜಾಗೇದ. ದಿಕ್ಕೆಟ್ಟು ಓಡ್ಯಾರ, ಪೋಸ್ಟಆಫೀಸು ತಳಾಸಹಿತ ಕಿತ್ತಿ ಬಿದ್ದದ. ದಂಗದಂಗ ಉರೀ! ಸೀಟಿ ಊದಿದ ಮ್ಯಾಲೆ ನಾವೆಲ್ಲಾ ಓಡಿ ಹೋದ್ವೀ ಕಾರಕೂನ್ರು ಪೋಸ್ಟಮಾಸ್ತರರೂ ಕಟಿಗೀ ಖರ್ಚಿಲ್ದೇ ಉರದು ಹೋದ್ರು. ಆ ಉರಿsಗಾಳಿಗೆ ಹಬ್ಬಿತು. ಸಮೀಪದಾಗೇ ಒಂದು ಅರಬೀ ಅಂಗಡೀ, ಅದಕ್ಕೂ ಹತ್ತಿತ್ತು. ಜನಾ ಆರಿಸಲಿಕ್ಕೆ ಬರ-ವಲ್ದು, ಪೋಲಿಸ್ರೇ ಆರಿಸಬೇಕು. ಅರಿಬಿ ಅಂಗ್ಡೀ ಅವಾ ಬಡಬಡಕೊಂಡು ಅಳಹತ್ತಿದ್ದಾ. ಪರದೇಶಿ ಅರಬೀ ಇಟ್ಟದ್ದೀ ಮಗನs, ನೆಟ್ಟಗಾತು ಒಬ್ಬಂತಾನ. ಹರತಾಳ ಮಾಡ್ಲಿಲ್ಲಾ, ಅದಕ್ಕೆ ಉರದ್ಹೋತ್ನೋಡು, ಅಂತ ಒಬ್ಬ, ಹೀಂಗಿಷ್ಟು ಆರ್ತದs ಅನ್ನೂದ್ರೊಳಗs, ಊರ್ಹಡವಿನ ಚಾವಡಿಗೆ ಬೆಂಕಿ ಹತ್ತೇದ ಅಂತ ಸುದ್ದಿ ಬಂತು. ಯಾರು ಹಚ್ಚಿದರು? ಯಾವಾಗ ಬಂದರು? ಹ್ಯಾಂಗಹಚ್ಚಿದರೋ? ಕಡೆತನಕs ತಿಳಿಯಲಿಲ್ಲ. ಪೋಸ್ಟಾಫೀಸು, ಅಂಗಡೀ, ಚಾವಡಿ ಕರೇಮನಡಿ ಮಾಡಿಕೊಂಡು ಬಿದ್ದಾವ. ಹೆಣಾ ಪವಾಖಾನೀ ಕಂಡೂ, ನಾನಿಮ್ಹಕಡೇ ಬಂದೆ, ಸುದ್ದಿ ಹೇಳಬೇಕಂತ"

"ಏನ ಭಯಂಕರ ಮಾಡ್ಯಾರ್ರೀ ?

"ಇದೇನು ಭಯಂಕರ ಬಿಡ್ರೀ ಕೇಳಿದ್ರs ಎದೀ ನಡಗಬೇಕು. ನಾನೇ ಕಣ್ಮುಟ್ಟಾ ನೋಡೀನಿ ಅದನ್ನ"

" ಏನದು ? "

" ಚಳವಳೀ ಮಂದೀದs! ಡ್ಯೂಟಿಮ್ಯಾಲೆ ಹಾಕಿದ್ರು, ಜಿಲ್ಹಾದಿಂದ ಜಿಲ್ಹಾಕ್ಕ. ನಮ್ಮ ಜಿಲ್ಹಾ ಶಾಂತಿತ್ತ್ರ. ಆಗ ಅತ್ಲಾಗಿನ ಹಾವಳೀ ತಡೆಯೂದಕ್ಕs ಕಳಿಸಿದ್ರು ಗಂಡಸರನ್ನsಬೇಕು ಅದೇ ಮಂದಿ."

" ಮುಂದೇನಾತು ಹೇಳ್ರೀ ? ಬಲೆಸ್ವಾರಸ್ಯ ನಿಮ್ಮ ಬಾಯಾಗಿನ ಮಾತು. "

" ಈಗ ಬ್ಯಾಡ್ರಿ. ಇವತ್ತ ರಾತ್ರೀ ನಂದೇ ಅದ ಡ್ಯೂಟಿ, ಬಂದ ಮ್ಯಾಲೇನದ ಕೆಲ್ಸಾ "

" ನಿಮ್ಮದ್ಯಾಕ ? "

" ಗುನ್ಹೆ ತಪಾಸಿಗೆ ಈಗಿದ್ದಾವ್ನೇ ಬೇಕಂತ. ನೀನ s ಮಾಡಬೇಕಂದ್ರೊ ಹೂಂ ಅಂದೆ. ತಾಟು ಬಡಿಸಿದ್ರೂ ಬಿಟ್ಟು ಬರೂದs. ಹೊತ್ತs ಹಾಂಗದ "

" ಒಂದೇ ದಿನದಾಗ ಮೂರು ಅಂದ್ರs ! ಅಬ್ಬಬ್ಬಾ !! "

"ದಿಕ್ಕತಪ್ಪಿ ಬಿಡ್ತು ನಮಗೆಲ್ಲಾ. ಯಾರ್ನಂತ ಹಿಡೀತೀರಿ. ಕಣ್ಣೆತ್ತಿ ನೋಡ್ಹಲ್ರುಮಂದಿ, ನಮ್ಮ ಮಂದೀ ಕಿಮ್ಮತ್ತೇ ಅಳ್ಳಿಡ್ರೀ "

" ನನಗೂ ಹಂಗೇ ಅನಿಸೇದ್ರಿ. ಜಪಾನ್ರೇ ಹೊಕ್ಕು ಹಾವಳಿ ನಡಸ್ಯಾರ. ಹಾರೂ ಬಾಂಬಿಟ್ಟು ಜಿಗದಾರ, ಗಿಡ್ಡ ಪುಟವಾ ಪುಠಾಣಿಗೋಳ್ದೀ ಇದೆಲ್ಲಾ "

" ಇದ್ದೂರ್ರಿ ಇರಬೇಕ್ರೀ...." ಸಾಬರು ಗಡ್ಡವನ್ನು ತೀಡುತ್ತ ಹೆಜ್ಜೆ ಹಾಕಿದರು. ಕೇಳಲಿರುವ ಸತ್ಯ ಕಥೆ, ಯಾವತರಹದಿಂದ ಪರಿಪೂರ್ಣಗೊಂಡಿರಬಹುದು ನಾಡಿಗೆ ನೆತ್ತರನೀಡಿದ ಕತೆ ಹೇಳಬಹುದು—ಸಾಬರು. ಲೋಕವು ತಮೋಮಯವಾಗುವುದನ್ನೇ ನಿರೀಕ್ಷಿಸಿದ. ಹುಚ್ಚ 'ರತ್ನಾ'ವಿರಹಿ, ಮೂಲೆ ಬಿಟ್ಟು ಬಾಗಿಲ ಸಂದಿಯಲ್ಲಿ ಕುಳಿತ, ಹೊರಗಿನ ಜನವನ್ನು ಭಾವನಾಶೂನ್ಯನಾಗಿ ನೋಡುತ್ತಲಿದ್ದ, ಮೈಮುಖ ಸುಟ್ಟು

ಕೊಂಡ ಸಿಪಾಯಿಗಳು, ಜರುಗುವುದನ್ನೇ ಚರ್ಚಿಸುತ್ತ ಬರುತ್ತಲಿದ್ದರು. ಪೋಷ್ಟಿನಲ್ಲಿ ಸ್ಫೋಟಕದ್ರವ್ಯವನ್ನಿರಿಸಿದುದರಿಂದಲೇ, ಅನರ್ಥ ಒದಗಿತು, ಹೊರಗಿನವರ ಧೈರ್ಯವಲ್ಲ, ಪೋಷ್ಟಿನ ನೌಕರರಲ್ಲಿ ಯಾವನೋ [illegible] ನೌಕರನೇ ರಾಷ್ಟ್ರ ಪ್ರೇಮದಿಂದ [illegible] ಗಳಿಯನ್ನು ವ್ಯಾಪಿಸಿತು. [illegible] ವಿಕ್ರಮನು ಸಂತಸಪಡುತ್ತ ತಿರುಗಿ ಊಟಮಾಡುವುದಿರಲಿ, ಇಂದಿನ ವರ್ತಮಾನ ಬಾರದಿದ್ದರೆ ಮಾತ್ರ ಮಿಡುಕುತ್ತಿದ್ದ.

ಅನ್ನಬ್ರಹ್ಮನ ಆರಾಧನೆ, ಕೈದಿಗಳ ಆರ್ತನಿನಾದದಿಂದ ನೆರವೇರಿತು. ಗಡ್ಡದವರು ವಿಕ್ರಮನನ್ನು, ವನಿ ತಿಂಡಿಗಳಿಂದ ತೃಪ್ತಿಪಡಿಸಿದರು. ತಮ್ಮ 'ಅವಳೇ' ಮಾಡಿರುವುದೆಂದು ನೂರು ಸಲ ಹೇಳಿಕೊಂಡರು. ಶ್ಲಾಘನೆಯ ಮಳೆಗರೆಯುತ್ತ, ಒಡಲಿಗೆ ಇಳಿಸಿದ ವಿಕ್ರಮನ ಕೊಠಡಿಯಲ್ಲಿಯೇ ರಾತ್ರಿಯನ್ನು ಕಳೆಯಲು ಯತ್ನಿಸಿದರು ಕೈದಿಗಳು. ಗಡ್ಡದವರಿರುವುದರಿಂದ ವಿಕ್ರಮನಲ್ಲಿಗೆ ಕುಣಿದಾಡುತ್ತ ಬಂದರು ಚಿಂತೆ ದೂರಾಗುವುದೆಂದು ಕೆಲವರು. ಕಥೆ ಕೇಳಲು ದೊರೆಯುವುದೆಂದು ಕೆಲವರು. ರತ್ನಾವಿರಹಿ ವಿಕ್ರಮನ ಕೊಠಡಿಯ ಮೂಲೆಯನ್ನು ಹಿಡಿದಿದ್ದ.

ಒಂದು ಗಂಟೆಯೂ 'ಅವಳ' ವರ್ಣನೆಯಲ್ಲಿಯೇ ಗತಿಸಿತು. ಚಾವಡಿ, ಪೋಲೀಸ್ಟುಗಳು ಸುಟ್ಟ ಸುದ್ದಿಗೂ ಅವಕಾಶವಿದ್ದಿತು. ಅಲ್ಲಿ-ಇಲ್ಲಿಯ ಬೆಲ್ಲದ ಮಾತುಗಳೂ ನಡೆದುವು. ರಾಷ್ಟ್ರದನುಯಾಯಿಗಳಂದರೂ ತನಗೆ ತೀರ ಪರಿಚಿತರೆಂದು, ಗಡ್ಡದವರು ಹೇಳಿಕೊಂಡರು. ತನಗೆ ಬೇಕಾದುದನ್ನು ಹೇಳದೆ ಹಾಳು ಹರಟೆಯನ್ನು ಕೊಚ್ಚುವುದಕ್ಕೆ ವಿಕ್ರಮನು ಆಕಳಿಸ ತೊಡಗಿದ. ಕೈದಿಗಳು ಕೇಳುತ್ತಲೇ ಕಣ್ಮುಚ್ಚಿದರು. ವಿಕ್ರಮನು, ತಂಬಾಕದ ರಸವನ್ನು ಉಗುಳಿಸಿ ಬಂದು ಕೇಳಿದ.

"ಮರ್ತೇ ಬಿಟ್ರೇನ್ರೀ ಸಾಹೇಬ್ರ ?"

"ಏನು" ?

"ರಾತ್ರೀ ಹೇಳ್ತೀನಿ ಅಂದಿದ್ರಲ್ಲಾ ?

" ಓಹೋ ! ಒಳ್ಳೇ ನೆನಪಿಟ್ಟರೀ "

" ಮನೀ .... ಮಕ್ಕ್ಳೊ ಮರ್ತೇಹೋಗ್ತಾರ ನಿಮ್ಮ್ಯಾತ್ಕಾಗ ಅಂದ್ರs ಸ್ತುತಿ ಅಂತ ತಿಳಿಕೋಬ್ಯಾಡ್ರಿ. ನಿಮ್ಮ ಮಾತಂದ್ರs ಅಮೃತ ಇದ್ದ್ಹಾಂಗ' ಸಾಬರು ನಕ್ಕರು. ವಿಕ್ರಮನು ಅಮೃತವನ್ನೇ ಮಥಿಸಿದ ಮಾತಿನ ಮಥನದಿಂದ ಸಾಬರೂ ಉಬ್ಬಿದರು. ತಂಬಾಕನ್ನು ಮಿದ್ದಿದರು. ತಂಬಾಕದ ಭಾರವಾದ ಬಾಯಿಂದ ಅಸ್ಪಷ್ಟ ಶಬ್ದಗಳು ಅಸ್ವಾರಸ್ಯವಾಗಿ ಬರುತ್ತಲಿದ್ದವು, ಎದೆ ನಡುಗುವಂತಹದೊಂದು ಗಡ್ಡದವರೇ ಹೇಳುವ ಕತೆಯನ್ನು, ಹೇಳಲು ತೊಡಗಿದರು. ಸ್ಪೆಶಲ್ ಟ್ರೇನಿನ ವರ್ಣನೆ ಆಯಿತು. ಆಟ್ರೇನಿನಲ್ಲಿ ೩೦೦ ಪೋಲೀಸರು, ಪೋಲೀಸರಿಗೆ ದೊರೆತ ಚಹ, ಪರೇಡ ಮಾಡುತ್ತ ಸ್ಟೇಶನನ್ನು ಬಿಟ್ಟು ರಾಯಘಲ್ಲನತ್ತ ನಡೆದುದು, ಅಲ್ಲಿಯ ಡಿಸ್ಟ್ರಿಕ್ಟ ಸುಪರಿಂಟೆಂಡೆಂಟರು, ತಮ್ಮ ನಾಯಕನನ್ನು ಕರೆದು ಹೇಳಿದುದನ್ನೆಲ್ಲ ತಿಳಿಸಿದರು ಗಡ್ಡದವರು

× × × × × ×

ಕಾಂಗ್ರೆಸ್ ಸಾಮ್ರಾಜ್ಯದ ಹಳ್ಳಿ ೮ ಸಾವಿರಕ್ಕು ಮಿಕ್ಕದ ಜನವಸತಿ ಆ ಹಳ್ಳಿಯದು. ಜನವೆಲ್ಲ ಸ್ವತಂತ್ರವಾದುದಕ್ಕ, ಉತ್ಸವದಲ್ಲಿ ತೊಡಗಿದ್ದಾರೆ. ಮನೆ-ಮಠಗಳು **ರಾಷ್ಟ್ರಧ್ವಜ** ತಳಿರು-ತೋರಣಗಳಿಂದ ಶೃಂಗಾರಗೊಂಡಿವೆ. ಮನೆಬಾಗಿಲದ ಇಕ್ಕೆಲಗಳಲ್ಲಿ, ಬಾಳೆಯ ಕಂಬಗಳು ಕಾಯಿ ಹೊತ್ತುನಿಂತಿವೆ ಎರಡೂದೆ ಕಟ್ಟೆಯಲ್ಲಿ ನಾಲ್ಕು ದೀಪಗಳು ಶೋಭಿಸುತ್ತಲಿವೆ. ಹೆಬ್ಬಾಗಿಲದಮೇಲೆ ಸುಭಾಷರ, ಮಹಾತ್ಮರ, ಜವಾಹರರ ಚಿತ್ರಗಳು, ಹೂವಿನಹಾರಗಳಿಂದ ಅಲಂಕೃತವಾಗಿವೆ. ಜರತಾರೀ ವಸ್ತ್ರಗಳು, ಚಿತ್ರಗಳ ಸುತ್ತಲೂ ಗೊಂಚಲು ಗೊಂಚಲಾಗಿ ಇಳಿಬಿದ್ದಿವೆ. ಮನೆಯ ಮುಂಭಾಗದಲ್ಲಿ, ರಂಗವಲ್ಲಿ, ಕುಂಕುಮಗಳಿಂದ **'ವಂದೇ ಮಾತರಂ' 'ರಾಮರಾಜ್ಯ' ಸ್ವತಂತ್ರಭಾರತ**ವೆಂದು, ಚಲುವ ಕನ್ನಡ ನುಡಿಯಲ್ಲಿ ಬರೆಯಲಾಗಿದೆ. ರಂಗವಲ್ಲಿಯದೇ **ಧ್ವಜ**. ಕುಂಕುಮದ ಕಾಂತಿಯಲ್ಲಿ **ಸುಭಾಷರು,** ಅರಿಷಿಣದಲ್ಲಿ ಜವಾಹರರು ಎದ್ದು ಬರುವಂತೆ **ತೋರು-**

ತ್ತಿದೆ. ಮನೆ ಮನೆಗಳು ಚೆಲುವಾಗಿವೆ. ನಗಾರಿ ನೌಬತ್ತುಗಳನಿನಾದ. ಚೌಘಡದ ಇಂಚರರವ. ಕಹಳೆಗಳ ಉತ್ಸಾಹದ ಕರೆ ಕೇಳಿತು. ನಾರಿಯರು ಕಲಶಗಳನ್ನು ಹೊತ್ತು, ಸ್ವದೇಶಿಯ ಜರದ ನೂತನ ವಸ್ತ್ರಗಳನ್ನು ಉಟ್ಟು ಬರುತ್ತಲಿರುವರು ಹುಡುಗರು, ಹಿರಿಯರು ಸ್ವಾತಂತ್ರ್ಯ ಹಬ್ಬದಲ್ಲಿ ರೇಶಿಮೆಯ ಬಟ್ಟೆಯುಟ್ಟು, ಮಕ್ಕಳನ್ನೆತ್ತಿ ನಡೆದಿರುವರು. ದೊಡ್ಡದಾದ **ರಾಷ್ಟ್ರಧ್ವಜವು** ನಲಿಯುತ್ತ, ಮೆರವಣಿಗೆಯಲ್ಲಿ ನಡೆದಿದೆ. ಚಾವಡಿಗೆ ಬಂದಿತು, ನರನಾರಿಯರ ಗಡಣ. **ರಾಷ್ಟ್ರಧ್ವಜವನ್ನು** ವೇದಘೋಷ ಸ್ವತಂತ್ರ ಘೋಷಗಳೊಡನೆ ಏರಿಸಿದರು; ಹಾರಿಸಿದರು. ಕೋಮಲೆಯರು ಆರುತಿ ಬೆಳಗಿದರು. ಹೂವಿನ ಮಳೆಗರೆದರು. ಜಯಕಾರವನ್ನು ಸುರರಾಜ್ಯಕ್ಕೂ ಕೇಳಿಸಿದರು. ಚಾವಡಿಯ ಎದುರು, ಜನ ಅಲುಗದೇ ಕುಳಿತರು ಚಪ್ಪರ ಮೀಸಿಯ ಮುದುಕ **ರಾಷ್ಟ್ರಧ್ವಜದಡಿಗೆ** ಬಂದು ವಂದಿಸಿದ. ಮೈದುಂಬಿತು. ಕಂಠಬಿಗಿದಿತು. ಕಣ್ಣುಗಳಲ್ಲಿ ನೀರುತುಂಬಿದವು. **'ವಂದೇ ಮಾತರಂ'** ಎಂದ. ಮುದುಕನು ಮಾತನಾಡಿದ. 'ಬಾಂಧವರೇ ಅಕ್ಕತಂಗಿಯರೇ; ಇಂದು ನೀವೆಲ್ಲ ಸ್ವತಂತ್ರರಾಗಿದ್ದೀರಿ. ನಾನು ಮಾತ್ರ ಇನ್ನೂ ಬ್ರಿಟಿಷರ ಗುಲಾಮನಾಗಿರುವೆ. ಧ್ವಜದ ಬುಡದಲ್ಲಿಯೇ ನಾನೂ ಸ್ವತಂತ್ರನಾಗಲಿಚ್ಛಿಸುತ್ತೇನೆ. ಬ್ರಿಟಿಷ ಸರಕಾರದ ಕುಲಕರ್ಣಿಯಾಗಿ ದೇಶಕ್ಕೆ ಅನ್ಯಾಯ ಮಾಡಿರುವೆ. ನಿಮಗೂ ಮಾಡಿರುವೆ ಅದಕ್ಕಾಗಿ ನೀವೆಲ್ಲ ಕ್ಷಮಿಸಿರಿ. ಸ್ವತಂತ್ರರಾದ ನಿಮ್ಮ ಕೈದಿಯಾಗಿರುವೆ. ಗುಲಾಮನು ತನ್ನಲ್ಲಿದ್ದ ಕಾಗದ ಪತ್ರಗಳನ್ನು— ಸ್ವತಂತ್ರ ಸರಕಾರದ ಪ್ರತಿನಿಧಿಗೆ ಒಪ್ಪಿಸುವನು. ಈಗ ನಾನೂ ನಿಮ್ಮಂತೆ ಸ್ವತಂತ್ರನಾಗುವೆ. ಎಂದು ಒಬ್ಬನನ್ನು ಕರೆದ, ಬಂದವನು ಶುಭ್ರಖಾದೀ ವಸ್ತ್ರಧರಿಸಿದ್ದ. ಕಾಗದಪತ್ರಕೊಟ್ಟು ದಂಡವತ್ ಪ್ರಣಾಮಗೈದ. **'ಜೈ ಭಾರತಮಾತೆ'** ಎಂದ. ಗೌಡರ ಭಾಷಣವೂ ಅದೇ ಧಾಟಿಯಲ್ಲಿ ಆಯಿತು. ಒಪ್ಪಿಸಿದರು. ಕಾಗದ ಪತ್ರಗಳು ಚಾವಡಿಯ ಎದುರು ಉರಿದುವು. ನಡೆದರು **ಸ್ವತಂತ್ರ ಭಾರತಮಾತೆಗೇ** ಎನ್ನುತ್ತ.

ಮಾಮ್ಲೇದಾರರು ಪೋಲಿಸಪಡೆಯೊಂದಿಗೆ ಸ್ವತಂತ್ರ ಹಳ್ಳಿಗೆ ದಯಮಾಡಿಸಿದರು ಮರುದಿನ. ಸ್ವತಂತ್ರ ಸರಕಾರದ ಮಾಮ್ಲೇದಾರರಲ್ಲ. ಬ್ರಿಟಿಷ ಸರಕಾರದ ಮಾಮ್ಲೇದಾರರು· ಸ್ವಾತಂತ್ರ್ಯ ಅಪಹಾರಕ್ಕೆ ಆಗ ಮಿಸಿದರು. ಯುರೋಪಿಯನ್ನರಲ್ಲ. ಭಾರತೀಯರೇ ! ಚಾವಡಿಯಲ್ಲಿ ದರ್ಪದಿಂದ ನಡೆದರು. ಯಾರೂ ತಡೆಸೀಡಲಿಲ್ಲ. ಮಾಮ್ಲೇದಾರರು ಕುಳಿತರು. ರೈತರ ಜಯಕಾರದಿಂದ ರೋಗವು ನೇರಿತು. ಎತ್ತನ್ನು ಶೃಂಗರಿಸಿ, ನೀರು ಕುಡಿಸಲು ಹೊರಟ, ಒಕ್ಕಲಿಗನನ್ನು ಕೂಗಿಕರೆದರು. ಕಿವಿಗೊಡದೇ ನಡೆದ. ಬಾಟಿಯನ್ನು ಹೊತ್ತು ಹಾಡುತ್ತ ನಡೆದವನನ್ನು ಕರೆದರು. ಕಿವುಡನಂತೆ ಸಾಗಿದ. ಹೆಂಗುಸರನ್ನು ಕರೆದರು, ಹುಡುಗರನ್ನು ಕರೆದರು, ಅವರೊಡನೆ ಯಾರೂ ಮಾತನಾಡಲಿಲ್ಲ ಆಕ್ರೋಶದ ಆದಿ ಶೇಷರಾದರು ಅದೇ ಸ್ಥಳದಲ್ಲಿ ಅದೇ ರೈತರಿಂದ ' ಸರಬರಾಯಿ ' ಹೊಂದಿದುದು ನೆನಪಾಯಿತು. ಗೌಡನನ್ನು ಎಳೆತರಲು, ಶಿಪಾಯಿಗಳಿಗೆ ಹೇಳಿದರು. ಕುಲಕರ್ಣಿಯನ್ನು ಅದೇ ರೀತಿಯಾಗಿ ಎಂದರು ಮಾಮ್ಲೇದಾರರು.

ಗೌಡರಮನೆಗೆ ಶಿಪಾಯಿಗಳ ಸ್ವಾರಿ ಬಂದಿತು.

" ಗೌಡ್ರ s ...."

" ಯಾರು ? "

" ನಾವು ! "

" ನೀವೆಂದರೇ ಯಾರು ? "

" ಶಿಪಾಯಿಗಳು "

" ಏನು ಕೆಲಸ ? "

" ಮಾಮ್ಲೇದಾರರು ಕರೀತಾರ "

" ಯಾವ ಮಾಮ್ಲೇದಾರರು ? "

" ಅಂದರೆ ? "

**" ಕಾಂಗ್ರೆಸ ಸ್ವತಂತ್ರ ರಾಜ್ಯದವರೇ ? "**

" ಅಲ್ಲ. ನಮ್ಮವರು. "

" ಬರುವದಿಲ್ಲ ! "

" ಯಾಕೆ ? "

" ನಿಮ್ಮ ನೌಕರನಲ್ಲಾ "

" ಒಳ್ಳೇ ಮಾತಿನಿಂದ? "

" ಕಟ್ಟಿರಿ ಇವರನ್ನು "

" ನಮ್ಮನ್ನೇ ? "

" ಹೂಂ—ನಿಮ್ಮನ್ನೇ " ನಾಲ್ಕು ನೂರು ಜನ ಮೈಮೇಲೆ ಏಕ ಕಾಲಕ್ಕೆ ಬಂದುದರಿಂದ ಸಿಪಾಯಿಗಳು ಬೆದರಿದರು. ಗೋಳಿಬಾರಿಗೆ ಸಾಬರ ಅನುಜ್ಞೆ ಇರಲಿಲ್ಲ ಸಮೂಹಕ್ಕೆ ತಲೆಬಾಗಲೇ ಬೇಕಾಯಿತು. ಬಂದ ವರೇ ನಾಲ್ವರು ಬಡಿಗೆ ಕೊಡಲಿಗೇ ತುತ್ತಾಗುವದು ಸರಿಎನ್ನಿಸದೇ, ಶಾಂತ ರಾದರು. ಬಂದೂಕಗಳನ್ನು ಕೆಳಗಿರಿಸಿ, **ವಂದೇ ಮಾತರಂ** ಎಂದರು ' ಗಾಂಧಿ ' ಟೊಪ್ಪಿಗೆ ಹಾಕಿಕೊಳ್ಳಲೇ ಬೇಕಾಯಿತು. ಗೌಡರು ಬೇಡಿ ಕೊಳ್ಳುತ್ತಲಿದ್ದರು. ಶಾಂತರಾಗಲು, ಸಿಪಾಯಿಗಳು ಬೆದರಿ, ಚಾವಡಿಗೆ ಬಂದರು. ಜನ ಬೆನ್ನಟ್ಟಿತು. ಕುಲಕರ್ಣಿ ಮುದುಕ, ಧ್ವಜಹಿಡಿದೇ ಚಾವಡಿಯಲ್ಲಿ ನಿಂತಿದ್ದ. ಮಾಮ್ಲೇದಾರರು ಕೇಳಿದರು.

" ವಸ್ತ್ರರೆಲ್ಲ್ಯವ ? "

" ಸುಟ್ಟ್ವೀವು! "

" ಅದು ಗುನ್ಹೇ ಆಗ್ತದ ? "

" ಆಗ್ಲೀ ಸ್ವತಂತ್ರ ಸರ್ಕಾರದವರೇ ಸುಟ್ಟ್ಯಾರ,

" ಗುನ್ಹೇ ಆಗ್ತದ !! "

" ಆಗ್ಲೀ.... .. "

" ಜೇಲಿಗೆ ಹೋಗ್ತೀರಿ ತಿಳಿತಿಲ್ಲೇನೀ ಮುದಕ್ರಾಗೀರಿ· ಬುದ್ಧಿ ಹ್ಯಾಂಗ್ಬರಲಿಲ್ಲ, ಯಾಕಕೊಟ್ರೀ "

" ಹಿಂದಕs ಬ್ರಿಟಿಷ ಸರ್ಕಾರಕ್ಕೆ ಹ್ಯಾಂಗ ಕೊಟ್ಟೆದ್ವಿ ಈಗs ಸ್ವತಂತ್ರ ಸರ್ಕಾರದವರಿಗೂ ಹಂಗೇ ಕೊಟ್ಟೇವಿ "

" ಬೇಡೀ ಹಾಕೋ ಇವರ ಕೈಗೆ "
" ಬಿಡಿಸ್ಲಿಕ್ಕೇ ನನ್ನ ಸರ್ಕಾರ ಘಟ್ಟಿ ಅದs "
" ಏನಂದೀ ? "
" ನೀವು ಯಾರು ? "
" ಹೇಳ್ತಿನಿಂದ್ರು ಈಗs "
" ಚಾವಡೀ ಬಿಟ್ಟು ನಡೀರಿ ಮೊದಲ. ಸ್ವತಂತ್ರ ಪಕ್ಷಿ ಅದ ಇದು"
" ಹ್ಯಾಂಗs ನೋಡ್ತಿನಿ ಅರೆಷ್ಟ ಮಾಡ್ರ್ಯೋ ?"

ಖಾದಿ ಟೊಪ್ಪಿಗೆಯ ಸಿಪಾಯಿಗಳು ಮುಂದೆ ಬಂದರು. ಸಾಬರು ಹೆದರಿದರು. ಉಪಾಯದಿಂದ ಪಾರಾಗದಿದ್ದರೆ ಬದುಕುವ ಆಶೆಯೇ ಇಲ್ಲ ವೆಂದು ತಿಳಿದರು. ಮಾಮ್ಲೇದಾರರು ಗೌಡನನ್ನೇ ಬೇಡಿದರು ತಮ್ಮ ಹೆಂಡತಿ ಚಿಕ್ಕವಳಿರುವುದರಿಂದ, ಮೊನ್ನೆಯೇ ಲಗ್ನಮಾಡಿಕೊಂಡಿದುದ- ರಿಂದ ಕಾಲು ಹಿಡಿದು ಜೀವದಾನ ಮಾಡಲು ಆಲ್ವೊರೆದರು. ತಮ್ಮ ಕಾಗದ ಪತ್ರಗಳನ್ನು ಗೌಡರ ಪಾದಕ್ಕೆ ಒಪ್ಪಿಸಿದರು. ಜನಸಮೂಹದ ಜೀವಕಳೆಯುಳ್ಳ ಗಾಂಧೀ ಟೊಪ್ಪಿಗೆ ಧರಿಸಿ ನಡುಗಿ **'ವಂದೇ ಮಾತರಂ'** ಎಂದರು. ಸಿಪಾಯಿಗಳು ಸಮವಸ್ತ್ರಗಳನ್ನು ಕಳೆದೊಗೆದರು. ಮಾಮ್ಲೇ ದಾರರು ಇನ್ನೆಂದೂ ಬ್ರಿಟಿಷ ಸರ್ಕಾರದ ನೌಕರಿ ಮಾಡುವದಿಲ್ಲವೆಂದೂ, ರಾಜಿನಾಮೆ ಕೊಡುವೆನೆಂದೂ ಹೇಳಿಹೊರಟುಹೋದರು. ಹೊರಟಾಗ ಜನ ಜಯಕಾರ ಮಾಡುತ್ತಲಿದ್ದರು. ಗೌಡರು ಶಾಂತರಾಗಲು ಜನಕ್ಕೆ ಬಿನ್ನವಿಸದಿದ್ದಲ್ಲಿ, ಮಾಮ್ಲೇದಾರರು ಪಿತೃಲೋಕದ ಪ್ರಜರಾಗುತ್ತಿದ್ದರು. ಮಾಮ್ಲೇದಾರರು ಮನದಲ್ಲಿ ನುಡಿದುದು ಹೀಗೆ. **'ಶಾಂತಿ ಖಡ್ಗಂ ಕರೇ ಯಸ್ಯ ದುರ್ಜನಃ ಕಿಂ ಕರಿಷ್ಯತಿ ? "**

ನಡುರಾತ್ರಿ. ಸ್ವತಂತ್ರ ಪಕ್ಷಿಯ ಸುತ್ತು ಪೋಲೀಸರು ಬೇಲಿಯಾಗಿ ದ್ದರು. ಶಿಸ್ತಿನ ಸಾಬರು, ಕಾರಿನಿಂದ ಇಳಿದರು. ೧೦-೨೦ ಮೋಟಾ ರಗಳು ಸಾಲಾಗಿ ಚಂದ್ರಿಕಾ ಪ್ರಭೆಯಲ್ಲಿ ಹೊಳೆಯುತ್ತಿದ್ದವು. ಅವರಂತೆ ನಾಲ್ಕು ತುಕಡಿಗಳನ್ನು ವಿಂಗಡಿಸಿದರು. ನಾಲ್ಕು ದಿಕ್ಕಿನಿಂದ ಪಕ್ಷಿಯಲ್ಲಿ ನುಗ್ಗಲು,

ಅಪ್ಪಣೆದೊರೆತಿತು. ಮೆಲ್ಲನೇ ಹಳ್ಳಿಯ ಒಳಹೊಕ್ಕರು. ಗೌಡನಮನೆಯ ಎದುರು,ಪೋಲಿಸರು ಉಪಸ್ಥಿತರಾದರು. ಕುಲಕರ್ಣಿಯ ಮನೆಯೂ ಸಿಪಾಯಿಗಳನ್ನು ಕಂಡಿತು.

ಹುಸಿಗುಂಡುಗಳು ಆಕಾಶಕ್ಕೆ ಹಾರಿದವು, ನಾಲ್ಕೂ ಘಥಕಗಳು ಸಂಕೇತದಂತೆ ಮುಗಿಲಿಗೆ ಗುಂಡುಗಳನ್ನು ಎಸೆದವು. ಪ್ರಶಾಂತವಾತಾವರಣವು ಕದಡಿತು. ಬೇಲಿಯಾದ ಸಿಪಾಯಿಗಳು 'ಢಂ ಢಂ ಢಂ' ಎನ್ನಿಸಿದರು. ಗಿಡಗಳ ಗೂಡಿನಲ್ಲಿ ಅಡಗಿದ ಪಕ್ಷಿಸಂಕುಲವೇ ಕಿರಚಿ ಹಾರ ತೊಡಗಿದವು.

ಗೌಡರು ಊರಲ್ಲಿಲ್ಲವೆಂದು ಹೆಂಡತಿಯಿಂದ ಉತ್ತರ ದೊರೆಯಿತು. ಬಾಗಿಲ ತೆರೆಯಲು, ಆಗ್ರಹಪಡಿಸಿದರು. ಬಾಗಿಲನ್ನು ಮುರಿದರು, ಒಳ ಹೊಕ್ಕರು ಮುದುಕಿ, ಪಡಸಾಲೆಯಲ್ಲಿ ಮಲಗಿದ್ದಿತು. ಅಂಜಿರಲಿಲ್ಲ.

"ಯಾರ್‍ರೆಪಾ ನೀವು ?"

"ಎಲ್ಲಿದ್ದಾನ ?"

"ಯಾರು ?"

"ನಿನ್ನ ಹಿರ್‍ಯಾ...."

"ಯುದ್ಧಕ್ಕ ಹೋಗ್ಯಾನ"

"ಮನ್ಯಾಗ ಯಾರಿದ್ದಾರ ?"

"ನಾನೇ ಒಬ್ಬಾಕಿ"

"ಮಗಾ"

"ಅವನೂ ಹೋಗ್ಯಾನ"

ತಲೆ ನಡುಗುವ ಮುದುಕಿಯನ್ನೇ ಗುದ್ದಿದರು. ಕೆಲವರು ಒಳ ಹೊಕ್ಕರು. ಶೋಧಿಸಿದರು. ಗೌಡರು ಇಲ್ಲವೆಂದು ನಿರ್ಧರಿಸಿ ನಡೆದರು.

ಕುಲಕರ್ಣಿ ಮಗಳು ತರುಣಿ. ಬಾಗಿಲು ಮುರಿದಾಗ ಹೊರಬಂದಳು. ರಾಷ್ಟ್ರಧ್ವಜವನ್ನೇ ಎತ್ತಿಕೊಂಡು ಹೊರಗೆ ಬಂದಳು. ಮುಡಿಕಟ್ಟಿರ

ಲಿಲ್ಲ. ಕೂದಲು ಗಾಳಿಗೆ ಅಲೆದಾಡುತ್ತಿದ್ದವು. ಬಿಳಿಪತ್ತಲವನ್ನು ಉಟ್ಟಿದ್ದಳು. ಜಯನಿನಾದವು ಉನ್ಮಾದಿನಿಯ ಮುಖದಿಂದ ಹೊರಬರುವಂತಿದ್ದಿತು. ಬಂದೂಕದವರೂ ಬೆದರಿರಬೇಕು. ಸಿಪಾಯಿಗಳನ್ನು ಸರಿಸಿ ಓಡಿದಳು. ಬೆನ್ನಟ್ಟಿ ಕೈಹಿಡಿದು ನಿಲ್ಲಿಸಿದರು. ಸೆರಗನ್ನು ಎಳೆದೇ ಸಾಬರು ಕೇಳಿದರು.

"ಎಲ್ಲಿಗೆ ಹೋಗ್ತಿದಿ ?"

"ನೀನು ಯಾರು ? ನನ್ಕೆಲ್ಲಿಕ್ಕೆ ?"

"ನಿಮ್ಮಪ್ಪಾ ಎಲ್ಲಿದ್ದಾನ ?"

"ಈಗ ಬರ್ತಾನ"

"ಎಲ್ಲಿಗೆ ಹೋಗ್ಯಾನ"

"ವಂಡು ತೊಂಗೊಂಡ್ಬರ್ಲಿಕ್ಕೆ"

ಸಾಬರು ದರದರ ಎಳೆದರು. ಧ್ವಜ ಕಸಿದು ಚಾವಡಿಯಲ್ಲಿ ಕಟ್ಟಿ ಕೆಡವಿದರು '**ವಂದೇ ಮಾತರಂ**' ಗರ್ಜನೆ ಕೇಳಿಸಿತು. ಸಹಸ್ರಾರು ಜನರ ಘೋಷಣೆ ಕೇಳಿ ನಡುಗಿದರು. ಎಲ್ಲಿಂದ ಸ್ವರಬರುವದೆಂಬದನ್ನು ಕಾಣದಾದರು. ನಾಲ್ಕೂ ನಿಟ್ಟಿನಿಂದಲೂ ಜಯಘೋಷ ! ಕಲ್ಲುಗಳು ವೇಗವಾಗಿ ಹಾರಿ ತೂರಿ ಬರತೊಡಗಿದುವು. ಹೌಹಾರಿದರು. ಕಲ್ಲುಗಳು ಬರುವ ಕಡೆಗೆ ಗುಂಡನ್ನು ಎಸೆದರು. ಹಾರಿಸಿದರು. ಗುಂಡು ತೀರುವ-ವರೆಗೆ ಹಾರಿಸಿದರು. ಕಲ್ಲಿನ ಮಳೆನಿಲ್ಲಲಿಲ್ಲ. ಗುಂಡುಗಳೇ ತಿರುಗಿ ವೇಗವಾಗಿ ಬರುತ್ತಲಿದ್ದವು. ಹತಾಶರಾದರು. ಬೇಲಿಯ ಸಿಪಾಯಿಗಳೂ ಗುಂಡನ್ನು ಹಾರಿಸಿದರು. ಕಲ್ಲನ್ನು ಯಾರು ಎಸೆಯುವರು ? ಗುಂಡು-ಗಳನ್ನು ಯಾರು ಹಾರಿಸಿದರು ? ಏನೂ ತಿಳಿಯದಾಯಿತು 'ಭರ್‌ಭರ್' ಎಂದು ಶಬ್ದಗೈಯುತ್ತ ಕಲ್ಲುಗಳು ಬರುತ್ತಲೇ ಇದ್ದವು. ಸಿಪಾಯಿಗಳ ತಲೆಒಡೆಯಿತು. ಕೈಕಾಲುಗಳು ಮುರಿದುವು. ಹಲ್ಲುಗಳು ಉದುರಿದವು. ದಾರಿಕಂಡತ್ತ ಓಡಿದರು. ಮರೆಯಾದರು. ಶಿಲಾವೃಷ್ಟಿ ಸಂತತವಾಗಿ ವೇಗವಾಗಿ ಸಾಗಿದ್ದಿತು.

**ಜಯಘೋಷದ** ಸಮೂಹವು ಸಾಲಾಗಿ ನಿಲ್ಲಿಸಲಾದ ಮೋಟಾರನ್ನು ಆಕ್ರಮಿಸಿತು. ಡ್ರಾಯವ್ಹರರು ಬೆದರಿ ಓಡಿದರು. ನಿಮಿಷಾರ್ಧದಲ್ಲಿಯೇ ಮೋಟರುಗಳು ಉರಿಯತೊಡಗಿದುವು ಜನ ಸಮೂಹವು ಊರಲ್ಲಿ ನುಗ್ಗಿತು. ಚಾವಡಿಗೆ ಬಂದರು. ಸಿಪಾಯಿಗಳು ಇರಲಿಲ್ಲ. ಕುಲಕರ್ಣಿಯ ಮಗಳು ಜಯಜಯವೆನ್ನುತ್ತಲಿದ್ದಳು. ಒಡಿಸಿದರು. ಉತ್ಸಾಹದಿಂದ ಕೂಗಿದರು. ನರ-ನಾರಿಯರ ಗಡಣ “ **ವಂದೇ ಮಾತರಂ** ” ಎಂದಿತು. ಮೂಡಣ ಬೆಳಗಿತು. ಕಲ್ಲಿನ ಮಳೆ ನಿಂತಿತ್ತು.

§ § § § § § §

‘ ಇಷ್ಟಾದ ಮ್ಯಾಲೇ, ನಾವು ಹೋದ್ವಿ. ಮಿಲಟ್ರೀ ಮಂದೀನು ಇತ್ತು’ ಗಡ್ಡದ ನಾಬರು ಹೇಳಿದರು.

“ ಮಿಲಟ್ರೀ ಅವರು ಎಷ್ಟಿದ್ರು ? ”

“ ನಮ್ಮಷ್ಟೇ ಇದ್ದ್ರು. ಹಗಲಹೊತ್ತಿನ್ರೀ, ಊರಾಗ ಹೊಕ್ವಿ. ಗಂಡನಾಯಿ ಸಹಿತ ಊರಾಗಿದ್ದಿದ್ದಿಲ್ಲಾ. ”

“ ಎಲ್ಲಿಗೆ ಹೋಗಿದ್ದ್ರು?”

“ ಓಡಿ ಹೋಗಿದ್ದ್ರು. ಮಿಲಿಟ್ರೀ ಮಂದಿ ಊರಾಗ ಹಾವಳಿ ನಡಿಸಿದ್ರು. ಚಿತ್ತ ಸಿರೆ ಕುಡದಿದ್ರು. ಮತ್ತೇನ್ಕೇಳೂದದ. ಮನೀಗೆ ಇಬ್ರೂ ಮೂರ್ಮಂದಿ ಹೊಕ್ಕುರು, ಹೆಣಮಕ್ಕಳು ಘಾಬ್ರ್ಯಾಗಿ ಓಡ್ಯಾಡ್ತಿದ್ದ್ರು ! ಯಾರು ಅಡಗಿದ್ರು, ಯಾರು ಕೈಯ್ಯಾಗ ಸಿಕ್ರು, ರಸ್ತೇದಾಗ್ರೀ ಕೆಡವಿ ಕೆಡಿಸಿದ್ರು, ಅಳತಿದ್ವು, ಚೀರ್ತಿದ್ವು. ಎಳಕೊಂಡ್ಹೋದ್ರೂ ಕೆಡಸೂದ್ರೂ. ಗಲ್ಲಾ ಕಡದಿದ್ರ ತೂತೇ ಬಿದ್ದಿದ್ದು. ತುಟೀ ಹರದಿದ್ದು. ಎಂಥೆಂಥಾ ಹುಡಿಗೇರ್ರೀ !! ಎತ್ಲಾಗ ನೋಡಿದ್ರೂ ಅದೇ ಹಾವಳಿ ! ಒಸರಿದ್ದವರ್ನೆ, ಹಡದ ಮೂರ್ದಿಂದವರ್ನ, ಸಣ್ಣ ಸಣ್ಣ ಹುಡಿಗೇರೂ ಕಟ್ರು. ಒಬ್ಬಂದು ಆತಂದ್ರ .... ! ! ! ಹೀಂಗಾಗಿ ಊರನ್ನೂದೂ ಹ್ಯಾಂಗ ಹ್ಯಾಂಗೋ ಆತು ! ಮರ್ಯಾದೀ ಹೆಣಮಕ್ಳೂ, ಭಾವೀ ಹಾರ್ಕೊಂಡ್ರು. ಖಬರಿತಪ್ಪಿ

ಬಿದ್ದಿದ್ವು. ಏನಾದ್ರೇನು? ಸಾಗ್ತ್ರೀ ಅರ್ಮಾಸ್ತನಕಾ! ಹಡದೀವಿ ಅಂತ ಅತ್ತ್ರು ಕೇಳ್ಲಿಲ್ಲಾ, ಹೊರಗ ಕೂತೀನಿ ಅಂದ್ರು ಕೇಳ್ಲಿಲ್ಲಾ. ನೆರತಿಲ್ಲಾ ಅಂದ್ರೆ ಕೇಳ್ಲಿಲ್ಲಾ, ದೊಡ್ಡ ದೊಡ್ಡ ಮನೆತನದ ಮಕ್ಕಳೆಲ್ಲಾ ಕೆಟ್ಟೋರಿ!'

"ಮುಂದ ನೀವೇನ್ಮಾಡಿದ್ರೀ?'

"ಮಾಡೂದೇನ್ರೀ ತಿರಗ್ತಿದ್ವಿ, ಬಂದೂಕಾ ಹೊತಗೊಂಡು. ನಮ್ಮ ಜಿಲ್ಲಾದ ಪೋಲೀಸ್ರ ಮಾತ್ರs ಖರೇ ಹೆಣಗರಳಿನ ಮುಂದಿ. ಓಡಿ ಹೋಗೂ ಹೆಣಮಕ್ಳನ್ನ ತರಬ್ಲೇ ಇಲ್ಲಾ, ಕೂಸು ಕುನ್ನಿ ಕಟಗೊಂಡು ಊರೆs ಬಿಟ್ವು. ಎರಡದಿಂದಾಗ ಊರನ್ನೂದೂ ಹಾಳ ಹಾಳ ಸುರೀತು. ನಮಗ ಹುಕುಮಾತ್ರು,s ಹೊರಟು ಬಂದ್ವಿ, ಮುಂದ ಏನಾತೋ ಏನೋ ತಿಳಿಲೇ ಇಲ್ಲಾ.'

"ಅಯ್ಯೋ ಪಾಪ! ಎಂದು ವಿಕ್ರಮನು ಕುಳಿತ. ಗಡ್ಡದವರು ಯಾ ಅಲ್ಲಾ ಪರವರ್ದಿಗಾರ, ಎಂದರು. ವಿಕ್ರಮನು 'ಅತಿಶಯೋಕ್ತಿ ಹೀಗೆ ಜರುಗಿರಲಾರದು ನಾಬರು ತಳೆ, ಹಿಂಜಿಸಿ ಹೇಳಿಸಿರಬೇಕು ಅತಿಶಯೋಕ್ತಿ ಎಂದು ತಲೆ ಹಾಕಿದ

## ಸಾಬ್ರೆಲ್ಲಾ ದೇವರು. !!

" ಕಾರಣಂ ವಿನಾ ನಕಾರ್ಯಂಭವತಿ " ವಿಕ್ರಮನು ಜ್ವರದಿಂದ ರಾತ್ರಿ ಎಲ್ಲ ನರಳಿದುದಕ್ಕೂ, ಕಾರಣವಿರಲೇಬೇಕು. ಸೊಳ್ಳೆಗಳೂ ಕಾರಣವಿರಬಹುದು. ಸ್ವತಂತ್ರ ಸರಕಾರದ ಹಳ್ಳಿಯ ಕತೆ ಕೇಳಿ ಜ್ವರ ಬಂದವೇ ? ಕಾರಣ ಸಂಶೋಧನೆ ಬೇಡವೇಬೇಡ. ಜ್ವರಕ್ಕೆ ಕಾರಣ ಸೊಳ್ಳೆಗಳೇ ಎಂದು,ಸಂಶೋಧಕರು ವರದಿಯನ್ನು ಒಪ್ಪಿಸಿದರೆ ಶಿಕ್ಷೆ ವಿಧಿಸುವ ಸಾಮರ್ಥ್ಯವೇ ಸರಕಾರಕ್ಕಿಲ್ಲ. ಸಂಶೋಧಕರಿಗೆ ಶ್ರಮವೇಬೇಡ. ವಿಕ್ರಮನಿಗೆ ಜ್ವರಬಂದುದನ್ನು ತಿಳಿದು, ಕೈದಿಗಳೇ ಉಪಚಾರಕರಾದರು. ಜ್ವರದ ತಾಪಕ್ಕೆ ಬಡಬಡಿಸಿದ. ಸ್ವತಂತ್ರ ಸರಕಾರದ ಕಲೆಕ್ಟರನೇ ಆಗಿ, ಆಡಳಿತೆ ನಿರ್ವಹಿದ. ರತ್ನಾವಿರಹಿ ನಿದ್ರಿಸಲಿಲ್ಲ. ವಿಕ್ರಮನು ಬೇಡ

ವೆಂದರೂ ತಲೆ ಒತ್ತುತ್ತ ಕುಳಿತ. ಗಡ್ಡದವರಿರುವದರಿಂದ, ಯಾವುದಕ್ಕೂ ಕೊರತೆ ಕಾಣಲಿಲ್ಲ. ಬಿಸಿನೀರು, ಹಣ್ಣು, ಸೋಡಾ, ಚಹ ! ಕೈದಿಗಳಿಗೆಲ್ಲ ದೊರೆಯಿತು. ಜ್ವರ ಆರುತ್ತಲಿದ್ದರೂ ವಿಕ್ರಮನು ಹಾಸಿಗೆಯಲ್ಲಿಯೇ ಮಲಗಿದ್ದ. ತಮದ ಕುಲ್ವಕಾಲನಲ್ಲಿ ಲೀನವಾಗಿದ್ದುವು. ಬೇನೆಯ ಬಾಧೆಯು ಇರಲಿಲ್ಲ. ರತ್ನಾವಿರಹಿಯು ಕೈಹಿಡಿದು, ಅವನನ್ನೇ ನಿಟ್ಟಿಸುತ್ತಿದ್ದ.

" ಡಾಕ್ಟರ ಹ್ಯಾಂಗದ ಈಗ ? " ರತ್ನಾವಿರಹಿ ಕೇಳಿದ.

" ಆರಾಮದ ನಿಮುಗ ತ್ರಾಸು ಕೊಟ್ಟೆ. ''

" ಅದೇನಿಲ್ಲಾ ನಾ ನಿಮುಗ ಮಾಡೀನೀ ಅಂತ ತಿಳಕೋಬ್ಯಾಡ್ರಿ ನನ ರತ್ನಾನ ಸೇವೆ .... "

" ರತ್ನಾ ಸೆಟ್ಟಗಿದ್ದಾರ ? "

" ಹೇಳಬೇಕಂದ್ರ s ಭಾಳವ, ನೀವೂ ಜಡ್ಡಿನವರು. ಹುಚ್ಚಾಟ ಅಂತಾ ಮೊದಲೇ ಅಂತೀರಿ "

" ಹೇಳ್ರೀ- ನಾ ಏನು ಹಾಂಗನ್ನೂದಿಲ್ಲಾ "

" ಸ್ವಪ್ನಾ ! ಚಮತ್ಕಾರಿಕ ಸ್ವಪ್ನಾ !! "

" ರತ್ನಾ ದೇವೀದ s "

ಭಾಳ ಛಲೋ ಸ್ವಪ್ನಿದು. ನಿಮ್ಮ ಕಡೆ ಬಂದೇ ಬರ್ತಾರ ಎಂದು ನೀರನ್ನು ಯಾಚಿಸಿದ. ರತ್ನಾ ವಿರಹಿಯೇ ನೀರನ್ನು ಕೊಟ್ಟ. ವಿರಹಿ ಮಾತನಾಡುತ್ತಿದ್ದ, ವಿಕ್ರಮನು ಸಮ್ಮತಿ ಸೂಚಿಸುತ್ತಿದ್ದ. ಕೈದಿಗಳು ಅಗ್ನಿ ಮಥನದಲ್ಲಿ ತೊಡಗಿದರು. ಬೇಗ.ಅಗ್ನಿ ಸಾಕ್ಷಾತ್ಕಾರವು ಚಕಮುಕಿಯಿಂದ ಆಗಲೇ ಇಲ್ಲಾ. ವಿಕ್ರಮನು ಅವರ ಆತುರತೆ ಕಂಡು **" ಅಗ್ನಯೇ ಜಾತಾನು ಬ್ರೂಹಿ. ಅಗ್ನಯೇ ಜಾತಾಂ ಜನಿಷ್ಯ ಮಾಣಾಂಚಾ"** ಎಂದು ಆವ್ಹಾನಿಸಿದ. ವೈದೋರಿದನು ಧೂಮದೇವ " ಯತ್ರಧ್ರೂಮಃ ತತ್ರಾಗ್ನಿ ಎಂದ. ಪ್ರಸನ್ನನಾದನು. ಚುಟ್ಟಿಗಳು ಸುಟ್ಟವು. ವಿಕ್ರಮನಿಗೂ ನೆನಪಾಗಲು, ಎದ್ದು ಕುಳಿತು ಎಲೆಗೆ ಸುಣ್ಣವನ್ನು ಸವರಿದ.

ಡಾ. ಭಟ್ಟಿಯವರು ಹಣಿಕಿದರು. ವಿಕ್ರಮನು " ವಂದನಾಮಹಾ ದೇವ " ಎಂದ. ರಾತ್ರಿ ಜ್ವರದಿಂದ ನರಳಿದುದನ್ನು ತಿಳಿಸಿದ. ಸೊಳ್ಳೆಗಳ ಕಾಟ ತಪ್ಪಿಸಲು, ಕೊಠಡಿಗಳನ್ನು ಸ್ವಚ್ಛವಾಗಿರಿಸುವಂತೆ ತಿಳಿಸಲು, ವಿನಂತಿಯನ್ನು ಕೈದಿಗಳೆಲ್ಲರ ಪತಿಯಿಂದ ಇಟ್ಟ. ಮೂತ್ರವಿಸರ್ಜಿಸುವ ಸ್ಥಳದಲ್ಲಿ ಉಸುಕು ಹಾಕಿ, ಗಡಿಗೆ ಇಡಿಸಲು ಬೇಡಿದ. ತನ್ನ ಪ್ರಕೃತಿಯನ್ನು ಪರೀಕ್ಷಿಸಿ ಔಷಧ ಕಳಿಸಲು ಕೈಮುಗಿದ ಡಾಕ್ಟರನು ಹೊರಗೆ ಬಂದ. ವಿಕ್ರಮನನ್ನು ಡಾಕ್ಟರರು ನೋಡುವಂತೆ ನೋಡಲೇ ಇಲ್ಲ. ಮುಟ್ಟಿದರೆ ಮೈಲಿಗೆ ಆಗುವವೆನ್ನುವ ಹಾರುವರಂತೆ, ದೂರಿನಿಂದಲೇ! **ಅಸ್ s ಕಾ s ಯ್ ಬ s ರ್** ಎನ್ನುವುದೇ ಅವರ ಪರಿಪಾಠವಿರಬಹುದು. ಎಲ್ಲ ಕೊಠಡಿಗಳಿಗೂ " ಅಸ್ s ಕಾಯ್ s ಬ ರ್ " ಮುಟ್ಟಿಸಿ, ಸಿಪಾಯಿಗಳು ಹಿಡಿದ್ದೇ ನಿಂತ ಪುಸ್ತಕದಲ್ಲಿ ಸಹಿ ಇಕ್ಕಿದರು. ಕೈದಿಗಳು ಮಾತನಾಡಿಸದಿದ್ದರೂ, " ಅಸ್ s ಕಾಯ್ s ಬ s ರ್ ಎಂದು ನಡೆದರು.

ಗಡ್ಡದವರು ಬೇಡವೆಂದರು. ಸಿಪಾಯಿಗಳು ಬೇಡವೆಂದರು. ವಿಕ್ರಮ ಕೇಳಲೇ ಇಲ್ಲ. ಉಡುಪಿಯವರ ತೀರ್ಥ ಪ್ರಸಾದಗಳನ್ನು ಭಯ ಭಕ್ತಿಗಳಿಂದ ಸ್ವೀಕರಿಸಿದ. ಸಿಪಾಯಿಗಳು ವಿಕ್ರಮನ ಗುಣಶಾಂತವಾದು ದೆಂದು ಹೊಗಳಿದರು. ವಿಕ್ರಮನು "ಅಸ್ s ಕಾ s ಯ್, ಬ ss ರ " ಎಂದ. ಗಡ್ಡದವರು 'ಚಟ' ಚಾಚಿದರು 'ಅಸ್ ಕಾಯ್ ಬ್ಬರ' ಗುಣಾವ ಗುಣಗಳ, ಕಟು ಟೀಕೆಗಳೂ ಸುರಿದುವು. ಅವರ ಮರಾಠಿಯ ಭಾಷೆಯ ವ್ಯಾಮೋಹ, ಅಧಿಕಾರದ ಮದಹಂಕಾರ, ಎಲ್ಲರೂ ಕೀಳು, ತಾನೇ ಮೇಲೆನ್ನುವ ಸ್ವಭಾವ, ಲಂಚೆಲುವಿನ ಸವಿಯ ಒಂದೊಂದು ಕತೆಗಳು, ಸರತಿಯಂತೆ ಸಿಪಾಯಿಗಳ ಮುಖದಿಂದ, ಹೊರಬಿದ್ದವು. ವಿಕ್ರಮನು ಶ್ರೋತೃವಾಗಿದ್ದ.

'ಮುದ್ದತು' ಇದೆ ಎಂದು ವಕೀಲರ ಕಾರಕೂನರು, ವಿಕ್ರಮನಿಗೆ ಜ್ಞಾನಮಾಡಿಕೊಟ್ಟರು. ಕೇಳಿದುದಕ್ಕೋ ಏನೋ ಜ್ವರಏರಿದುವು. ಉಡುಪಿಯವರ ತೀರ್ಥಪ್ರಸಾದಗಳ ಮಹಿಮೆ ಎಂದರು ಸಿಪಾಯಿಗಳು. ಜ್ವರಕ್ಕೆ ಸಹಾಯವಾಗಿ, ತಲೆನೋವೂ ಎದ್ದಿತು. ಮೈಕೈಶೂಲಿಯೂ

ಇದ್ದಿತು. ಕೊಠಡಿಯನ್ನು ಆಶ್ರಯಿಸಿದ. ತಾನು ಮಾಮ್ಲೇದಾರರೆದುರು ಹೇಳಬೇಕಾದುದೇನು ? ಅಪರಾಧಿ ಅಲ್ಲವೆಂದು ಹೇಳುವುದೇ? ತನಗೆ ಶಿಕ್ಷೆ ಎಷ್ಟಾಗಬಹುದು ? ವರ್ಷ-ಎರಡು ವರ್ಷ ಕಾರಾಗೃಹದಲ್ಲಿಯೇ ಇರುವುದಾದರೆ, ಮನೆಯವರ ಗತಿ? ಇಂತಹ ಅಪರಾಧಿಗಳಿಗೆ ಶಿಕ್ಷೆವಿಧಿಸಿದುದು ಎಷ್ಟೆಂಬುದನ್ನು ಸ್ಮರಿಸಿದ. ಆರು ತಿಂಗಳಾಗಬಹುದೆಂದ. ಮೂರು ದಿನಗಳೇ ಕಲ್ಪದಷ್ಟಾಗಿದೆ ಅವನಿಗೆ. ಜ್ವರದ ಏರಿಕೆ ಇಮ್ಮಡಿಯಾಯಿತು. ವಿಚಾರವೂ ತಕ್ಕಂತೆ ಬೆಳೆಯಿತು. 'ಅವ್ವಾ! ಅವ್ವಾ!!' ಎಂದು ಒರಲಿದ.

ಕೈದಿವಿಕ್ರಮನನ್ನು ಮಾಮ್ಲೇದಾರರ ಕಚೇರಿಗೊಯ್ದರು ಸಿಪಾಯಿಗಳು. ಮಾಮ್ಲೇದಾರರು ಕಣ್ಸನ್ನೆಯಿಂದ ಮರ್ಯಾದೆ ನೀಡಿ, ಕುಳ್ಳಿರಲು ತಿಳಿಸಿದರು. ಸರಕಾರಿ ವಕೀಲರ ಜೊತೆಯಾಗಿ, ವಿಕ್ರಮನ ವಕೀಲರು ಕುಳಿತಿದ್ದರು. ಆರೋಪಿಗೆ ಬಂಧಿಸಿದ ಕಾರಣ ತಿಳಿಸಿ, ಕೆಲಸಕ್ಕೆ ಆರಂಭಿಸಿದರು. ಸಾಕ್ಷಿಯಾದವರು ಪ್ರವೇಶಿಸಿದರು. ದೇವರನ್ನು ಕೊಲೆಗೈದವು. ಉದ್ಯೋಗ - ಒಕ್ಕಲುತನವೆಂದರು. 'ಉದವೀರಯ್ಯ' ಸದುದ್ಯೋಗಿ ಎಂಬುದು ಕಚೇರಿಯಲ್ಲಿ ಕುಳಿತವರಿಗೆಲ್ಲ ಗೊತ್ತಿದೆ. ಕೆಲವರು ಅವನ ಹಣ್ಣಿನ ರುಚಿಯನ್ನು ಆಸ್ವಾದಿಸಿದ್ದಾರೆ ಕುಳಿತವರಲ್ಲಿ. ಉದವೀರಯ್ಯನವರಲ್ಲಿ, ಸುಳ್ಳಿನ ಆರೋಪ ಹೊರಿಸುವುದರಲ್ಲಿ ತಥ್ಯವಿಲ್ಲ. ಕಚೇರಿಯೇ ಕಲಿಸಿದೆ ಹಾಗೆ ಹೇಳುವುದಕ್ಕೆ. ಬೀದಿಯ ಭಿಕ್ಷುಕನಿರಲಿ, ಕಳ್ಳನಿರಲಿ, ಉದ್ಯೋಗದ ರೀತಿಯನ್ನು ತಿಳಿಯದವನಿರಲಿ, ಕಚೇರಿಯಲ್ಲಿ 'ನಿರುದ್ಯೋಗಿ' ಎಂದು ಹೇಳುವಂತಿಲ್ಲ. ಒಕ್ಕಲುತನವೆಂದು ಹೇಳಲೇಬೇಕು. ನಿರುದ್ಯೋಗಿಯಾಗಿರುವೆನೆಂದು ಹೇಳುವುದಕ್ಕೆ, ನಾಚಿಕೆ ಬೇರೆ. ಹೇಳಿದರೂ ಉದ್ಯೋಗ ಕೊಡಿಸುವದೂ ಅಷ್ಟರಲ್ಲಿಯೇ ಇದೆ. ಉದವೀರಯ್ಯನವರು, ಪರಂಪರೆಯನ್ನು ಕಾಯ್ದುಕೊಂಡು ಬಂದ ಶ್ರೇಯಸ್ಸಿಗೇ ಪಾತ್ರರಾದರು. ತಾವು ವೇಶ್ಯೆಯ ತಂದೆಎಂದೂ, ಅವಳು ವ್ಯೈವಾರು ವುದರಿಂದ, ಹೊಟ್ಟೆ ಹೊರೆಯುವೆನೆಂದು ಹೇಳಬೇಕಾಗಿದ್ದಿತೆ ? ಮಗಳು ಎಳೆವಾಳೆಯ ಸುಳಿಯಂತೆ ಇರುವಳೆಂದೂ, ರೋಗದ ತವರಾದರೂ ಬಣ್ಣ ಬಳಿದುಕೊಂಡು, ತನ್ನ ತಂದೆಯ, ಅವಳ ತಾಯಿಯ ಒಡಲಿಗಾಗಿ ದುಡಿ

ಯುವಳೆಂದು ಹೇಳಬೇಕೇ? ಸುಳ್ಳೂ ವ್ಯವಹಾರ ದೋಷ! ಶಾಸ್ತ್ರಕಾರರೇ ಹೇಳಿಲ್ಲವೇ ? **ಪಂಚಾ ನೃತಾ ನ್ಯಾಹುರ ಪಾತಕಾಣಿ** ' ಎಂದು.

ಪಂಚನಾಮೆಯು, ತನ್ನಿಂದಲೇ ಬರೆಯಲಾಯಿತೆಂದೂ, ಸಹಿ, ಅಲ್ಲಾ **ಹೆಬ್ಬೆರಳಿನ ಗುರುತು**, ತನ್ನದೇ ಎಂದೂ, ಆರೋಪಿಯ ಪರಿಚಯ ತನಗಿದೆಯೆಂದೂ, ಆರೋಪಿಯು ತಾನು ಪೋಲೀಸರೊಡನೆ ಹೋದಾಗ ಮನೆಯ ಪಡಸಾಲೆಯಲ್ಲಿ ಕುಳಿತಿದ್ದನೆಂದೂ, ಪೋಲೀಸರು, ಪಂಚರು, ಝುಡತಿಯನ್ನು ವಿಕ್ರಮನಿಂದ ಪಡೆದರೆಂದೂ, ಕಾಗದಗಳು ಅಟ್ಟದ ಮೇಲೆ, ಎಲೆ ಚೀಲದ ಕೆಳಗೆ, ಇದ್ದುವೆಂದೂ, ಮಾಡದಲ್ಲಿಯೇ ಚೀಲವಿತ್ತೆಂದೂ, ವೇಳೆ- ಬೆಳಗಿನ ೭ ಘಂಟೆ ಆಗಿರಬಹುದೆಂದೂ ತಿಳಿಸಿದ. ಮಾಮ್ಲೇದಾರರು ಬರೆದುಕೊಂಡರು. ಸರಕಾರೀ ವಕೀಲರು ಉದವೀರಯ್ಯನವರ ಹೇಳಿಕೆಯಿಂದ ತೃಪ್ತರಾದರು. ವಿಕ್ರಮನ ವಕೀಲರು ಬರೆಯುಕೊಳ್ಳುತ್ತಲಿದ್ದರು.

ವಿಕ್ರಮನು ಬೇಸರಗೊಂಡು. ವಕೀಲರು ಕೇಳುವದೇನು ? ಉದವೀರಯ್ಯನು ಹೇಳುವುದೇನು ? ಸುಳಿನ ಸಾಮ್ರಾಜ್ಯದಲ್ಲಿ ತಾನಿರುವ-ದಾಗಿ ನಂಬಿದ. ಜ್ವರದ ತಾಪಕ್ಕೆ ಬಳಲಿದ. ಜ್ವರ ಏರುತ್ತಲೇ ಇದ್ದವು. ಸಾಕ್ಷಿದಾರನ ಹೇಳಿಕೆ ಕೇಳುವದಕ್ಕೆ ಸಾಧ್ಯವಾಗದಾಯಿತು. ತನ್ನ ಸ್ಥಿತಿಗೆ ಮರುಗಿದ. ವಕೀಲೀಕೊಟ್ಟುದುದೇ ತಪ್ಪೆನ್ನಿಸಿತು. ಮಾಡಿದುದು ನಿಜ. ಅಪರಾಧಿ ಅಲ್ಲವೆಂಬುದಕ್ಕೇ ಅಲ್ಲವೇ ? ಆಡಂಬರ ! ತಾನೂ ಒಪ್ಪಲೇ ಎನ್ನಿಸಿತು. ನರಳಿಕೆ ತಿಳಿಯದೇ ನುಗ್ಗಿತು, ಕಚೇರಿಯಲ್ಲಿರುವವರ ಅರಿವೂ ತಪ್ಪಿತು, ನರಳಿದರೂ ತಾನೇ ನರಳಿದವನೆಂಬದೂ ತಿಳಿಯದು. ಮಾಮ್ಲೇದಾರರು, ವಿಕ್ರಮನ ಸ್ಥಿತಿ ತಿಳಿದು ವಿಚಾರಣಾಸಭೆ ಮುಂದೂಡಿದರು.

ಊರ ಡಾಕ್ಟರರೇ ಇಂಜಕ್ಶನ್ ಕೊಟ್ಟರು ವಿಕ್ರಮನಿಗೆ. ಒಂದುಸಲ ಔಷಧಿಯನ್ನು ಕುಡಿಸಿ ಮಲಗುವಾಗ ತೆಗೆದುಕೊಳ್ಳಲು ಹೇಳಿ ನಡೆದರು. ಗಡ್ಡದವರು ವಿಕ್ರಮನ ಮನೆಯವರೇ ಆಗಿ, ಬೇಗ ಗುಣಪಡಿಸಲು, ಇನ್ನೂ ಒಂದು ಇಂಜಕ್ಶನ್ ಮಾಡಲು, ಕಳಕಳಿಯಿಂದ

ಕೇಳಿಕೊಂಡರು. ವಿಕ್ರಮನು ಡಾಕ್ಟರರನ್ನು ಹಳಿದ, ಗಡ್ಡದವರನ್ನು ನಿಂದಿಸಿದ. ಮಗುವನ್ನು ತಾಯಿಯನ್ನು ಕರೆತರಲು ಅರ್ಭಟಿಸಿದ. ತಾನು ಜ್ವರದ ಬೇನೆಯಿಂದ ಬದುಕುವದಿಲ್ಲವೆಂದೂ ತನ್ನ ತಾಯಿ, ಹೆಂಡತಿ ಕೂಸು ಅನಾಥರಾಗುವರೆಂದೂ ಅತ್ತ, ಕೊನೆಗೆ ಸಾಯುವಾಗ ಸಂಸಾರದ ವಿಚಾರಗಳು ಬೇಡವೆಂದೂ ಭಗವಾನ್ ಶ್ರೀಕೃಷ್ಣನ ವಿಶ್ವರೂಪದ ದರ್ಶನ ಪಡೆದ. ಗೀತೆಯ ಶ್ಲೋಕಗಳನ್ನು ನರಳುತ್ತಲೇ ಅಂದ. ಹೊರಳಾಡುತ್ತಲೇ ಕೈಮುಗಿದ. ಪಶ್ಯಾಮಿದೇವಾಂಸ್ತವದೇವದೇಹೇ ಸರ್ವಾಂಸ್ತಥಾ ಭೂತ ವಿಶೇಷ ಸಂಘಾನ್ ಬ್ರಹ್ಮಾಣಮೀಶಂ ಕಮಲಾಸನಸ್ಥಂ ಋಷೀಂಶ್ಚ ಸರ್ವಾನ್ ಉರಗಾಂಶ್ಚ ದಿವ್ಯಾನ್ ಎನ್ನುತ್ತ ಅನುವಾದವೂ ಪ್ರಾರಂಭವಾಯಿತು. ವಿಶ್ವರೂಪಿ ಪರಮಾತ್ಮಾ; ನಿನ್ನಲ್ಲಿ ಸರ್ವವೂ ಅದೆ. ಲಾಕಪ್ಪು ಇದೆ. ಕೈದಿಗಳು, ಸರ್ಪರೂಪಿ-ಸಲಾಖೆಗಳು. ಋಷಿ ಸದೃಶ ಸೊಳ್ಳೆ ಸಂಘಗಳೂ ಮಮದೇಹಾಸನಸ್ಥ ತಗಣೆಗಳೂ ನಿನ್ನಲ್ಲಿವೆ. ಅರ್ಜುನನು ಇವೆಲ್ಲವನ್ನು ಕಾಣಲು ಶಕ್ತನಾಗಲಿಲ್ಲ. ನೀನು ದಿವ್ಯದೃಷ್ಟಿಗಳನ್ನು ದಯಪಾಲಿಸಿದುದರಿಂದ ನರಕಾವಲೋಕನೆ ಒದಗಿತು. ಇನ್ನೂ ಏನೇನನ್ನೋ ಬಡಬಡಿಸುತ್ತಿದ್ದ. ಜೇರೆ ಲಾಕಪ್ಪಿನ ಕೈದಿಗಳು ಕೇಳಿ ನಗುತ್ತಲಿದ್ದರು. ಕೆಲವರು ' ಪಕೃತಿಯಗುಣ 'ವೆನ್ನುತ್ತಿದ್ದರು. ಪಿತ್ತದ ಪರಿಣಾಮವೆಂದರು. ಅಬ್ಬರಬಡಕನೆಂದರು.

ನೇಸರನು ನೇಪಥ್ಯದೊಳಸೇರಿದ, ಸಹಾಯಕ ಸ್ವಯಂಸೇವಕ ಕೈದಿ ವಿಕ್ರಮನಲ್ಲಿಗೆ ಬಂದ. ವಿಕ್ರಮನ ತಲೆ ತಿಕ್ಕಿದ. ಕೈಒತ್ತಿದ, ಎಷ್ಟುಸಲ ಬರುವದಿಲ್ಲವೆಂದರೂ ಕೇಳದ್ದಕ್ಕೆ ಅಪಸ್ವರದಲ್ಲಿ ಆಲಾಪಮಾಡಿ ' ಚಿಂತಿಯಾಕ ಮಾಡ್ತಿದಿ ಚಿನ್ಮಯನಿದ್ದಾನೆ ' ಎಂಬ ಪದವನ್ನು ಹಾಡಿದಕೈದಿ.

ನಿದ್ರಿಸಲು ಯತ್ನಿಸಿದ. ಕೈದಿಯು ವಿಕ್ರಮನ ಸೇವೆಮಾಡುತ್ತಲೇ ಇದ್ದ. ಒಬ್ಬೊಬ್ಬರೇ ಬರತೊಡಗಿದರು. ಬೇಡವೆಂದು ದೂಡಿದರೂ ಕೇಳದಾದರೂ ಮಾತನಾಡಿಸಿದರು. ರೇಗಿದಾ ! ಮಗ್ಗಲು ಹೊರಳಿದ,

ಮುಸುಕಿನಲ್ಲಿಯೇ ಬಂದರು. ' ಸೆರೆಹಿಡಿದುದಕ್ಕೆ ಬೆದರಿದೆಯಾ ' ಎಂದ ನೊಬ್ಬ ' ಅದಕ್ಕೇ ಜ್ವರ ಬಂದವು ' ಎಂದ ಬೇರೊಬ್ಬ 'ಆಡುವುದು ಸುಲಭ. ಮಾಡುವುದು ಕಠಿಣ ' ಎಂದ. ' ದೇಶಭಕ್ತಿಗೆ ದೇಹವನ್ನು ಮುಡುಪಿಟ್ಟವರಿದ್ದಾರೆ ಇಷ್ಟಕ್ಕೆ ಜ್ವರಬಂದರೆ ? ' ರೊಚ್ಚಿನಿಂದ ಎದ್ದು ಕುಳಿತ ವಿಕ್ರಮ. ಕೈದಿ ಬೆದರಿದ. ಮತ್ತೆ ಜ್ವರ ಬಂದವೇನೊ ಎಂದು, ಅಂಜಿಕೆ ಅವನಿಗೆ. ವಿಕ್ರಮನು ತಲೆ೩ಲೆ ಬಡಿದುಕೊಂಡು, ಮತ್ತೆ ಮಲ ಗಿದ. ಹೊಸ ರೋಗವೇ ಸೇರಿತೆಂದು ಕೈದಿಯ ಕಲ್ಪನೆ. ಮುಸುಕನ್ನು ತೆರೆದು ಹೊಕ್ಕರು ಬೇರೆಯುವರು. ಬಿ. ಜೆ. ಬಂದು ನಕ್ಕ! ಅವನೊಡನೆ ಕುಸ್ತಿಯನ್ನೇ ಆಡಿದ. ಉದವೀರಯ್ಯನವರೂ ಕಾಣಿಸಿಕೊಂಡರು 'ಮಗ ಳಿಂದ ಹೊಟ್ಟೆ ತುಂಬದ್ದಕ್ಕೆ ಖೊಟ್ಟಿ ಸಾಕ್ಷಿದಾರನಾಗಿ ಸಂಪಾದಿಸು- ವಿಯಾ? ಆಗಲಿ ಕಾಂಗ್ರೆಸ ರಾಜ್ಯವಾಗಲಿ, ನಿಮ್ಮನ್ನೆಲ್ಲ ಲಾಕಪ್ಪಿನಲ್ಲಿ ಇರಿಸುತ್ತೇನೆ' ಅಂದೆ. ನೂರಾರು ಮಾನವ ಪ್ರಾಣಿಗಳಲ್ಲದೇ, ಚರಾಚರ- ಗಳೂ ಕಾಣತೊಡಗಿದುವು.

ಪ್ರಸಾದ ಪ್ರಾದುರ್ಭವವಾಯಿತು. ಜ್ವರ ಏರಿದವು. ಜೊತೆಯ ಕೈದಿ ಯೊಡನೆ ತಾನೂ ಎದ್ದುಬಂದು, ರೊಟ್ಟಿಕೊಡಲು ಅಯ್ಯನವರನ್ನು ಬೇಡಿದ. ಕೇಳಿದುದಕ್ಕೆ ಸಂತಸಗೊಂಡ ಅಯ್ಯನವರು, ಎಳ್ಳಿನ ಚಟ್ಣಿಯನ್ನು ಹಚ್ಚಿ ರೊಟ್ಟಿಕೊಟ್ಟರು. ಜೊತೆಯಕೈದಿ ಬೇಡವೆನ್ನುವಾಗಲೇ ಗಬಗಬ ತಿಂದು ನೀರ್ಕುಡಿದ. ಜ್ವರ ಇನ್ನೂಏರುತ್ತಲೇ ಇದ್ದವು. ಜೋಲಿ ಹೊಡೆಯುತ್ತ ಅರ್ಧ ಮೈಯನ್ನು ಹಾಸಿಗೆಗೆ, ಅರ್ಧ ಮೈಯನ್ನು ನೆಲಕ್ಕೆ ಹಾಕಿ ಬಿದ್ದ. ಕೈದಿ ಎತ್ತಿ ಮಲಗಿಸಿದ. ಸರತಿಯ ಪೋಲಿಸನನ್ನು ಕರೆದು, ವಿಕ್ರಮನ ಸ್ಥಿತಿಯನ್ನು ತಿಳಿಸಿದ. ಸರಕಾರೀ ಆಸ್ಪತ್ರೆಗೇ ಕರೆದೊಯ್ಯಲು ಶಿರಸ್ತಾ ರರೇ ಆಜ್ಞೆವಿಧಿಸಿದಂತೆ, ಟಾಂಗೆಯೂ ಬಂದಿತು. ಸಿಪಾಯಿ ವಿಕ್ರ ಮನ ಮುಸುಕನ್ನು ತೆಗೆದ.

" ರಾಯ್ರs ಏಳ್ರಿ...."

" ಯಾಕ್ರೆಪಾ ಹುತ್ತ ss ? ' ದೀನನಾಗಿ ಕೇಳಿದಾ.

“ ದವಾಖಾನೆಗೆ ಹೋಗೋಣ್ರೀ!....”

“ ಏನ ...ದ....ಅ-ಲ್ಲೇ?....”

“ ನಿಮಗೆ ಜ್ವರಾ ಭಾಳ ಬಂದಾವ. ಅದಕ್ಕs ಹೋಗೂಣು”

“ ಏಳ್ರಿ—ಏಳ್ರಿ—ಟಾಂಗಾ ಬಂದದ ನೋಡ್ರಿ ? ”

“ ನಾ ಒಲ್ಲ್ರೀ— ಕಾಡಬ್ಯಾಡ್ರೀ....ಒಲ್ಲೆ”

“ ಜ್ವರಾ ಹೆಚ್ಚವ ನೋಡ್ರಿ....”

“ ಇದ್ದ್ರ ಇರ್ಲಿ. ನಾಏನುದವಾಖಾನೆಗೆ ಹೋಗೂದಿಲ್ಲಾ’

“ ನಿಮ್ಮ ತಾಯಿಯವರು ಹೇಳ್ಯಾರ್ರಿ....? ’

“ ಏನಂತ ?....’

“ ದವಾಖಾನಿಗೆ ಕರಕೊಂಡೇ ಹೋಗ್ರಿ ಅಂತಾ.’

“ ಹೋಗೂ ಅವರು ಅವರೋ ನಾನೋ ? ”

ಸಿರಸ್ತದಾರರ ಪ್ರಯತ್ನವೂ ನಿಷ್ಫಲವಾಯಿತು. ಮಾಮ್ಲೇದಾರರೂ ವಿಫಲರಾದರು. ಟಾಂಗಾದವನೂ ಶಿಪಾಯಿಯನ್ನು ಹಳಿದಿರಬಹುದು. ಏನೂ ತೋಚದೆ, ನಿತ್ಯದ ಕೆಲಸಕ್ಕೆ ತೊಡಗಿದರು. ಡಾ. ಭಟ್ಟಿಯವರನ್ನೇ ಕರೆಕಳುಹಿದರು. ‘ ಅಸ್ಸಿs ಕಾs ಯ್ ಒs ರ್ ’ ಸಮ್ಮೇಲನದ ಅಧ್ಯಕ್ಷತೆ ವಹಿಸಿದ್ದರು. ಸಮ್ಮೇಲನದ ಹಿತೈಷಿಗಳೂ ಆಶ್ರಯದಾತರೂ ಆದ ಡಾ. ಭಾರತೆ, ಡಾ. ಪೋಟಾಟೆಯವರು, ಸಭೆಯ ಮಹತ್ವದ ಕನ್ನಡ ಟೀಕೆಯನ್ನು ಅತ್ಯವಶ್ಯ ನೆರವೇರಿಸಲೇಬೇಕಾದುದರಿಂದ; ಅಧ್ಯಕ್ಷರಿಗೆ ಅಪ್ಪಣೆ ನೀಡಲಿಲ್ಲ. ಡಾ. ಭಟ್ಟಿಯವರು ಅನಿರ್ವಾಹ ಅಡಚಣಿಗಳ ಮೂಲಕ, ಸಾಯಂಕಾಲ ಬರುವುದಾಗಿ ನಿರೋಪ ಕಳಿಸಿದರು.

ಗಡ್ಡದವರೇ ಶುಂಠಿಯ ಕಷಾಯವನ್ನು ಕುಡಿಸಿದರು. ಜ್ವರ ಇಳಿಯುವಂತೆ ಕಾಣದ್ದರಿಂದ ಕಳವಳಗೊಂಡರು. ತಲೆಮುಟ್ಟಿ, ಮೈತಟ್ಟಿ ನೋಡಿದರು. ವಿಕ್ರಮನಿಗೆ ಪ್ರಜ್ಞೆ ಇರಲಿಲ್ಲ. ವಿಕ್ರಮನನ್ನು ಕೂಗಿದರು. ‘ಓ’ ಗೊಟ್ಟ. ‘ನೀರು ಬೇಕೇ ! ’ ಎಂದರು. ‘ ಕಾಫಿ ತರಲಿಯಾ ! ’ ಎಂದರು. ಉತ್ತರವೇ ಇಲ್ಲ. ಮನೆಯವರಿಗೆ ವಿಕ್ರಮನ ಪರಿಸ್ಥಿತಿಯನ್ನು

ತಿಳಿಸುವುದೇ ಯುಕ್ತವೆನ್ನಿಸಿತು. 'ಅಂತಹ ವಿಷಸಮಯ ಬಾರದಿರಲೀ' ಎಂದು ಬಯಸಿ ಹೊರಟ, ತಿಳಿಸಲು 'ಗಾಬರಿಯಾದರೆ....' ಬೇಡವೆನ್ನಿಸಿದುದರಿಂದ ತಿರುಗಿದ. 'ಕ್ವಿನಾಯಿನ್ ಕೊಟ್ಟರೇ ....' ಎನ್ನಿಸಿತು. ದಾರಿಯಲ್ಲಿ ನಿಂತು, ಮುಂದೆ ಹಿಂದೆ ಹೋಗಿ, ನಿರ್ಧರಿಸಿ, ಔಷಧಿಯನ್ನು ತಂದರು. ವಿಕ್ರಮನಲ್ಲಿಗೆ ಬಂದು ನೋಡಿದರು. ವಿಕ್ರಮನು ಮೊದಲಿನಂತಿರಲಿಲ್ಲ. ಜ್ವರ ಆರುತ್ತಲಿದ್ದವು. ಗಡ್ಡದವರೊಡನೆ ಮಾತನಾಡಿದ. ಗಡ್ಡದವರ ಆನಂದಕ್ಕೆ ಎಣೆ ಇಲ್ಲ. ತಂದ ಔಷಧಿಯನ್ನು ಕೊಟ್ಟರು. ವಿಕ್ರಮನು ಅವರಮನದ ತೃಪ್ತಿಗಾಗಿ ಕುಡಿದ.

"ಈಗ ಅರಾಮಾತ್ನೋಡ್ರಿ ನಿಮಗ" ಗಡ್ಡದವರು ಮುಖ ನೋಡುತ್ತ ನುಡಿದರ. ಅವರ ನುಡಿಯಂತೆ, ಮೊಗದಲ್ಲಿಯು ನಿಸ್ತೇಜತೆ ಮಾಯುವಾಗ ತೊಡಗಿತು. ತನಗೆ ಗುಣವಾಗಿದೆ ಎಂಬ ಭಾವನೆ ಪ್ರಬಲವಾಯಿತು.

"ನೀವು ಬಂದ್ಮ್ಯಾಕತ್ರಾತು. ಕಡಿಮಾತೇ- ಹಿಂದಿನ ಜನ್ಮದ ತಂದಿ ನೋಡ್ರಿ ನೀವು. ಸಾಹೇಬ್ರs ಒಂದ್ಕಥಿ ಹೇಳ್ರಿ ?"

"ನಡದ ಕಥೀನs ಹೇಳ್ತಿನಿ ಕೇಳ್ರಿ"

ಹೇಳಿಕೆಗೆ ಸಾಬರು ಅಣಿಯಾದರು.

ಕೇಳಿಕೆಗೆ ವಿಕ್ರಮನು ಸಿದ್ಧನಾದ. ಇದು ನೋಡ್ರೀ ಅಪತ್ತs ಬಸ್ಸಿನ್ಯಾಗಿಂದ ನಾವೆಲ್ಲಾ ಆಊರ್ಗೀ ಹೋದ್ವಿ. ಇಳದ್ನೋಡಿದ್ರs ದಿಕ್ಕs ತಪ್ಪಿತು. ಎತ್ಲಾಗ ನೋಡಿದ್ರೂ ಹೆಣಮಕ್ಳೆ ಹೆಣಮಕ್ಳು! ಎಲ್ಲಾರೂ ಬಿಳೇ ಪತ್ಲಾ ಉಟಗೊಂಡಾರ. ಕೈಯಾಗ ನಿಶಾನಿ ಹಿಡದಾರ, ಬಗಲಾಗಿನ ಕೂಸಿನ ಕೈಯಾಗೂ ಒಂದೊಂದು ನಿಶಾನಿ! ಹಾಡ್ತಾರ! ಜಯ-ಜಯಕಾರ ಮಾಡ್ತಾರ! ಖರೇ ಹೇಳ್ತಿನ್ರೀ .... ಮೈತುಂಬಿತು ನಮಗೂ! ಒಂದು ನಿಶಾನೀ ತಗೊಂಡು ಅವರ ಸಂಗ್ತೀನೆ ಹಾಡಬೇಕೂ ಅನಿಸಿತು. ನಮ್ಮ ಸಾಬರ ಹುಕುಮಾತು. ಎಲ್ಲಾರ್ನೂ ಓಡಸ್ಲಿಕ್ಕೆ! ಬಡಿಗೀ ಬಂದೂಕಾ

ಎತ್ತಿದ್ರಿ. ಓಡ್ಲಿಕ್ಕೆ ಸುರು ಆತ್ನೋಡ್ರಿ. ದಿಕ್ಕೆಟ್ಟು ಓಡಿದ್ರು. ಇನ್ನೇನು ಮುಗೀತೂ ಅನ್ನೂದ್ರಾಗs ಮತ್ತs ಹೆಣಮಕ್ಕೂ ಬಂದೇ ಬಿಟ್ರು.

" ಏನ ಮಾಡ್ಲಿಕ್ಕೆ ಬಂದಿದ್ರು. "

" ಹೇಳ್ತಿನಿ ಅದನ್ನೇ ಹೇಳ್ತಿನಿ. ಬಂದವರs ಮೋಟಾರಿನ ಮುಂದ ಬಿದ್ರು. ಮೋಟsರಕ್ಕs ನಿಶಾನಿ ಹಚ್ಚಿದ್ರು. ನಾನೂರರ ಮ್ಯಾಲೆ ಇರಬೇಕು ಹೆಣಮಕ್ಳು! ಬೇಕಾದಷ್ಟು ಹೇಳಿದ್ವೀ, ಅವರೇನು ಹಿಂದ್ಕ ಸರೀಲಿಲ್ಲಾ. ಇಂತಾ ಚೆಂದಿತ್ತ್ರೀ .... ಗೌಡನ ಹೇಣ್ತಿ-ಕುಲಕರ್ಣಿ-ವಾಲೀಕಾರರಹೆಂಡ್ರೆಲ್ಲಾ ನಿಶಾನೀ ಹಿಡಕೊಂಡು ನಿಂತಾರ!! ಗೌಡ-ಕುಲಕರ್ಣ್ಯಾರು ಮ-ತಮ ಹೆಂಡ್ರ ಕೈಯಾಗಿನ ನಿಶಾನೀ ಕಸಗೋಳಿಕ್ಕೆ ಓಡ್ಯಾಡ್ತಾರ, ಏನಾದ್ರೇನು? ಗಂಡಂದ್ರಎದೀಮ್ಯಾಲೆ ಕೈಕೊಟ್ಟುಸರಿಸಿ, ಮುಂದ ಬಂದ್ರೇ ನಿಶಾನೀತೊಗೊಂಡು. ಗೌಡಕೀಗೆ ರಾಜೀನಾಮೆ ಕೊಡ್ರೀಅಂತ ಗೌಡನ ಹೇಣ್ತಿ ಒದರತಾಳ.'

" ಏನ್ಮಾಡ್ಲಿಕ್ಕೆ ಹೊಂಟದ್ರೂ " .... ?

'ಚಾವಡೀ ಒಳಗಕೂತು ಕಾಂಗ್ರೆಸ್ಸದ ಕಚೇರಿ ಮಾಡ್ಯಾವ್ರಿ ಇವರು!! ಬೇಲೀನೇ ಕೂತು ಹೊಲಾ ಮೇದ್ರs ಯಜಮಾನಾ ಏನ್ಮಾಡ್ತಾನ್ರೀ? ಮನ್ಯಾಗಿನ ಹೆಣಮಕ್ಳೇ ಕಾಗದ-ಪತ್ರಾ ಸುಟ್ಟು,ಬಂದೂಕಾ ಕತ್ತೀ ಎತ್ತಿ ಕಳಿಸಿದ್ರಂತ.'

" ಮುಂದೇನಾತು ಹೆಣಮಕ್ಕಳ್ದು ? "

" ಕಿಡಿಗೇಡಿ ಮಂದೀ ಎಲ್ಲಿ ಹೋದ್ರೂ ಇದ್ದೇಇರ್ತಾರಲ್ಲ್ರಿ! ಕಲ್ಲು ಒಗೀಲಿಕ್ಕೆ ಹತ್ತಿದರು. ಸಿಪಾಯ್ರು ಚಾವಡೀ ಕಾಯ್ತಿದ್ರು. ಒಬ್ಬರ್ನೂ ಒಳಗ ಬಿಟ್ಟಿದ್ದಿಲ್ಲಾ. ಗುಂಪು ಜೋರಿನಿಂದ ಚಾವಡಿತನಕಾ ಬರೂದೂ ಹಿಂದ್ಕ ಸರಿಯುದೂ ನಡದಿತ್ತು. ಕಲ್ಲು ಬೀಳೂದರಕಿಂತಾ ಮೊದಲು ಏನೇನು ಗದ್ಲ ಇದ್ದಿದ್ದಿಲ್ಲ. ಸಾಹೇಬ್ರೂ ನಮಗೆಲ್ಲಾ ಹೇಳಿದ್ರು ಯಾರ್ನೂ ಹೊಡೀಬ್ಯಾಡ್ರೀ ಅಂತ. ಸುಮ್ನೇ ಬೆದರಸಬೇಕು. ಕಲ್ಲ ಯಾವಾಗ ಜೋರ್ನಿಂದs ಬೀಳ್ಲಿಕ್ಕೆ ಹತ್ತಿದೂ, ಆಗ ಸಾಹೇಬ್ರು ಸಿಟ್ಟಿಗಿ ಬಂದ್ರು,

ಹೆಣಮಕ್ಕಳು ಜಯಕಾರ ಮಾಡಕೋತs ಚಾವಡ್ಯಾಗ ಹೊಕ್ಕೇ ಬಿಟ್ರು. ಪೋಲಿಸ್ರುಏನ್ಮಾಡ್ಬೇಕು? ಒಬ್ಬಾಕಿ ಚಾವಡೀ ಮಾಳ್ಗೀಮ್ಯಾಲೆ ನಿಶಾನಿ ಏರಿಸಿ **ವಂದೇಮಾತರಂ** ಅಂದ್ಳು. ನಿಶಾನಿ ಏರಿತು ಜನಾ ಹುಯ್-ಹುಯ್‌'ಅಂತರೇಗಿತು. ನಮ್ಮ ಸಾಹೇಬರ ಟೊಪ್ಪಿಗಿ ಕಲ್ಲಿನಬಡತಕ್ಕ ತೆಳಗ ಬಿತ್ತು. ಭಯಂಕರ ಸಿಟ್ಟಾದ್ದೇ ಹುಕುಂ ಕೊಟ್ರು."

''ಯಾಕs''?

"ಗೋಳಿಬಾರಮಾಡ್ಲಿಕ್ಕೆ! 'ಹಿಂದ್ಕಸರೀರೀ ನಿಮ್ಮನಿಮ್ಮ ಮನೀಗೇ ಹೋಗ್ರೀ ಗೋಳಿಬಾರಮಾಡ್ತೀವೀ" ಕೂಡಿದಮಂದೀಅಂದ್ರು s ಹುಚ ಮಂಗ್ಯಾ!! ಇದ್ದಾಂಗ! ಪೋಲಿಸರಕೈಯಾಗಿನ ಬಂದೂಕಾನೇ ಕಸಗೋಳಿಕ್ಕೆ ನಿಂತ್ರು. ಒಂದೆರಡು ಬಂದೂಕಾ ಮಟಾಮಾಯಾದು!! 'ಢಂ ಢಂ ಢಂ' ಅಂತಮೂರ್ರುಂಡು ಹಾರಿದು !"

"ಹೆಣಮಕ್ಕಳಮ್ಯಾಲೆ ? "

"ನನಕಣ್ಣಾಗ ನೀರಿಳೀತಿದ್ದು. ಚ್ಯಾವಡೀಮ್ಯಾಲೆ ನಿಶಾನೀ ಹಿಡಕೊಂಡು ನಿಂತಿದ್ದಳ್ಲಿ್ರೀ ಆ ಅವ್ವನ ಬಗಲಾಗಿನ ಕೂಸು! ಕೂಸು ಬಿದ್ದೇ ಬಿಟ್ತು ! ಕೈಯಾಗ ಸಣ್ಣ ನಿಶಾನಿತ್ತು! ಅದನ್ನ ಬಿಟ್ಟಿದ್ದಿಲ್ಲಾ, ಸಾಗರ ಬಿದ್ದು ಕೂಸಿನ್ನs ನಾನೇ ಎತ್ತಿದೆ. ಕಸಕ್ನೇ ಕಸಕೊಂಡು ನನಗ ಅಂದ್ಳು 'ಮುಟ್ಟಬ್ಯಾಡಾ ಸರೀ' ಅಂದ್ಳು. ಹೆದರಿಕ್ಯಾತು. ಕೂಸಿನ ಹೆಣಾ ಎತ್ತಿ ಧಡಾ ಧಡಾ ತೆಳಗೆ ಇಳಮ ಬಂದ್ಳು. ಕೂಸಿನ ತೋರಸ್ತಾಳ ಮುಂದ್ಗೇ ಸರಕಾರದ ಅನ್ಯಾಯ ನೋಡ್ರೀ ಅಂತಾಳ— ರಾಯ್ರು s ಕೂಸಿನ ಹೊಟ್ಯಾಗ ಗುಂಡು ನಟ್ಟಿತ್ತು. ಏನ ಹೇಳ್ಬೇಕ್ರೀ.

" ಎಷ್ಟು ಪುಣ್ಯಾನಪಾ ಹೊಡೆದವಗ !s"

"ಏನ ಪುಣ್ಯಾರೀ! ಆ ತಾಯಿನ್ನ ನೋಡಿದರs ಮೈ 'ಜುಂ' ಅನಬೇಕು. ಕಣ್ಣಾಗನೀರರೂದನೋಡಿ ಕೆಲವ ಹೆಣಮಕ್ಕಳು ಕೂಸಿನತಾ

ಅಂದ್ರು ಅಳಬ್ಯಾಡಂತಹೇಳಿದವರ್ಗೆ ಏನನಬೇಕು.'ನಾಅಳೂದುಲ್ಲಾ'ನನ ಕೂಸಿನ ಭಾಗ್ಯನನಗಿಲ್ಲಲ್ಲಾ ಅಂತ ಕಣ್ಣಾಗ ನೀರ ಬಂದಾವ,ಅಳೂದಿಲ್ಲಾ ಬ್ಯಾನೀ ಬ್ಯಾಸರಿಕೀಯಿಂದ ಸತ್ತಿಲ್ಲಾ ನನಕೂಸು ! **ವಂದೇ ಮಾತರಂ** ಅಂತ ಅಂದsದ. ಇಂಥಾ ಕೂಸು ಸತ್ತೀ ಇಲ್ಲಾ 'ಅಂದ್ಲು' ಕೂಸಿನ್ನ ಎತ್ತಿ ಚಾವಡಿಗೇ ತೊಗೊಂಡು ಹೋದ್ಲು. ಸಿಪಾನೀ ಮಾಲೀತಗದು ಕೂಸಿನಮ್ಯಾಲೆ ಹಾಕಿದ್ರು? ನಾವೆಲ್ಲಾ. ಹೌಹಾರಿನಿಂತ್ವಿ. ಆ ಅವ್ವಾ ಏನತಾಯ್ರೀ ಆಕೀ? ಕೂಡಿದ ಮಂದ್ಗೆ ಹೇಳ್ತಾಳs ಕಲ್ಲು ಒಗೀಬ್ಯಾಡ್ರೀ ಸಿಪಾಯ್ರುಂದ್ರ s ಅವರೂ ನಮ್ಮವರೇ ಶಾಂತರಾಗ್ರೀ ಏನ ಮಾತ್ರೀ' ಅವ್ವೂ, ತನ್ನಕೂಸು ಸತ್ತsದ ಅಂದ್ರೇನೂ, ಇಂಥಾ ಮಾತುಹೇಳೂದು ಅಂದ್ರೇನು ?"

"ಅಲ್ಲಿಂದ ನೀವೇನ್ಮಾಡಿದ್ರೀ ?"

"ಏನ್ಮಾಡೂದ್ರಿ ನೋಡಕೋತ s ನಿಂತ್ವಿ ಕಲ್ಲಿನ್ಹಾಂಗ ! ಕೂಸಿನ ಮ್ಯಾಲೆ ಹೂವಿನ ರಾಸಿ ಬಿತ್ತು !ಯಾರು ಕುಂಕುಮಾ ಹಾಕ್ತಾರ! ಅರಿಷ್ಣಾ ಹಾಕ್ತಾರ! ಬುಕ್ಕಿಟ್ಟು ಗುಲಾಲೂ ಹಚ್ಚತಾರ! ಊದಿನಖಡ್ಡೀ ದೀಪಾ! ನಡೀತ್ರೀ ಊರಮುಂದಿ ಬರುದೂ ಕೂಸಿನ್ನನೋಡೂದೂ ಹೋಗೂದು.'

"ನಿಮ್ಮ ಸಾಬ್ರೂ ?"

"ಅವರ ಮಾರೀನೂ ಸಣ್ಣಾಗಿತ್ರೀ. ಆಗೇನಾರೇ ಮತ್ತ ಗೋಳೀ-ಬಾರ ಆಗಿದ್ದ್ರs ಎಲ್ಲಾರ್ದೂ ಮುಗದs ಹೋಗ್ತಿತ್ರಿ ಮೋಟರ ಮುಂದ ತೊಗೊಂಡೂ ಪಾರಾಗಿ ಬರಬೇಕಾದ್ರs ಸಾಕಸಾಕಾತು!"

"ಯಾರ್ನೂ ಅರೆಸ್ಟ ಮಾಡ್ಲಿಲ್ಲ ?"

"ಹೋತ್ರೀ ಆದೂ....ನಾಳೀ ಅಲ್ಲಿಗೆ ಹೋಗೂಹಾಂಗ ಕಾಣಸ್ತದ್ರಿ ಏನ್ಮಾಡ್ತಾರೋ ಏನೋ."

"ಆ ಊರ್ನುದ್ದೇನ್ಬಂದೇ ಇಲ್ಲs ?"

“ ಸುದ್ದೀ ಬಂದಿತ್ತಂತೇ ಆ ಊರ್ಗೇ ಪೋಲೀಸ್ಪಾರ್ಟೀ ತೊಗೊಂಡ್ನಡದ್ರು ಸಾಬ್ರು, ಮುನ್ನಾದಿನ ಹಪ್ತೇ ಲೂಟಿ ಮಾಡಿದ್ದ್ರಂತಽ! ಚಾವಡ್ಯಾಗ ಕೂತಾಗೇ ಮಂದಿ ಬಂದು ನುಗ್ಗಿ, ಹಣಾ ಎಲ್ಲಾ ಬಳ್ಕೊಂಡು ಹೋಗಿದ್ದ್ರು ಇಂಥಿಂಥವರಿದ್ರೂ, ಅಂತಽ ಪೋಲಿಸ್ಪಾಟೀಲಾ ರಿಪೋರ್ಟು ಮಾಡಿದ್ದಾ. ಅವರ್ನ ಹಿಡೀಬೇಕಂತಹೋಗೋದ್ರೊಳಗಽಕೂಸಿನ್ನಕೊಂದು ಬರಬೇಕಾಯಿತು. ”

“ಶತಕೃತ್ಯಮಾಡಿದ್ರು! ಗುಂಡ್ಹಾಕಿದವನ ವಂಶಉದ್ಧಾರವಾಗಲೀ!”

“ರಾಯ್ರಽ ಒಟ್ಟಽ ನಾಹಿಂಗತೀನ್ನ್ರೀ ಏನ್ಮಾಡಿದ್ರೂ ಮಾಡ್ಬೇಕು. ಪೋಲೀಸಾಗ್ಬಾರ್ದು. ಮಾಯಾ ಮೋಹಾ ಅನ್ನೋದೆಲ್ಲಾ ಸುಟ್ಟು ಹೋಗಿರ್ತದ, ಒಂದು ಪಾಯಖಾನೀ ಕಲ್ಲಾಗಿ, ಕಂಡವರಕಾಲ್ತುಳತಾ ತಾಳ್ಬಹುದು, ಕಲ್ಲಿನಕಿಂತಾ ಕಲ್ಲ ಎದೀ ಪೋಲೀಸಾಗ್ಬಾರ್ದು. ”

“ ಎಲ್ಲಾರೂ ನಿಮ್ಹಾಂಗೇ ಇದ್ದ್ರಽ ಬ್ರಿಟಿಷ ಸರ್ಕಾರಾ ಗುಡಚಾ ಪೀನೇ ಕಿತ್ತಿತ್ತು. ಪೋಲೀಸ್ರಿಂದೇ ರಾಜ್ಯಾಳೂದು ಅವರು....”

“ ಅಗದೀ ಖರೇರಿ ನಿಮ್ಮಾತು, ನನಗೂ ಸಾಕ್ರೀ, ನೌಕರಿ ಸಾಕಾಗೇದ್ರಿ....ಹಿರೇರ ಪುಣ್ಯಾದಿಂದ ಹೊಲಾ ಅದಅದರಾಗೇ ಡುಡಕೊಂಡು ಚಟ್ಣೀರೊಟ್ಟೀ ತಿನ್ನುದುಸುಖಾ. ”

“ ಮನೆತನದ ಚಾರಿತ್ರ್ಯಗಳು ತಲೆಎತ್ತಿದುವು. ತನಗೆ ಅಕ್ಬರ ಬಾದಶಹನೆಂದು ಹೆಸರಿರಿಸಲು, ಫಕೀರರೇ ಹೇಳಿದುದಕ್ಕೆ ತಂದೆಯವರು ಹಾಗೆ ಮಾಡಿದರೆಂದು ಹೇಳಿದರು. ವಿಜಯನಗರರದ ರಾಜರೊಡನೆ ಕಲಿತನದಿಂದ ಕಾದಿ ಗೆಲಿದದ್ದಕ್ಕೆ, ಅಲ್ಲೀ ಆದಿಲಶಾಯಿಯಿಂದ ಒಂದು ಹಳ್ಳಿಯೇ ತನ್ನ ಮನೆತನಕ್ಕೆ ಇನಾಮು ಇದ್ದಿತೆಂದೂ, ಕಾಲಾಂತರದಲ್ಲಿ ಕುಡುಕತನವೇ ಹಳ್ಳಿಯನ್ನು ನುಂಗಿತೆಂದೂ, ತನ್ನ ತಂದೆಯೂ ಸಿಪಾಯಿಯಾಗಿಯೇ ಸತ್ತನೆಂದೂ, ಅವನ ಮಗನಾದುದಕ್ಕೆ ಕರೆದು ಬಂದೂಕನ್ನು ಒಪ್ಪಿಸಿದರೆಂದೂ ಅಕ್ಬರಸಾಹೇಬರು ಹೇಳಿಕೊಂಡರು.

ಬೆಳಗಿನ ೪ ಘಂಟೆ!ಬಡಿದುದರಿಂದ ವಿಕ್ರಮನು ನಿದ್ರಿಸುವದಕ್ಕೆ ಅಕ್ಬರಸಾಹೇಬರ ಅಪ್ಪಣೆಪಡೆದ. ಅಕ್ಬರ ಸಾಹೇಬರು ತಾವೂ ಎರಡು ದಿನ ಹಾಸಿಗೆಗೆ ವೈತಟ್ಟಿಸಿಲ್ಲವೆಂದು ಹೇಳಿ ನಡೆದರು. ವಿಕ್ರಮನು ಕೂಗಿ ದುದರಿಂದ ಹೆಬ್ಬಾಗಿಲದವರೆಗೂ ಹೋದವರು ಬಂದರು. ಕರೆದ ಕಾರಣ ತಿಳಿದಿದ್ದಿತು. ನಗುತ್ತ ಬಂದುಕೊಟ್ಟು ಸಾಗಿದರು. ಅವರು ಅರಿಯದಂತೆ ಅವರ ಕಳ್ಳದನಿ 'ರಾಷ್ಟ್ರಧ್ವಜಕ್ಕೆ ಜಯ ಜಯ' ಎನ್ನುತ್ತಿದ್ದಿತು. ಸುಳಿ ಗಾಳಿಯು ಜಯ ಜಯವೆನ್ನಿಸಿತು. ಅಕ್ಬರಸಾಹೇಬರಿಗೆ ಗೊತ್ತಿದೆ ಜಯ ಜಯವೆಂದರವನ್ನು ಜೇಲಿಗೆ ಎಳೆದೊಯ್ಯುವರೆಂಬುದು ಜಯವೆಂದವರನ್ನು ತಾವೆ ಸೆರೆಮನೆಗೆ ತಂದು ನಿಲ್ಲಿಸಿಲ್ಲವೇ? ಕಚೇರಿಯಲ್ಲಿ ಅದೂ ಅಕ್ಬರ ಸಾಹೇಬರ ಕೊರಲಿನಲ್ಲಿ, ಪೋಲೀಸರ ಸಾಕ್ಷಿ ಜಯನಿನಾದವೇ! ಪ್ರಕೃ-ತಿಯು ಪ್ರೇರೇಪಿಸುತ್ತಲಿದ್ದಾಳೆ ರಾಷ್ಟ್ರಧ್ವಜದ ಜಯಘೋಷವು ಭಾರತೀಯರ ನರನಾಡಿಗಳಲ್ಲಿ ಜಾಗ್ರತಸ್ವಪ್ನ ಸುಷುಪ್ತಾವಸ್ಥೆಗಳಲ್ಲಿಯೂನಿನದಿಸಲೀ ಎಂದು ಸಂದೇಶ ಬೀರಿದ್ದಾಳೆ. ಚಳಿ-ಮಳೆಗಾಳಿಗಳೂ ಸ್ವಾತಂತ್ರ್ಯ ಸ್ಫೂರ್ತಿಯನ್ನು ತಿಳಿಯದಲೇ, ಪ್ರಕೃತಿದೇವಿಯ ಆಜ್ಞೆಯಂತೆ ನೀಡುತ್ತಲಿರುವಳು. ಗಾಳಿಯೇ ಗಡ್ಡದವರ ಮಿದುಳನ್ನು ಮೀಟಿ ಜಯನಿನಾದಗೈಸಿತು.

ಕೊಠಡಿಯಲ್ಲಿ 'ಭಂವ್‌ಭಂವ್' ಎಂಬ ಸದ್ದು ಎಲ್ಲಿಯದು? ಕಿವಿಯಲ್ಲಿಯೇ ಮುಸುಕಿನಲ್ಲಿಯೇ ಸ್ವರಜನಿಸಿದಯೇ? ವಿಕ್ರಮನು ಎಚ್ಚ-ತ್ತುದು ಸದ್ದಿಗಾಗಿಎದ್ದು ಕೇಳಿದ ಸ್ವರವನ್ನು ನೋಡಿದ ಕಚೇರಿಯ ಎದುರು ನೆರೆದ ಹುಚ್ಚು ಜನವನ್ನು. ಮುಗಿಲಿನಲ್ಲಿಯೇ ಕತ್ತೆತ್ತಿ ಕುತೂಹಲದಿಂದ ನೋಡುತ್ತಲಿದ್ದರು. ಅಲ್ಲಿ- ಅದೋ ಅಲ್ಲಿ, ಬರುತ್ತಿವೆ!! ಎಂದು ತೋರುತ್ತಲಿದ್ದರು. ಹಾಂ! ಕಂಡಿತು ಎಂದರು. ವಾತಾವರಣದಲ್ಲಿ ಸ್ವರವನ್ನು ಉದ್ಭವಿಸಿ, ಜನದ ದೃಷ್ಟಿಯನ್ನೇ ತನ್ನೆಡೆಗೆ ಎಳೆದುಕೊಂಡದ್ದು ವಿಮಾನ! ಸಾಲಾಗಿ ಸಾಲ್ಕಾರು ವಿಮಾನುಗಳು ಮುಗಿಲಲ್ಲಿ ತೇಲುತ್ತಿವೆ. ವಿಕ್ರಮನು ನೋಡಲು ಅಪೇಕ್ಷಿಸಲಿಲ್ಲ. ಅಪೇಕ್ಷಿಸಿದರೂ ಹೊರಗೆ ಬರುವುದು ಸಾಧ್ಯವಿರಲಿಲ್ಲ. ಮಾಮ್ಲೇದಾರರು ಮೊದಲಾಗಿ ಕಚೇರಿಯ ನೌಕರರೆಲ್ಲ ಅಚ್ಚರಿಯಿಂದ ನಿರುಕಿಸುವದನ್ನು ಕಂಡು, ವಿಕ್ರಮನು ಬೆರಗಾದ. ಮರುಗಿದ.

ವಿಜ್ಞಾನವು ಲೋಕವನ್ನೇ ಬೆರಗುಗೊಳಿಸುತ್ತಲಿದೆ. ವಿಜ್ಞಾನವು ಪ್ರಗತಿಯಿಂದ ಲೋಕವನ್ನೇ ಮೆರಗುಗೊಳಿಸುತ್ತಲಿದೆ. ವಿಜ್ಞಾನವು ಅನಂತಾನಂತ ವೈಚಿತ್ರ್ಯ ರೂಪಗಳನ್ನು ತಳೆದುತೋರುತ್ತಲಿದೆ. ವಿಜ್ಞಾನದ ವಿರಾಟಸ್ವರೂಪವು ದೃಗ್ಗೋಚರವಾಗುತ್ತಲಿದೆ ಪ್ರಗತಿಪಥದ ಮಾನವನಿಗೆ. ಪ್ರಪಂಚದ ಪ್ರಳಯ ಪ್ರಫುಲ್ಲತೆಗಳು ವಿಜ್ಞಾನದ ವಿರಾಟರೂಪದ ಕೈವಾರಿಯಾಗಿದೆ. ತನ್ನ ರಾಷ್ಟ್ರವು ಇಂದು ವಿಮಾನವನ್ನು ನೋಡಿ ಬೆರಗಾಗಬೇಕಾದುದೇ ಅವನ ದುಃಖಕ್ಕೆ ಕಾರಣ ! ತನ್ನವರು. ಈ ದಿನದವರೆಗೂ ಬಾಯ್ಬಿಟ್ಟು ವಿಮಾನ ಬಂದರೆ ನೋಡಬೇಕಾಗಿದೆ. ಅಲ್ಲ! ಎನ್ನುವನು. ವಿಮಾನ ಉತ್ಪಾದನೆಯು ಮರ್ಮವೇ ತನ್ನವರದೆಂದ. ಕಾಡುಸ್ಥಿತಿಯಲ್ಲಿರುವದರ ಕಾರಣವೇ ತಮ್ಮ ಪಾರತಂತ್ರ್ಯ ! ಸ್ವತಂತ್ರ ರಾಷ್ಟ್ರವಾಗಿದ್ದರೆ ತಾನೂ ವಿಶ್ವಮೇಧದಲ್ಲಿ ಯೋಧನಾಗಿ, ವೈಮಾನಿಕನಾಗಿ, ವಿಮಾನದಲ್ಲಿ ಹಾರಿ....ತನ್ನ ನಾಡಿಗರಿಗೆ ಇಂದು ಲಾಕಪ್ಪಿನಲ್ಲಿ, ಕುಳ್ಳಿರುವ ಕೆಡುಗಾಲ ತನಗಿದೆ ಎಂಬುದನ್ನು ಭಾವಿಸಿ ಉಸಿರ್ಗರೆದು ಹಾಸಿಗೆಗೆ ಸರಿದ.

ಹಗಲು ಹತ್ತರವರೆಗೆ ನಿದ್ರಿಸಿದುದಕ್ಕೆ ತಾನೇ ಅಚ್ಚರಿಗೊಂಡ ನಿತ್ಯನಿಯಮಗಳು ಸಿಪಾಯಿಗಳ ನೇತೃತ್ವದಲ್ಲಿ ಸಾಂಗವಾದವು ಸಿಪಾಯಿಯು ವಿಕ್ರಮನ ಬಳಿಬಂದು ಅಡಿಕೆ ಬೇಡಿದ. ವಿಕ್ರಮಕೊಡದಿದ್ದರೆ....

" ನಿಂಪಾಳೀ ಬಂದದ್ರ ಕಾಣ್ತದ " ಸಿಪಾಯಿ ಎಂದ.

" ಯಾತರಪಾಳೀ ? "

" ಜಿಲ್ಹಾದ ಜೇಲಿಗೆ ಹೋಗುವದು "

" ಎಂದ ? "

" ಇವತ್ತೇ "

" ಯಾರ್ಹೇಳಿದ್ರು "

" ಶಿರಸ್ತಾರ ಸಾಬ್ರು ಹುಕುಂ ಕೊಟ್ಟಾರ್ರಿ "

" ಯಾಕ ? "

" ಅದು ಎನ್ನೈತ್ರ್ಯೋ ಏನೋರಿ ಈಗಿನ ಗಾಡಿಗೆ...."

" ನಾ ಒಬ್ನೇನೋ ಉಳಿದ ಕೈದೀ....?? "

" ನೀವುಒಬ್ಬ್ರs ರೀ ! "

" ನನಗೇನು ? ಎಲ್ಲಿಬೇಕು ಅಲ್ಲಿ ಇಡ್ಲಿ ? "

" ನಿಮಗೇನು ಬಿಡ್ರಿ.... ರಾಯ್ರs. ಖುಷೀ...."

" ಮುಟ್ಸಸಲೇ ಇಲ್ಲ........ನೋಡ್ರೀ...."

' ಕೊಡಸ್ತೀ...."

' ನಾನೇ ಬರ್‍ತ್ತಿನ್ರೀ ? "

' ಎಲ್ಲಿಗೆ ? '

' ಜಿಲ್ಹಾದ ಜೇಲಿನ್ಯಾಗ ಬಿಟ್ಟುಬರಾಕ "

' ಒಬ್ಬ್ನೇ........' ?

' ಜಮಾದಾರಸಾಬ್ರು.... ನಾನು'

" ಆಗ್ಲಿ .... "

" ಹಾದ್ಯಾಗs ಚಾ ಪಳಾರಾ .... ಮನ್ಯಾಗಹೇಳಿ ಕಳಿಸೀ-ಹತ್ತೆಂಟ್ರುಪಾಯಿ ತರಸ್ರೀ....

" ತರಸೋಣು ? .... "

" ಇನ್ನ ವ್ಯಾಳ್ಯಾ ಎಲ್ಲೈತ್ರಿ- ರೊಟ್ಟೀ ತಿಂದದ್ದೇ ಹಾದೀ ಹಿಡಿಯೂದs" ಹೇಳುತ್ತ ನಡೆದ ಸೀಪಾಯಿ.

ವಿಕ್ರಮನ ತಳಹೊಟ್ಟೆ ನೋಯ ತೊಡಗಿತು ಅಲ್ಲಿ ಎಂತೆಂತಹ ಕಷ್ಟಗಳನ್ನು ಎದುರಿಸಬೇಕಾಗುವುದೋ ಎಂದು ಬೆದರಿದ. ಅಲ್ಲಿಯ ಸೀಪಾಯಿಗಳು, ಅಲ್ಲಿಯ ಊಟ, ಅಲ್ಲಿಯ ಜನ ಎಲ್ಲವನ್ನೂ ಕಲ್ಪಿಸಿದ ಎದೆಯು ಬಡಿದುಕೊಂಡಿತು. ಅಯ್ಯನವರ ಎರಡು ರೊಟ್ಟಿಗಳು ಕೈ ಸೇರಿದುವು. ಭೀಮನಿಗೆ ದಾನ ಮಾಡಿದ, ತನ್ನ ಹೊಟ್ಟೆ ಹಸಿದಿಲ್ಲವೆಂದು ಹೇಳಿ. ಸೀಪಾಯಿಗಳು ಲಾಕಪ್ಪಿನಿಂದ ಮುಕ್ತ ಮಾಡಿದರು. ಹಾಸಿಗೆ ಸುರುಳಿಯನ್ನು ಹೊತ್ತಿದ್ದ. ಟೊಂಕಕ್ಕೆ ಹಗ್ಗವನ್ನು ಬಿಗಿದರು. ಕೈಗಳಿಗೆ

ಬೇಡಿಯನ್ನು ಇಡಿಸಿದರು. ಶಿರಸ್ತಾರರಿಗೆ ಶರಣೆಂದರು. ಪರಿಚಿತ ಕೈದಿಗಳು, ಸೀಪಾಯೀಗಳು ವಿಕ್ರಮನಿಗೆ ವಂದಿಸಿದರು. ಅವನಿರುವದರಿಂದ ಲಾಕಪ್ಪು ಮನೆಯಾಗಿದ್ದಿತೆಂದು, ಕಷ್ಟಗಳನ್ನು ಮರೆತಿದ್ದರೆಂದು ಮುಖಸ್ತುತಿ ಮಾಡಿದರು. ಕಚೇರಿಯ ಹೆಬ್ಬಾಗಿಲು ದಾಟಿದರು.

ವಿಕ್ರಮನ ಮನದಲ್ಲಿ ದ್ವಂದ್ವಯುದ್ಧವೇ ಸಾಗಿತ್ತು. ಕೈಗೆ ಬೇಡಿ ತೊಡಕಿಸಿದಾಗ ಬೇಡವೆಂದು ಕಾಲು ಹಿಡಿಯುವದಕ್ಕೂ ಸಿದ್ಧನಾಗಿದ್ದ ಮನಸ್ಸಿಂದ. ಕೊಲೆಗಾರನಲ್ಲ ತುಡುಗನಲ್ಲಾ ಜನ ಸ್ತುತಿಸಬಹುದು. ತನ್ನಂತಹನಿಗೆ ಬೇಡಿಗಳು ಬಂದುದನ್ನು ನೋಡಿ ಮರುಗಬಹುದು ಎಂದು ಸಮಾಧಾನ ತಳೆದ. ಮನದಲ್ಲಿ ಸ್ವಾಸ್ಥ್ಯವಿರಲಿಲ್ಲ. ಕ್ಷೌರಕಾಣದ ಮುಖ, ಜ್ವರದಿಂದ ಸೊರಗಿದ ಮೈ. ಚಿಂತೆಯ ನಿಸ್ತೇಜ ಕಣ್ಣುಗಳು. ಟೊಂಕದ ಹಗ್ಗ ಹಿಡಿದ ಸೀಪಾಯಿ ಹಿಂದೆ. ವಿಕ್ರಮನ ಮುಂದೆ ಹವಾಲದಾರರು ಬಂದೂಕನ್ನು ಎತ್ತಿ ನಡೆದಿದ್ದರು. ಬೀದಿಯ ಜನ ವಿಕ್ರಮನನ್ನು ನೋಡಿ ನೋಡದವರಿಗೆ ಬಟ್ಟುಮಾಡಿ ತೋರುತ್ತಲಿದ್ದರು. ನಿರ್ಭಯ ವೃತ್ತಿಯವರು ವಿಕ್ರಮನನ್ನು ನಿಲ್ಲಿಸಿ ಕ್ಷೇಮದ ಮಾತನಾಡಿ ಸೀಪಾಯಿಗಳಿಗೆ ಬೀಡಿಯ ಪ್ರಸ್ತವನ್ನು ನೆರವೇರಿಸಿ ನಡೆದರು. ಕಂಡರೂ ಕಾಣದಂತೆ ಸಾಗಿದರು ಕೆಲವರು. ಸೀಪಾಯಿಗಳ ಹೆದರಿಕೆಯೋ ವಿಕ್ರಮನೊಡನೆ ಮಾತನಾಡಿದರೆ ತಮ್ಮನ್ನು ಅವನೊಡನೆ ಹಿಡಿದು ಒಯ್ಯುವರೆಂಬ ಭಯವೋ ನಡೆದಿದ್ದರು.

ಹವಾಲದಾರರ ಕಣ್ಸನ್ನೆಗೈದುದರ ಕಾರಣ ತಿಳಿಯದಿದ್ದರೂ ನೋಡಿದ. ಸೀಪಾಯಿಯೂ ಮನದ ಇಂಗಿತವನ್ನು ತಿಳಿದ. ಸಿಪಾಯಿಯು ಸೂಚನೆ ನೀಡಿದಸನ್ನೆಯಿಂದ. ಹವಾಲದಾರರು ಸಂಕೇತದಂತೆ ಹಿಂದುಳಿದರು. ವಿಕ್ರಮಪಶುವಿನ ಟೊಂಕದ ಹಗ್ಗ ಎಳೆಯುತ್ತ, ಜಗ್ಗುತ್ತ ಸೀಪಾಯಿ ಸಾಗಿದ್ದ. ಹುಡುಗರ ಗುಂಪು ಬೆಂಬತ್ತಿತ್ತು. ವಿಕ್ರಮನು ನರಕ ನಂಬರ ಎರಡರ ವಿಚಾರದಲ್ಲಿ ಮಗ್ನನೇ ಆಗಿದ್ದ.

" ರಾಯ್ರು s ...."

" ಏನು ? ''

'' ಹವಾಲದಾರ ಸಾಹೇಬ್ರಿಗೆ ಹೇಳೋಡ್ರೀ ? ''

'' ಏನಂತ ? ''

'' ಬೇಡೀ ತಗೀ ಅಂತ ''

'' ಇರ್ಲಿ ಬಿಡು, ನನಗೇನು ಮಾಡ್ತಾವ ? ''

'' ಅವರಿಗೇ ಮುಟ್ಟೋದು ಮುಟ್ಸಿದ್ರಾತು. ''

'' ತಗಸ್ಬಿಡ್ರೀ ನಿಮ್ಮಂದಿ ಮಕ್ಳು ಇರ್ತಾರ ಛಂದಲ್ಲ್ರೀ ''

'' ಬೇಡಿದ್ದ್ರs ನನಗೇನು ಅಪ್ಮಾನಾಗುವದಿಲ್ಲ. ''

'' ಕೊಡ್ತಿವಿ ಅಂತಾ ಹೇಳಿ ಬಿಡ್ರಿ ? ಛಂದಲ್ಲ್ರೀ "

'' ಸ್ಟೇಶನ್ನದಾಗ ಮಂದಿ ಮಕ್ಕಳು ಪಾಡಲ್ಲ್ರೀ "

" ಏನ್ರೀ ನಿಮ್ಮಂತವರು ಹೀಂಗ ಮಾಡಿದ್ರs ಕೊಟ್ರ....
ಈಟು ಕುಡುದು ಬಂದ್ಬಿಡ್ತೀವಿ. "

"ಈ ಬೇಡಿ ಅಂಜಿಕಿ ನನಗಿಲ್ಲೋಡು. ಬೇಡಿ ಅಂದ್ರ s ಏನೆಂತ ತಿಳಿದಿದೀ ?

ಹಿಂದೂ ಹೆಣಮಕ್ಳ ಹಣೀಮ್ಯಾಗಿನ ಕುಂಕ್ಮದ್ಹಾಂಗ , ರಾಜ ಕೈದಿಗೆ. "

" ಹುಂ. ಅಂದ್ಬಿಡ್ರೀ ರಾಯ್ರು s "

"ಹಂಗೇ ಬೇಡ್ರಿ ಕೊಡ್ತೀನಿ. ಬೇಡಿ ಇರ್ಲಿ ಬೇಡೀ ತಗೀರಿ ಅಂತಾನಾ ಏನು ಬೇಡಿಕೊಂಬುದುಲ್ಲಾ. ಬೇಡಿದಾಗ s ಊಟಾಬಟ್ಟೇ ಸಿಕ್ತಾವ ಬೇಡಿ ಸಿಗ್ತಾವ s? ಕೈಗೆ ಭೂಷಣ ಅಂದ್ರ ಬೇಡೀನೇ ಈ ದಿವಸಕ್ಕ. ನಿಮಗೇನು ಗೊತ್ತು, ಹವಾಲದಾರರು ಓಡಿ ಬಂದು ಬೆರೆತರು. ನಿಲ್ಲಿಸಿ ಬೇಡಿಯನ್ನು ತೆಗೆದು ಮಗ್ಗಲು ಚೀಲದಲ್ಲಿ ಇರಿಸಿದರು. ಬೇಡವೆನ್ನುತ್ತ ತೆಗೆಯಲು ಕೈಗಳನ್ನು ಮುಂದು ಮಾಡಿದ. ತೆಗೆಯುವದೇ ವಿಕ್ರಮನಿಗೆ ಬೇಕಾಗಿದ್ದಿತು. ಇವರಿಗೆ ಹಣವನ್ನು ಯಾರಿಂದ ಕೊಡಿಸಲೀ ಎಂಬಚಿಂತೆಯೂ ಮೂಡಿತು

ಕುಡಿಯಲು ದೊರೆಯದೆಂದ. ಉತ್ಸಾಹದಿಂದ ನಡೆದರು. ಲಗುಬಗೆಯಿಂದ ಅಪರಾಧಿಗಳು ತಾವಲ್ಲವೆಂದರು. ಸಬ್ಬ ಇನಸ್ಪೆಕ್ಟರರು ಬೇಡೀ ಹಾಕಿಯೇ ಕರೆದೊಯ್ಯಲು ತಿಳಿಸಿದುದನ್ನು ನಡೆದಂತೆಯೇ ಕೇಳಿಸಿದರು. ತಾವು ಎಂದೂ ಯಾರಿಗೂ ಕೀಳು ರೀತಿಯಿಂದ ನಡಿಸಿಕೊಂಡಿಲ್ಲವೆಂದು ಹೇಳಿಕೊಂಡರು 'ಖುಶಿ' ಮಾತ್ರ ಕೊಟ್ಟೀ ಕೊಡುವರೆಂಬುದನ್ನು ಹೇಳಲು ಮರೆಯಲೇ ಇಲ್ಲ. ಖುಶಿಯೇ ಪ್ರಧಾನ ಪಟ್ಟ ಪಡೆದಿದ್ದಿತು ಮಾತಿನಲ್ಲಿ.

ಸ್ವಯಂಸೇವಕರ ಅವಶ್ಯಕತೆ ತೋರಲೇ ಇಲ್ಲ. ಸ್ಟೇಶನದ ಕಿಕ್ಕಿರಿದ ಜನಸಮೂಹವು ಸರಿದು, ದಾರಿ ಕೊಟ್ಟಿತು. ವಿಕ್ರಮನು ಮುಖಂಡನೆಂದಲ್ಲ ಅವರು ಸರಿದುದು. ದುರುಳರ ಕಂಡು ದೂರಿರಬೇಕೆಂಬುದನ್ನು ಕಲಿತಿರಲೇಬೇಕು. ಸಿಪಾಯಿಗಳು ಜನತೆಯ ಕಣ್ಣಿಗೆ, ಹಾಗೆ ರೂಪುಗೊಂಡಿದ್ದಾರೆ. ಜನತೆಯ ಸೇವಕರೇ ತಾವೆಂಬುದನ್ನು ಮರೆತು ಶೋಷಣೆಗೈದುದರಿಂದ ದುರುಳರೆಂದೇ ನಾಮಾಂಕಿತರಾಗಿರುವರು. ಸಿಪಾಯಿಗಳು ಕಂಡಲ್ಲಿ, ಅನರ್ಥಒದಗಿ, ಹಣಸುಲಿಯುವರು ಎಂಬ ಸೊಲ್ಲು ಇದ್ದುದೇ! ಅವರನ್ನು ಮಾತನಾಡಿಸುವದು ಪಾಪವೆನ್ನುವದರ ವರೆಗೂ ಅವರ ಕೀಳ್ನಡತೆಗಳು ಜನತೆಯ ಮನದಲ್ಲಿ ಬೇರೂರಿವೆ. ಬ್ರಾಹ್ಮಣನೆಂದರೆ ಸತ್‌ಶೀಲ, ಸದಾಚಾರ ನಿರತ ಬ್ರಹ್ಮಜ್ಞಾನಿ, ಲೋಕಹಿತ ಕರ್ತೃ. **ಸರ್ವೇಜನಾಃಸ್ಸುಖಿನೋಭವಂತುಸಮಸ್ತಸನ್ಮಂಗಲಾನಿಭವಂತು**ಎಂಬುದೇ ಜೀವಿತದ ಆದ್ಯ ಮಂತ್ರ ಧ್ಯೇಯ ಅಲ್ಲವೇ ? **ಈಗಿನ** ಬ್ರಾಹ್ಮಣ, ಬ್ರಿಟಿಷರ ಶೀಪಾಯಿ, ಒಂದೇಟಂಕಶಾಲೆಯ ನಾಣ್ಯಗಳು. ಕಂಡವರು ಕೈಮುಗಿದೇ ದೂರಿರುವರು. ಮರ್ಯ್ಯಾದೆ ನೀಡುವುದಕ್ಕಲ್ಲ, ನಮಸ್ಕಾರ. ಮುಟ್ಟಿದರೆ ಕೆಟ್ಟೇತೆಂದು. ವಿಕ್ರಮನಿಗೂ ಮೊದಲು ತಿಳಿದಿರಲೇಬೇಕು. ವಿಕ್ರಮನ ಹಿತದವರು ಸ್ವಾಗತ ಕೋರಿದರು. ಗೆಳೆಯರು, ಗುರುಗಳು, ಹಿರಿಯರು **ಸುಸ್ವಾಗತಂ** ಎಂದರು. ಹಣ್ಣುಗಳನ್ನು ಬೇನೆಯವನೆಂದು ಒಪ್ಪಿಸಿದರು. ಕುಳಿತಲ್ಲಿ ಚಹವೂ ಬಂದಿತು. ಬೇಡವೆಂದರೂ, ಸಾಕೆಂದರೂ ಆಗ್ರಹ. ಹವಾಲದಾರರು ಆಸ್ಪದ ಕೊಟ್ಟುದುದರ ಕಾರಣವು,

ಗೆಳೆಯನು ವಿಕ್ರಮನ ಕಿವಿಯಲ್ಲಿ ಹಾಕದಿದ್ದರೆ, ಗೂಢವಾಗಿಯೇ ಇರುತ್ತಿದ್ದಿತು. ಚಿಂತೆ ದೂರವಾಯಿತು ಎಂದ. ಜೇಲಿನಲ್ಲಿ ಅನೇಕ ನಾಟಕ ಬರೆಯಲು ವಿನಂತಿಗಳನ್ನು ಇರಿಸಿದರು. ಜೇಲಿನ ವಿಷಯವನ್ನೇ ಪ್ರಾಧಾನ್ಯವಾದ ಕಾದಂಬರಿ ಬರೆಯಲು ಒಬ್ಬ ಕೇಳಿದ. ಕುಮಾರ ವ್ಯಾಸನ ಸಂಪುಟಗಳನ್ನೇ ಒಬ್ಬ ಕೊಟ್ಟ. ಗೀತೆಯೂ ಕೈಚೀಲದಲ್ಲಿ ಹೊಕ್ಕಿತು. ವಿಕ್ರಮನ ಪ್ರಿಯ ಸಾಹಿತಿಗಳಾದ ಅ. ನ. ಕೃ. ರವರ ಕಾದಂಬರಿಗಳೂ ಒದಗಿದವು. ಗುರು ಹಿರಿಯರು ಶುಭಾಶೀರ್ವಾದ ಕೋರಿದರು. ಗೆಳೆಯರು ನಮಸ್ತೆಕೊಟ್ಟರು, ತೆಗೆದುಕೊಂಡರು. ಗಾಡೀಬಂದಿತು. ಹೊರಟಿತು. ಪ್ರವಾಸಿಯಂತೆ ಕುಳಿತಿದ್ದ, ಕೈದಿಯಂತೆ ಅಲ್ಲ. ವಿಕ್ರಮನ ಬದಿಯಲ್ಲಿಯೇ ಕುಳಿತವನೊಬ್ಬ ಕೇಳಿದ.

"ಯಾಕ್ರೀ ಸಾಹಿತಿಗಳ ಎಲ್ಲಿಗೆ ? "

"ಪುಣ್ಯಭೂಮಿಗೆ "

"ಅಂಪ್ರೇಸ್ರೀ ಸಾಹಿತ್ಯದ ಭಾಷಾದ"

"ಭಾವನಾದಾಗ ಹೇಳಬ್ಯಾಡ್ರಿ ನಮ್ಮಂಥಾ ಮಂದಿಗೆ ತಿಳಿಯೂ ಹಾಂಗ.... ...."

"ಜೇಲಿಗೆ "

"ಹೀಂಗs—ತಿಳೀತಬಿಡ್ರಿ "

ಪೋಲಿಸರನ್ನು ನೋಡಿ ಆಚೆಗೆ ಹೊರಳಿದ. ಪೋಲಿಸರು ಬಂಧಿತರಾಗಿದ್ದರು ಪೇವಿಯ ಮಹಿಮೆಯಿಂದ, ವಿಕ್ರಮನನ್ನು ಕಂಡು "ಪುಣ್ಯಭೂಮಿ ಬರೋಬ್ಬರ ಪುಣ್ಯ ಭೂಮಿನ! " ಎಂದು ಉದ್ಗಾರವನ್ನು ಹೃದಯಾಂತರಾಳದಿಂದ ಹೊರಡಿಸಿದ ಪ್ರವಾಸಿ' ಗಾಡಿಸಾಗುದ್ದಿತುವೇಗವಾಗಿ.

## ಪಕಡೋ-ಥಾಲೀಪಾಟ !!

" ರಾಯ್ರುಽ .... .... "

" ಏನು ? "

" ಅಲ್ಲಿ ಕಾಣ್ತತಸೋಡ್ರಿ, ಅದಽ ' ಡಿಸ್ಟ್ರಿಕ್ಟ ' ಜೇಲು. ಒಳಗ ಹೊಕ್ಕ್ಯಾಂತ್ರಿ, ಜಗತ್ನ್ಯಾಗ ಏನ್ನಡದೈತೀ ಅನ್ನೋದು ತಿಳ್ಯಾಕ ಸಾದ್ಯಾನೇ ಇಲ್ಲ. "

" ನೀ .... ನೋಡೀ ಏನು ? "

" ನೋಡೀನ್ರಿ. ಈಗಽ ಜೇಲಂತ ಕರೂತಾರ್ರಿ. ಅಲ್ಲೀ ಆದಿಲ ಶಾನ್ಕಾಲಕ್ಕಽ ಫಕೀರ್ಗೆ, ಸಾಧು-ಸಂತ್ರೂ ಇಳಕೊಳ್ಳಾಕ, ಕಟ್ಸಿದ್ನಂತ್ರಿ.

ಬಾಳ ಮಜಬೂತೈತ್ರಿ. ಸುತ್ತ s ರ ಕ್ವಾಟೇಗ್ವಾಡಿ, ನಡವ ಜೇಲು ಮಾಡ್ಯಾರ್ರಿ. ”

“ನೀ ಒಂದೇಸರ್ತಿ ನೋಡಿ ಬಂದಿದಿ. ನಾ ಅಲ್ಲೇ ಇದ್ದು ನೋಡ್ತಿನಿ.”

“ ಏನ್ಸುಕಾ ಐತ್ರೀ ಎಪ್ಪಾ........”

ಡಿಸ್ಟ್ರಿಕ್ಟ ಜೇಲಿನ ಹೆಬ್ಬಾಗಿಲಲ್ಲಿ ನಿಂತರು. ಕರೆತಂದ ಸೀಪಾಯಿ ಗಳು, ಕೈದಿ ಬಂದುದನ್ನು ತಿಳುಹಿಸುವ ಕಾಗದ ಕಳುಹಿದರು. ಒಳ ಹೊಕ್ಕರು. ವಿಕ್ರಮನನ್ನು ಒಪ್ಪಿಸಿ, ಸೀಪಾಯಿಗಳು ತೆರಳಿದರು. ನಿಯ ಮದಂತೆ ‘ತಪಾಸಣೆ’ ನೆರವೇರಿತು. ಹಳದಿ ಟೊಪ್ಪಿಗೆಯವನ ವಶಕ್ಕೆ ವಿಕ್ರಮನನ್ನು ಕೊಟ್ಟರು. ಅವನು ಎಳೆದ ವಿಕ್ರಮನನ್ನು. ನಡುವೆ ‘ನಿಲ್ಲು’ ಎಂದು ಆಜ್ಞಾಪಿಸಿದ. ವಿಕ್ರಮನು ತನ್ನ ನಲ್ಲೆ ಎಂದು ಭಾವಿಸಿದ್ದನೇನೋ? ಆಲಿಂಗಿಸಿದ. ವಿಕ್ರಮನು ಕೋಪಗೊಂಡ. ಆದರೇನು? ಗಲ್ಲ ಚಿವುಟಿದ ಪಿವಳಾ ಟೋಪಿ! ವಿಕ್ರಮನು ದಿಗಿಲುಗೊಂಡ! ‘ಯಾರಿವನು ? ’

ಇಪ್ಪತ್ತು ಮೆಟ್ಟಲು ಏರುವುದರಲ್ಲಿ ‘ಪಿವಳಾ’ನ ಚೇಷ್ಟೆ ಬಲಿಯಿತು. ವಿಕ್ರಮನು ಆರ್ಭಟಿಸಿದ. ‘ಅಂಡರಟ್ರಾಯಿಲ್’ ಎಂದು ‘ಪಿವಳಾ’ ಕೂಗಿದ. ಬೇರೊಂದು ಬಾಗಿಲು ತೆರೆಯಿತು. ನಡೆದರು ಮುಂದಕ್ಕೆ. ವಿಕ್ರಮನು ಅಚ್ಚರಿಯಾಗಿ ನೋಡುತ್ತಲಿದ್ದ. ಸಾಲಾಗಿ ಕರಿಟೊಪ್ಪಿಗೆಯ ಕೈದಿಗಳು, ಗುದ್ದಲಿ ಸಲಿಕೆಗಳನ್ನು ಮುಂದಿರಿಸಿ ಕುಳಿತುದನ್ನು ಕಂಡ. ಅನೇಕ ಕೈದಿ ಗಳು ನಿಂತು ಹೊಡೆತ ತಿನ್ನುವುದನ್ನು ಕಂಡ. ‘ಪಿವಳಾ’ ಜೇಲ ಜಮಾ ದಾರರೆದುರು ನಿಲ್ಲಿಸಿದ ವಿಕ್ರಮನನ್ನು. ‘ನಂಬರ ಪಾಚ’ ಜಮಾದಾರರು ಘೋಷಿಸಿದರು. ಐದನೆಯ ನಂಬರಿನ ಕೊಠಡಿಯಲ್ಲಿ ತುರುಕಿದರು. ‘ಬರಬೇಕು. ಸ್ವಾಗತಂ, ಸುಸ್ವಾಗತಂ’ ಎಂದು ಕೊಠಡಿಯಲ್ಲಿ ಕರೆದರು. ಯಾರಿರಬಹುದು ? ಪರಿಚಿತರೇ ಸ್ವಾಗತಕೋರಿರಬೇಕು. ಅವರಿವರ ಮುಖ ಕಂಡು ಪರಿಕಿಸುವುದರಲ್ಲಿ ಕೂಗಿದವರೇ ಮುಂಬಂದು ಕೈಕುಲು ಕಿದರು.

“ **ನಮಸ್ಕಾರ - ನಮಸ್ಕಾರ** ” **ವಿಕ್ರಮನೆಂದ.**

" ಕ್ಷೇಮವೇ ? " ಕೈಕುಲುಕಿದವ ನುಡಿದ.

" ಕ್ಷೇಮ. ತಾವೂ........"

" ಕ್ಷೇಮವಾಗಿಯೇ ಇದ್ದೇವೆ. ಇದು ನೋಡಿ, ಬಾಗಿಲದ ಬದಿಯಲ್ಲಿ ನರಕ, ಜೇನು ಹುಟ್ಟೋದು ಭಾವನೆ ಆದೀತು. ಅಲ್ಲಾ - 'ತಗಣಿ ಹುಟ್ಟುಗಳವು ಮೇಲೆ! ರಾತ್ರಿ ತಗಣಿಗಳ ವೃಷ್ಟಿ! ವಿಕ್ರಮರಾವ, ಮಹಾದಾನಿಗಳು ಇಲ್ಲಿಯ ಕೈದಿಗಳು! ಪ್ರತಿಕ್ಷಣಕ್ಕೂ ರಕ್ತದಾನ ಮಾಡುತ್ತಿದ್ದೇವೆ. ಚಿಕ್ಕಾಡುಗಳಿಗೆ, ಸೊಳ್ಳೆಗಳಿಗೆ ಹಬ್ಬದೂಟ ಇಲ್ಲಿ ಕ್ಷೇಮವಲ್ಲದೇ ಮತ್ತೇನು ? "

" ಲ್ಯಾಕಪ್ಪಿನ ನರಕಕ್ಕಿಂತ ಇದು..."

" ನಿಮ್ಮೂರಾಗ್ರೇನ್ರಿ ಹುಚ್ಚಪ್ಪಣ್ಣಾ ? " ಕುಳಿತವನೊಬ್ಬ ಪ್ರಶ್ನಿಸಿದ. ಅಹುದಾದ, ಹುಚ್ಚಪ್ಪಣ್ಣನವರು ಉತ್ತರವಿತ್ತರು. ವಿಕ್ರಮನಿಗೆ ತಮ್ಮೂರಿನ ದಿಯಸ್ಥನ ಪರಿಚಯ ಮಾಡಿಸಿದರು. ಹುಚ್ಚಪ್ಪಣ್ಣನವರು ಕೈದಿಗಳಿಗೆ ಪ್ರಿಯರಾಗಿದ್ದರು. ಅವರ ಹೇಳಿಕೆ ಆದುದೇ ತಡ, ವಿಕ್ರಮನ ಹಾಸಿಗೆ ಹಾಸಿ, ಸೇವಕರಂತೆ ಕುಳಿತರು. ಹುಚ್ಚಪ್ಪಣ್ಣನವರ ನುಡಿಯೇ ನಯವಾದುದು.

" ಯಾಕ್ಹಿಡಗಾರ್ರಿ ಎಪ್ಪ ನಿಮ್ಮನ್ನ?" ಕೈದಿ ಕೇಳಿದ. ಮುಂದಾಗಿ ಹುಚ್ಚಪ್ಪನವರೇ ಉತ್ತರವಿತ್ತರು.

" ನಮ್ಮ ಗುರುಗೋಳಪಾ ಇವರೂ...."

" ಹಿಂಗ್ರಿ, ಪಾದಾಕ್ಕಿತ್ರಿ "

ವಿಕ್ರಮ ಹುಚ್ಚಪ್ಪಣ್ಣನವರು, ಮೆಲ್ಲನೆ ಮಾತಿಗೆ ಮೊದಲುಮಾಡಿದುದರಿಂದ, ಉಳಿದ ಕೈದಿಗಳು ಆಚೆಗೆ ಸರಿದು ಮಾತನಾಡತೊಡಗಿದರು. ವಿಕ್ರಮನು ಅಲ್ಲಿಯ ರೀತಿ ಕೇಳಿದ. ಹುಚ್ಚಪ್ಪನವರು ತಮ್ಮ ಅನುಭವಗಳನ್ನು, ಒಂದೊಂದಾಗಿ ವಿಕ್ರಮನೆದುರು ಇರಿಸಿದರು. 'ಕಾಳಾಟೋಪಿ' 'ಬಿಳಾಟೋಪಿ'ಗಳ ವಂಶಾವಳಿಯನ್ನು ತಿಳಿಸಿದರು. ಜೇಲಿನ ಪ್ರಪಿತಾ

ಮಹನೇ ತನ್ನನ್ನು ಚೇಷ್ಟೆ ಮಾಡಿದವನೆಂಬುದು ಮನದಟ್ಟಾಯಿತು ವಿಕ್ರಮನಿಗೆ. ಬೆಳಗಿನಿಂದ ಮರುದಿನ ಬೆಳಗಿನ ವರೆಗೂ ಜರುಗುವ ಕಾರ್ಯಕ್ರಮಗಳನ್ನು ವರದಿ ಮಾಡಿದರು ಹುಚ್ಚಪ್ಪಣ್ಣನವರು ವಿಕ್ರಮನು ಮೊದಲು ಕೇಳಿ ತಿಳಿದುದರ ಮುಪ್ಪಡಿ ಭೀಕರವಾಗಿದ್ದಿತು. ಕ್ಷಾತ್ರ ವೃತ್ತಿಯ ಮಾತುಗಳ ಪರಿಣಾಮವನ್ನು ಉತ್ಸಾಹವಾಗಿ ಅನುಭವಿಸಲೇ ಬೇಕೆಂದು ಒಳಗೇ ಮರುಗಿದ. ಬೆಳಕು ಪೂಕಟಿಸುವುದಕ್ಕೆ ಪ್ರಾರಂಭವಾಯಿತು. ' ಪಾಚಸಂಬರ ' ಎಂದು ಕೂಗಿದ 'ಪಿವಳಾ ' ಕಾಯುವ ಪೋಲೀಸ, ಬಾಗಿಲನ್ನು ತೆರೆದ. ಪೀವಳಾ ಹೆಂಗಸನ್ನು ಕರೆಯುವಂತ ವಿಕ್ರಮನನ್ನು ಕರೆದ. ಒನಪು ಒಯ್ಯಾರ ಬೀರಿದ ದೂರಿನಿಂದ ಮುತ್ತಿಕ್ಕಿ 'ತನ್ನ'ದೆಂದು ಕುಳಿತ ಕೈದಿಗೆ ತಿಳಿಸಿದ. ಕುಳಿತವರಾರೂ ಜಂಬಲ ನೀಡಲಿಲ್ಲ. ಒಳಕ್ಕೆ ಬಂದು ವಿಕ್ರಮನೆದುರು, ನೀರು ತುಂಬಿದ ಮಗ, ಹಸಿರು ಹಾಂಸೆಯಂತಹರಾಡಿಇದ್ದ ಪರಿವಾಣ, ಎರಡು ರೊಟ್ಟಿ ಇರಿಸಿದ ವಿಕ್ರಮನು 'ತಪೋನಿಧಿಯಾಗಿದ್ದರೆ 'ಪಿವಳಾ'ನನ್ನು ಸುಟ್ಟು ಬೂದಿಮಾಡುತ್ತಲಿದ್ದೆ ಎಂದುಕೂಂಡ ಮನದಲ್ಲಿ ಕೋಪಿಷ್ಠನಲ್ಲವೆಂದು ತೋರುವುದನ್ನು ಮರೆಯಲಿಲ್ಲ. ಶಾಂತಿ ಸದ್ಗುಣಗಳ ನಿಧಿಯೇ ತಾನೆಂದು ಜನನುಡಿಯ ಬೇಕೆಂಬ ಬಯಕೆ ಬೇರೆ! ಹುಚ್ಚಪ್ಪಣ್ಣನವರು ಆಕ್ಷೇಪಿಸದಿದ್ದರೆ 'ಪಿವಳಾ' ವಿಕ್ರಮನ ಬದಿಯಲ್ಲಿ ಕುಳಿತು, ಮಂಗಲಸೂತ್ರ ಕಟ್ಟಿದ ನಟನೆ ತೋರಿ, ಮಂಗಲಾಷ್ಟಕ ಪಠಿಸುತ್ತಲಿದ್ದ. ' ಇರಲಿಬಿಡಿ. ಅವನ ಸ್ವಭಾವವೇ ಹಾಗಿರಬೇಕು.' ಎಂದು ವಿಕ್ರಮನು ಬಹಿರಂಗ ಭಾಷಣ ಮಾಡಿದ ಪೀಡೆ ತೊಲಗಿತು. ಪಾರಾದೆ' ಎಂದುದು ಸ್ವಗತಮಾತು. ಪಿವಳಾ ' ನನ ಚಿಕಣಾ! ನನ ಚಿಕಣಾ ! ' ಎಂದು ಕೈತಟ್ಟಿ ನಕ್ಕು ಓಡಿದ.

" ಊಟಾ ಮಾಡ್ರೀ ಅಪ್ಪಾಅವರ " ಒಬ್ಬ ಕೈದಿ ಕೇಳಿಕೊಂಡ. ಬೇರೊಬ್ಬ "ಕತ್ಲಾಕ್ಕತ್ರಿ ಮತ್ತ. ಬೆಳವೇsನಾ ದೀತಾಲ್ದ್ s ಗೂಣಾಗ ನಾಕ- ಕೊಂತ, ಬೀಳೂದ. ಗಡಾ ಕುಂಡರ್ರಿ ಉಣ್ಣಾಕ " ಸ್ಪಷ್ಟೀಕರಿಸಿದ. ಕಾಳು ಇಣುಕುವುದರಲ್ಲಿತ್ತು. ವಿಕ್ರಮನು 'ಹಾಂಸೆ, ಮಗಿಯ ನೀರು,

ಕಂಡು 'ಅಯ್ಯೋ ದುರ್ದೈವವೇ' ಎಂದುಕೊಂಡ. ಹುಚ್ಚಪ್ಪಣ್ಣನವರು, ವಿಕ್ರಮನ ಮನದ ಇಂಗಿತವನ್ನು ಅರಿತಿರಬೇಕು. ' ಮಹಾ ಪ್ರಸಾದಾ ಇದೂ. ಬಿಡಬಾರ್ದ್ದು. ಸ್ವಾತಂತ್ರದೇವಿ ನೈವೇದ್ಯಾಗಿ ಬರ್ತದ.' ಎಂದು ನುಡಿದರು. ವಿಕ್ರಮನು ಕುಳಿತಲ್ಲಿಯೇ ಕೈತೊಳೆದ. ಹೊಟ್ಟೆ ಹಸಿದಿಲ್ಲ ವೆಂದೇ ಹಾಡಿದ. ಕುಳಿತವರ ಅಗ್ರಹಕ್ಕೆ ತಲೆ ಬಾಗಲೇಬೇಕು. 'ಕಷ್ಟ ಸಹಿಷ್ಣು ತಾನು' ಎಂಬುದನ್ನು ತೋರ್ಪಡಿಸುವ ಆಶೆಯೂ ಇದ್ದಿತು. 'ಪರಿ ವಾಣ! ಮಗಿ!! ', ನೋಡಿದ. ಜೀವನಕ್ಕೇ ಹೊಸ ಸಂಸ್ಕಾರ, ಎಂದ.

" ಇದು.,..ಏನು ? " ವಿಕ್ರಮ ಕೇಳಿದ.

" ಅದೂ........ **ಜೇಲು ಲೋಕದ ಅಮೃತ ! ಸುಖಸಾರಕ ಮರಣ ರಸಾಯನ!!"** ಹುಚ್ಚಪ್ಪನವರು ವಿಕ್ರಮನ ಮೊಗ ನೋಡುತ್ತ ನುಡಿದರು. ಕೈದಿಗಳೆಲ್ಲ 'ಹೌದ್ರೀ ಅಪ್ಪಾ ಅವರ. ಅಮೃತಾನs ಕರೇ ನೋಡ್ರಿ' ಎಂದರು.

" ಇದನ್ನು ಕುಡಿದವರೆಲ್ಲ ದೇವತೆಗಳು " ವಿಕ್ರಮನು ರೊಟ್ಟಿಯ ತುಣುಕನ್ನು ರಸಾಯನದಲ್ಲಿ ಈಜಲು ಬಿಟ್ಟು ನುಡಿದ.

" ಅದೂ ಮಾತೂ ಕರೇನs . ಗುಡ್ಯಾಗಿನ ಕಲ್ಲದೇವ್ರ್ಹಾಂಗ, ಆಗೇ ಬಿಡ್ತೈತ್ರಿ ಇದನ್ನ ಕುಡದ್ರ. ಏಳಂದ್ರ ಏಳೂದು, ಕೂಡಂದ್ರ ಕೂಡೂದು. ಇಷ್ಟ್ಯಾಗ್ತತ ನೋಡ್ರಿ. ಅಂತಾ ಗುಣಾ ಐತಿ ಈ ಅಮೃತ ದಾಗ" ತನ್ನ ಸಂಕಟ ನುಡಿ ಹೊರಹೊಮ್ಮಿಸಿದ ಒಬ್ಬ ಕೈದಿ.

" ಭೂಲೋಕ, ಭುವರ್ಲೋಕ, ಸ್ವರ್ಗ, ಪಾತಾಳಲೋಕದಿಂದs ವನಸ್ಪತೀ ತರಸ್ತಾರ. ಹಸರ ತೊಪ್ಲಾ ಕಂಡ್ರಾತು, ಕಿತ್ತಿರವಾನಿ ಮಾಡಿದ್ರೇ ಜೇಲಲೋಕಕ್ಕ ! " ಹುಚ್ಚಪ್ಪನವರೆಂದರು. ವಿಕ್ರಮನು ತಿನ್ನಲು ಯತ್ನಿಸಿದ. ಕೊನೆಗೆ 'ಒಲ್ಲೆನಪ್ಪಾ' ಎಂದು ಸರಿಸಿದ ಬದಿಗೆ. ವೃದ್ಧ ಕೈದಿಯು 'ಅಣ್ಣಾ ಅವರs-ಬಿಡಬ್ಯಾಡ್ರೀ....ಒಂದs ತುಣುಕು ತಿಂದ್ಬಿಡ್ರಿ. ಯಾಕಂದ್ರೀ ನಿಮಗ ಎಂಟ್ನೀಶಸೀ ಇರಾಕs ಬೇಕು. ಮಗ್ಯಾಗಿನ್ನೀರು- ಪರಿವಾಣ್ದಾಗಿನ ಸಾರು ಕುಡಿಸಿಬಿಡತಾನು. ಮುಕಾಟ್ಲೇ ತಿನ್ನಿರೀ- ಮತ್ತ s ಕಾಡಿ

ಕೊಂತ್ಯ ಕುಂತಾನು ! ಮುಗದ ಹೋಗ್ಲಿ ಅವಂದು !" ಎಂದು ಹಿರಿತನ, ಅನುಭವ ಹೇಳಿಕೊಂಡ. ವಿಕ್ರಮನಿಗೆ ಮುದುಕನ ಮಾತು ನಿಜವೆನ್ನಿಸಿತು. ಉಳಿದ ಕೈದಿಗಳಿಗೆಲ್ಲ, ಅಲ್ಯುಮಿನಿಯಮ್ ಪಾತ್ರೆ ಕೊಟ್ಟಿರುವಾಗ, ತನ್ನ ಭಾಗಕ್ಕೆ 'ಮಗಿ, ಪರಿವಾಣ' ಬರಬೇಕಾದರೆ ಶನಿರಾಯನ ಆಟವೇ ಎನ್ನಿಸಿತು. ಹುಚ್ಚಪ್ಪನವರು ಮುದುಕನ ಮಾತಿಗೆ ಸಂಮತಿ ನೀಡದೇ ಪ್ರತಿಭಟಿಸಿದರು. 'ಶನಿ, ರಾಹು, ಕೇತು, ಮಂಗಳ ಎಲ್ಲವೂ ಸುಳ್ಳು. ಕಾಲ್ಪನಿಕ. ಇಂತಹ ವಿಷಯಗಳನ್ನು ನಂಬಿ ನಮ್ಮ ರಾಷ್ಟ್ರ ಅಧೋಗತಿಗಿಳಿದಿದೆ. ಕೋಟ್ಯಾಂತರ ದೇವರು, ಕಲ್ಲು ಕಂಡಲ್ಲಿ ಕೈ ಮುಗಿಯುವುದು, ಹರಕೆ ಒಪ್ಪಿಸುವುದು. ಗುಡಿ ಕಟ್ಟಿಸುವುದನ್ನು ಮಾಡಿ, ರಾಷ್ಟ್ರದ ಸಂಪತ್ತನ್ನು ನಾಶ ಮಾಡಿದ್ದಾರೆ. ನೂರೆಂಟು ಜಾತಿಗಳಾಗಿವೆ" ಸರತಿಯ ಕಾವಲರು ಮಾತನಾಡಿದರೆ 'ದಂಡನೆ' ಎಂದು ಬೆದರಿಸಿದುದರಿಂದ ಹುಚ್ಚಪ್ಪನವರು, ತಮ್ಮ ವಾದವನ್ನು- ನಿಲ್ಲಿಸಿದರು. ವಿಕ್ರಮನಿಗೆ ಉಭಯ ಸಂಕಟ. ಮುದುಕನ ಮಾತಿಗೆ ಬೆಲೆ ಇದೆ. ಶನಿಗೆ ತಲೆ ಬಾಗಿ ತಿಂದು, 'ಮುಂದೆ ಕಾಡಬೇಡ ಮಹಾರಾಯಾ!' ಎನ್ನಬೇಕೆಂದರೆ ಹುಚ್ಚಪ್ಪನವರು ! ಹುಚ್ಚಪ್ಪನವರು ಕಲಿತವರು. ಸಮತಾವಾದಿಗಳು. ಲೆನಿನ್ನನ ತತ್ವಗಳ ಕಷಾಯ ಕುಡಿದವರು. ಅಂತಹವರ ವಿರೋಧವಾದ ಮಾಡುವಂತಿಲ್ಲ. ಹುಚ್ಚಪ್ಪನವರು ಕಾವಲನಿಗೆ ಉತ್ತರ ಕೊಡುವ ಸಮಯ ಸಾಧಿಸಿ, ತುಣುಕನ್ನು ನುಂಗಿ, ಮಗಿಯ ನೀರನ್ನು ಕುಡಿದೇ ಬಿಟ್ಟ. ವಿಕ್ರಮನು ತಿನ್ನಬಾರದೂ ಎಂದು ಜಪ ಮಾಡುತ್ತಲಿರುವ ತಪಸ್ವಿಯೂ ಕೊಟಡಿಯಲ್ಲಿದ್ದ. ಬದಿಗೆ ಸರಿಸಿ, ವಿಕ್ರಮ ಕೈತೊಳೆದುದೇ ತಡ, 'ನಾ ತೊಗೊಂತೀನಿ ತಂದೆ' ಎಂದು ತಿನ್ನಲು ತೊಡಗಿದ. ಕೆಲವರು ಕೋಪಗೊಂಡರು. ಕೆಲವರು ಒಳ್ಳೆಯದಾಯಿತೆಂದರು. ಕೆಲವರು 'ಕೂಳಬಕ್ಕ' ನೆಂದರು. ವಿಕ್ರಮನು ಅತ್ಯಾದರದಿಂದ ತಿನಿಸಿ ತನ್ನ ಮಗಿಯ ನೀರನ್ನೂ ಕೊಟ್ಟ. ತಪಸ್ವಿಯು ಅಮೃತವೆಂದೇ ರಸಾಯನ ಕುಡಿದು, ಪರಿವಾಣವನ್ನು ನಾಲಿಗೆಯಿಂದ ತೊಳೆದು, ಮೂಲೆಯಲ್ಲಿ ಇರಿಸಿದ. ತಪಸ್ವಿಯ ಮುಖವನ್ನೇ ದಿಟ್ಟಿಸುತ್ತಲಿದ್ದ ವಿಕ್ರಮ 'ಅರ ಹೊಟ್ಟೆ .... ' ಎಂದ.

ಕೈದಿಗಳು ತಮ್ಮ ಗೆಳೆಯರೊಡನ 'ಖಟ್ಲೆ'ಗಳ ವಿಚಾರವನ್ನು ಅರೆಯುತ್ತಲಿದ್ದರು. ಕೋಟೆಯ ಸುತ್ತು, ಒಳಗೆ 'ಪಹರೆ' ಯವರ ಕೂಗು, ಪ್ರಶಾಂತ ವಾತಾವರಣವನ್ನು ಕದಡುತ್ತಿದ್ದಿತು. ತಗಣಿಗಳು, ರಕ್ತಶೋಷಣೆಗಾಗಿ, ಹುಟ್ಟಿನಿಂದ ಹೊರಬಂದು ಕಾರ್ಯತತ್ಪರವಾಗಿ, ಜಯಾಪಜಯಕ್ಕೆ ಗುರಿಯಾಗುತ್ತಲಿದ್ದುವು. ವೀರಸ್ವರ್ಗವೂ ಪ್ರಾಪ್ತವಾದುವು ಕೆಲವಕ್ಕೆ. ಸಂಗೀತ ಶಿಖಾಮಣಿ ಸೊಳ್ಳೆಗಳು 'ಸಂಗೀತಮಯಂಜಗತ್' ಎಂಬುದನ್ನು ಸಾರುತ್ತಲೇ ಇದ್ದುವು. ಸ್ಥಿತಪ್ರಜ್ಞರು 'ನಿದ್ರಾಸಮಾಧಿಯಂ ಪೊಂದಿದರು.' ವೀರರು ಮಲಗಿದಾಗಲೂ ತಗಣಿ-ಚಿಕ್ಕಾಡುಗಳೊಡನೆ ಅವ್ಯಾಹತವಾಗಿ ಹೋರಾಡುತ್ತಲಿದ್ದರು. ಕೆಲರು ಎದ್ದು ಕುಳಿತೇ ಖಡ್ಗಧಾರಿಗಳಾಗಿ 'ಬಾ ನೋಡೋಣ' ಎಂದರು. 'ನಿನ್ನ ಭಾಗದ ರಕ್ತ, ಕುಡಿದು ಬಿಡು.' ಎಂದು ಅಲ್ಲಿಯೇ ಸಂಕಟ ತಾಳದೇ ಹೊರಳಾಡಿ, 'ರಾತ್ರಿಗೆ ಬೇಗ ಮರಣ ಬರಲೀ' ಎಂದು ಶಾಪ ಪ್ರದಾನ ಮಾಡಿದರು. ಬಾಗಿಲದ ಬದಿಯ ನರಕ ಕುಂಡವು ಭರತಿ ಹೊಂದುತ್ತಲಿದ್ದಿತು ಭರತಿಯ ಸಪ್ಪಳ ಕೇಳ ಕೇಳಿ ಪ್ರಾಣತ್ಯಾಗಕ್ಕ ಸಿದ್ಧನಾಗಲಿಯಾ' ಎಂದವನು ವಿಕ್ರಮನೊಬ್ಬನೆ. ಹುಚ್ಚಪ್ಪನವರು, ಸಮತಾವಾದಿಗಳಾದುದರಿಂದ, ಕುಡಿಯಲಿ, ನಮ್ಮಂತೆ ಅವೂ ಜೀವಿಗಳು. ಅವು ಬಡವಾಗುವುದೇಕೆ? ಜೀವಿಗಳೆಲ್ಲ ಸಮ ಎಂದು ಸ್ವಸ್ಥ ತ್ಯಾಗಿಗಳಾಗಿ ಬಿದ್ದುಕೊಂಡಿದ್ದರು.

ವಿಕ್ರಮನು, ಹುಚ್ಚಪ್ಪನವರು ಎಚ್ಚರಿರುವರೇನೋ ಎಂದು ಕೂಗಿದ. ನಿಃಶ್ಚಿಂತರಾಗಿ ಮಲಗಿ ನಿದ್ರಿಸುವುದನ್ನು ಕಂಡು ಭಾಪು ಎಂದ. 'ಹುಚ್ಚಪ್ಪ ಇನ್ನೂ ಹುಡುಗ. ದೇಶಭಕ್ತಿ ಎಂದರೆ ಇಂತಹ ತ್ಯಾಗಕ್ಕೂ ಸಿದ್ಧನಾಗಬೇಕೆ? ರೆವಿನ್ಯೂ ಡಿಪಾರ್ಟಮೆಂಟಿನ' ನೌಕರಿ ಎಂದರೆ ಸಾಮಾನ್ಯವೇ? ಮಾಮ್ಲೆದಾರ-ಕಲೆಕ್ಟರ ಅಧಿಕಾರ ದೊರೆಯುತ್ತಿದ್ದಿತು. ಅದನ್ನೆಲ್ಲ ಬಿಟ್ಟು.... ರೆಕಾರ್ಡಕೀಪರನಾದ ತಾನೇ ಬೆಂಕಿ ಕೊಡಬೇಕೆ? ರೆಕಾರ್ಡೆಲ್ಲಾ ಸುಟ್ಟು ಬೂದಿಯಾದರೆ ಇವನಿಗೇನು ಬಂತು ಭಾಗ್ಯ!! ಹುಚ್ಚು ಹುಡುಗ! ಬಿ. ಎ. ಪ್ರಥಮ ಶ್ರೇಣಿಯಲ್ಲಿ ಅದು ಹೇಗೆ ತೇರ್ಗಡೆಯಾದ? ಇಷ್ಟೂ ಮುಂಧೋರಣೆ ಬೇಡವೇ? ಸುಸಂಕೃತರೆಂದರೆ

ಹೀಗೇಯೇ? .... ನಿಜ, ಇದಕ್ಕೇ ತ್ಯಾಗವೆನ್ನಬೇಕು? ಆಶೆ-ಆಕಾಂಕ್ಷೆಗಳನ್ನೆಲ್ಲ ತೊರೆದ. ಕಾಂಗ್ರೆಸ್ಸಿನ ಆಜ್ಞೆಯಂತೆ, ರೆಕಾರ್ಡ ಸುಟ್ಟ. ನೌಕರಿ ಹೋಗಬಹುದು. ದೇಶಕ್ಕೆ ಅಪಾರ ಸೇವೆ ನಿಜ! ಕಾಂಗ್ರೆಸ್ಸ ರಾಜ್ಯ ಬಂದರೆ, ಹುಚ್ಚಪ್ಪನವರನ್ನು ಮರೆತರೆ?.... ಅದೇ ಸ್ಥಳಕ್ಕೆ.... ಮಾಮ್ಲೇದಾರನೆಂದು ನಿಯಮಿಸದಿದ್ದರೇ? .... ಈ ವಿಚಾರ ಹುಚ್ಚಪ್ಪನವರಿಗೆ ಬಂದಿರಲಿಕ್ಕಿಲ್ಲವೇ? ವಿಕ್ರಮನ ವಿಚಾರವು ಪ್ರವಹಿಸುತ್ತಲಿದ್ದಿತು. ಹುಚ್ಚಪ್ಪನು ಹೆಸರಿಗೆ ತಕ್ಕಂತೆ ವರ್ತಿಸಿದನೆಂದು ಒಮ್ಮೆ, ಇಂತಹ ತ್ಯಾಗಿಗಳಿಂದಲೇ ರಾಷ್ಟ್ರದ ಅಭ್ಯುದಯ'ವೆಂದು ಒಮ್ಮೆ, ಹೊಯ್ದಾಡಿಸುತ್ತಲಿದ್ದ ವಿಕ್ರಮ ತನ್ನ ತಲೆಯನ್ನು.

ವಿಕ್ರಮನು ಚಟ್ಟನೇ ಎದ್ದು ಕುಳಿತು 'ಯಾರು?' ಎಂದ. ಎದೆಯ ಮೇಲೆ ಕೈ ಆಡಿಸಿದವರಿಂದ ಕೊಂಚ ಬೆದರಿದ್ದ. ನಡುರಾತ್ರಿಯಲ್ಲಿ ತನ್ನ ಮೈ ಮುಟ್ಟುವವರಾರು? ಅಲ್ಲೀ ಆದಿಲಶಾಹಿಯೇ ಭೂತವಾಗಿ ಬಂದನೇ? ಯಾರು? ಎಂದು ಮತ್ತೆ ಕೂಗಿದ. ಮೈಮೇಲೆ ಕೈ ಆಡಿಸಿದ ವ್ಯಕ್ತಿಯು 'ನಾನು ಮೌಲ್ವಿ' ಎಂದಿತು.

"ಮೌಲ್ವೀ!...."

"ಅಹುದು ನಾನೇ ಮೌಲ್ವಿ ...."

"ಬಂಧಿಸಿದರೇ .... ?"

"ಮೂರು ದಿನಗಳಾವು?"

"ಮೆಲ್ಲನೆ ಮಾತನಾಡು. ಮುಂದಕ್ಕೆ ಬಾ. ಕಿವಿಗೇ ಬಾಯಿ ಇರಲಿ-ಬಾ" ವಿಕ್ರಮ ಮೌಲ್ವಿ ಮಾತನಾಡತೊಡಗಿದರು.

"ತಿಪ್ಪನು ಎಲ್ಲಿ?" ವಿಕ್ರಮ ಕೇಳಿದ.

"ಫರಾರಿ .... ಅವನ ಕೈಸೆರೆ ಸಾಧ್ಯವಿಲ್ಲ!"

"ಶ್ರೀ ಅರವಿಂದ?...."

"ಬಂಧಿಸಿದ್ದಾರೆ!"

"ಎಂದು?"

" ಎಲ್ಲರ ಜೊತೆ ! "

" ಎಲ್ಲರೂ .... ಅ-ಂ-ದ-ರೆ "

" ಪಥಕವೆ !! "

" ಅದು ಹೇಗೆ ಮೌಲ್ವಿ ? "

" ವಿದ್ರೋಹಿಗಳ .... "

" ಯಾರು ?

" ನೀವು ಮೊದಲಿನಿಂದಲೂ ಸಂಶಯಕೊಳ್ಳುತ್ತಿದ್ದಿರಿ. ನಾವೆಲ್ಲಾ ಗಣನೆಗೆ ತರಲಿಲ್ಲ ! "

" ಕನಕಪ್ಪನೇ ? "

" ಅಹುದು ಅವನೇ !! ಎಲ್ಲರ ಬಂಧನಕ್ಕೂ ಅವನೇ ಕಾರಣ !"

" ಎಲ್ಲರೂ ಎಲ್ಲಿ ? "

" ಹಿಂಡಲಗಿಯಲ್ಲಿ ಕೆಲವರು, ಇಲ್ಲಿ, ಇಸಾಪುರ ''

'' ಪ್ರಕಾಶರು ? ''

'' ದಿಲ್ಲಿಗೆ ಹೋದರೆಂದು ....''

'' ಬಂಧಿಸಿಲ್ಲವಷ್ಟೆ ? ''

'' ಇಲ್ಲ. ಆದರೇನು ? ಎಲ್ಲವೂ ವ್ಯರ್ಥ ! ''

'' ಏಕೆ ? ''

ಪಥಕವೇ ಚದುರಿತು. ಕೈಕೊಂಡ ಕಾರ್ಯವೇ ಯಶಸ್ವಿಯಾಗಲಿಲ್ಲ. ನೂರಾರು ಸ್ಟೇಶನ್ನುಗಳು, ಕಚೇರಿಗಳು ಉರಿದಿದ್ದರೆ ಈ ಮೌಲ್ವಿಗೇ.... ಸಮಾಧಾನ ! "

" ಮೌಲ್ವೀ- ನೂರಾರೇಕೆ, ಸಹಸ್ರಾರು ಸ್ಟೇಶನ್ನುಗಳು ಭಸ್ಮವಾದಾವು ! ಬ್ರಿಟಿಶ ಸಾಮ್ರಾಜ್ಯವೇ ಉರಿಯುವುದನ್ನು ನೋಡುವಿ. ಸಮಾಧಾನಿಯಾಗು "

" ಸುಡುವುದನ್ನು ಈ ಕೈಯೇ ಮಾಡಬೇಕಾಗಿದ್ದಿತು. ಇತರರು ಮಾಡಿದುದನ್ನು, ಕೇಳಬೇಕಷ್ಟೆ ? "

" ಕೊನೆಗೆ ಕನಕಪ್ಪನೇ ವೃತ್ತ್ಯವಾದ !! "

" ವಿಕ್ರಮರಾವ, ಅಪ್ಪಣೆ ಕೊಡಿ ? "

" ಏತಕ್ಕೆ ಮೌಲ್ವೀ ! "

" ಅಪ್ಪಣೆ ಕೊಡಿ ಮೊದಲು. ಆ ಮೇಲೆ ಹೇಳುತ್ತೇನೆ. ನಾನು ಅಸ್ಸಲ್ ಮುಸಲ್ಮಾನ. ವೈರಿಯನ್ನು .... "

" ಯಾರು ವೈರಿ ? "

" ಕನಕಪ್ಪ ! "

" ಏನು ಮಾಡುವಿ ! "

" ಕಾಂಗ್ರೆಸ್ಸ ದ್ರೋಹ ಬಗೆದವನ ರುಂಡವಿದೂ ಎಂದು ಜಗತ್ತು ನುಡಿಯುವಂತೆ .... "

" ಮೌಲ್ವೀ- ದಾರೀ ತಪ್ಪಿ ಮಾತನಾಡಬೇಡ. ಕಾಂಗ್ರೆಸ್ಸಿನ ತತ್ವವು ವಿಶ್ವಬಂಧುತ್ವ ಪ್ರತಿಷ್ಠಾಪನೆ ! ಶಾಂತಿ ! ಸತ್ಯ ! ಶಾಂತಿ ಸತ್ಯದಲ್ಲಿ '**ಅಲ್ಲಾ**' ನಿಂತಿರುವ ಮೌಲ್ವೀ .... "

" ನಿಜರಾಯರೇ, ಕನಕಪ್ಪ ಈ ರೀತಿ ಮಾಡಬಾರದಿತ್ತು "

" ಪಾರಿತೋಷಕ ದೊರೆಯಿತೇ ? "

" ಬ್ರಿಟಿಶ ಸರಕಾರಾ ಇದು "

" ದೊರೆಯಲಿಲ್ಲವೇ ? "

" ನಮ್ಮೊಡನೆ ಇರಿಸಿದ್ದಾರೆ "

" ಎಲ್ಲಿ ? "

" ಫಾಸೀಗೇಟಿನ ಬದಿಯ ಕೊಠಡಿಯಲ್ಲಿ, ಇನ್ನೂ ಸಮಾಚಾರ ಕೇಳುತ್ತಲಿದ್ದಾರೆ. ತಿನಿಸುತ್ತಾರೆ. ಫೇಡೇ-ಲಾಡು-ಚಹ ಅವನಿಗಾಗಿ ದಿನಾಲು ಬರುತ್ತಿದೆ. ಎಲ್ಲ ಸಂಗತಿ ಹೇಳುತ್ತಲಿರುವನಂತೆ ! "

" ಯಾರು ಹೇಳಿದರು ? "

" ಜಮಾದಾರ ! "

" ಜ-ಮಾ-ದಾ-ರ-ರು ??

" ರಾಷ್ಟ್ರಪ್ರೇಮ ಎಲ್ಲರಲ್ಲಿಯೂ ಇದೆ. ಅವನ ವಿದ್ರೋಹವೃತ್ತಿಗೆ ಜಮಾದಾರರೂ ಮರುಗಿದರು "

" ಮೌಲ್ವೀ ...."

" ಏನು ? "

" ಅಗಸ್ಟ ಹದಿನಾರನೆಯ ದಿನಾಂಕದ ರಾತ್ರಿ ಕೆಲಸ ನೆನಪಿದೆಯೇ?

" ಸ್ಟೇಶನ್ನ ಉರಿಸಿದ್ದು ? "

" ಅದು ಸರಿ. ಸ್ಟೇಶನ್ನದ ಗೋಡೆಯಲ್ಲಿಯ ಟ್ರಿಝುರಿ ತೆಗೆದದ್ದು"

" ರೇಲ್ವೆಯ ಹಣ ಪಥಕದ ನಾಯಕರ ಕೈಗಿತ್ತೆ "

" ಸ್ಟೇಶನ್ನ ಮಾಸ್ತರನ ಬಂಗಾರ ? "

" ಆರು ದಿನಗಳ ನಂತರ ಅವರ ಮನೆಗೆ ಮುಟ್ಟಿಸಿ, ಮನೆಯ ಯಜಮಾನತಿಇಂದ 'ಮುಟ್ಟಿತೂ' ಎಂದು, ಬರೆಯಿಸಿಕೊಂಡು ಬಂದೆ."

" ಸಂತೋಷ ! ಅದು ತಪ್ಪಿದುದನ್ನು ಕೇಳಿರಲಿಲ್ಲ. ಸಂತೋಷ!"

ಕೆಲಸಮಯ ಮೌನತೆ ಈರ್ವರೂ ವಹಿಸಿದರು. ಮಲಗಿದ ಕೈದಿಗಳು ಹೊಯ್ದಾಡುತ್ತ, ಬಡಬಡಿಸುತ್ತಲಿದ್ದರು ಪಹರೆ ಚೆನ್ನಾಗಿಯೇ ನೆರವೇರುತ್ತಲಿತ್ತು. ಮೌಲ್ವಿ ತೀರ ಸಮೀಪಕ್ಕೆ ಸರಿದು ಹೇಳಿದ.

" ಒಪ್ಪಿಕೊಳ್ಳುವೆ ಮಾಡಿದುದಿನ್ನು "

" ಎಲ್ಲರೂ ಸಿಕ್ಕಿಕೊಳ್ಳುವರು "

" ಮಾಡುವುದನ್ನೆಲ್ಲ ರಾಷ್ಟ್ರಪ್ರೀತಿಯಿಂದ ಮಾಡಿದ್ದೇವೆ. ಇಲ್ಲವೆಂದು ನುಡಿಯುವುದೇಕೆ? ಕಾಂಗ್ರೆಸ್ಸಿನ ಅಗಸ್ಟ ೯ ನೇ ದಿನದ ನಿರ್ಣಯಕ್ಕನುಗುಣವಾಗಿ ನಾನೇ ಈ ಕೆಲಸ ಮಾಡಿದ್ದೇನೇ ಎಂದು ಧೈರ್ಯವಾಗಿ ಹೇಳುತ್ತೇನೆ, ಹೇಗೂ ಕನಕಸಿಂದ ಗುಟ್ಟುರಟ್ಟಾಗಿದೆ. "

" ವಿಚಾರಿಸೋಣ. ದುಡುಕದಿರು ಮೌಲ್ವೀ "

" ಒಂದು ಗುಪ್ತ ವಿಚಾರ !! "

" ಏನು ? "

" ಜೇಲಿನಿಂದ ಫರಾರಿಯಾಗಿ .... "

" ಶಕ್ಯವೇ ! "

" ಪ್ರಯತ್ನವಿದೆ. ಒಪ್ಪಿಗೆಯೇ ? "

" ಬಹಳ ಭದ್ರವಂತೆ ಈ ಜೇಲು ! "

" ಅದು ಏನೇ ಇರಲಿ, ಪ್ರಯತ್ನಕ್ಕೆ ತೊಡಗಲಿಯಾ ? "

" ಸಹಾಯಕರ ನೆರವು "

" ಸಿದ್ಧಗೊಳಿಸಿದ್ದೇನೆ "

" ಚೆನ್ನಾಗಿ ? "

" ಹೂಂ "

" ಯಾರು ? "

" ಜ—ಮಾ—ದಾ "

" ಎಚ್ಚರವಿಟ್ಟು...."

" ಒಪ್ಪಿದಿರಾ ? "

" ಯಶಸ್ವೀ ರೀತಿಯಿಂದ ಸಾಂಗವಾಗಲಿ "

" ಉಠಾಹೋ ಉಠಾ! ಉಠಾ ಲೌಕರ ಲೌಕರ "

ಕಾವಲು ಸಿಪಾಯಿಗಳು ಜೇಲಿನಲ್ಲಿ ಇಣಿಕಿ, ಅಬ್ಬರ ಧ್ವನಿಯಿಂದ ಕೂಗಿದರು. ಕೈದಿಗಳ ಆಕಳಿಸುತ್ತ ಏಳತೊಡಗಿದರು. ವಿಕ್ರಮನು ಮೌಲ್ವಿಯೊಡನೆ ಮಾತನಾಡದೇ ಕುಳಿತಿದ್ದ. ಕೈದಿಗಳು ಥಾಲಿಪಾಟು-ಗಳನ್ನೆತ್ತಿ ಸಿದ್ಧರಾದರು. ಬಾಗಿಲು ತೆರೆಯಿತು. ಎಲ್ಲರೂ ಹೊರಬಿದ್ದರು. ಸಾಲಾಗಿ ಕೊಠಡಿಯ ಎದುರು ಕುಳಿತರು ಇಬ್ಬಿಬ್ಬರಂತೆ. ಗದ್ದಲವಾಗದಿರಲು, ಶಿಸ್ತಿನಿಂದ ಸರಿಯಾಗಿ ಕುಳಿತುಕೊಳ್ಳಲು, ಸಿಪಾಯಿಗಳ ಕೈಗುಣಿ ಕಲಿಸುತ್ತಿದ್ದಿತು. ವಿಕ್ರಮನು ಗೋಡೆಗೆ ಆತುಕುಳಿತವನು, ಕುಳಿತೇ ಇದ್ದ. ಮೌಲ್ವಿ ಹೊರಬರಲು ತಿಳಿಸಿದ. 'ಬರುವೆ' ಎಂದುದನ್ನು ಕೇಳಿ ಬರಲೇಬೇಕಾಗುವುದೆಂದು ತಿಳಿಸಿದ ' ಹೂಂ ' ಎಂದು ಕುಳಿತ. ಮೌಲ್ವಿ, ಥಾಲೀಪಾಟಿನೊಡನೆ ಹೊರಬಂದು ಸಾಲಿನಲ್ಲಿ ಕುಳಿತ. ಬೆಳಕು ತಲೆಎತ್ತುವದರಲ್ಲಿತ್ತು. ವಿಕ್ರಮನು ಕುಳಿತಲ್ಲಿಯೇ ನಿದ್ರೆಯಲ್ಲಿ........

"ಖಟ್-ಖಟ್-ಖಟ್" ಎಂದು ಕೈಗುಣಿಯ ಬಡಿತ, ವಿಕ್ರಮನ ತಲೆಗೆ ಬಿದ್ದುವು. ಹೌಹಾರಿ ಎದ್ದುನಿಂತ 'ಚಲೋ ಬಾಹರ ಚಲೋ' ಎಂದು ರಟ್ಟೆ ಹಿಡಿದು ಎಳೆದರು. ದಬ್ಬಿದರು ಹೊರಕ್ಕೆ. ಸ್ವತಃ ಜಮಾದಾರರೇ ವಿಕ್ರಮನ ಪೂಜೆಮಾಡಬೇಕಾಯಿತು. ಜೇಲಿನಲ್ಲಿ ಕೈದಿ ಓಡಿ ಹೋದುದೇ ನಿಜವೆನ್ನಿಸಿತ್ತು ಅವರಿಗೆ. ಎರಡು ಮೂರುಸಲ ಎಣಿಕೆಮಾಡಿದರೂ ಒಂದು ಕಡಿಮೆಯೇ ಬರಲು ಕಕ್ಕಾವಿಕ್ಕಿಯಾದರು. ಕೊಠಡಿಯಲ್ಲಿ ಯಾವ ಕೈದಿಯೂ ಬೆಳಗಿನಲ್ಲಿ ಕೂಡ್ರುವ ಧೈರ್ಯಮಾಡುತ್ತಿರಲಿಲ್ಲ. ಸಂಶೋಧನೆಗೆ ತೊಡಗಿದಾಗ ವಿಕ್ರಮನು ನಿದ್ರಿಸುತ್ತಲಿದ್ದುದು ಕಂಡಿತು. 'ಕೈದಿ ಫರಾರಿಯಾಗಿರುವ, ತನ್ನ ನೌಕರಿ ಸಾಯುವುದು ತಾನೂ ಕೈದಿಗಳೊಡನೆ, ಜೇಲಿನಲ್ಲಿ ಇರುವ ಕೀಳು ಪ್ರಸಂಗ ಬಂತೂ' ಎಂದು, ಎಣಿಕೆ ಎರಡನೆಯಸಲ ಮಾಡುವಾಗ ಚಿಂತಿಸುತ್ತಿದ್ದ. ವಿಕ್ರಮನು ನಿದ್ರಿಸುವುದನ್ನು ಕಂಡಾಗ ಕಷ್ಟಕ್ಕೀಡು ಮಾಡಿದವನು ಇವನೇ ಅಲ್ಲವೇ ಎಂದು ಕೈಗುಣಿ ಪ್ರಸಾದ ಭಕ್ಷಣ ಮಾಡಿಸಿದರು.

ವಿಕ್ರಮನು ದಬ್ಬಿದಾಗ ಬಾಗಿಲನ್ನು ಭದ್ರವಾಗಿ ಹಿಡಿದುನಿಂತ. ಜನರು ಸಾಲಾಗಿ ಕುಳಿತುದನ್ನು ಕಂಡು, ಅವರೊಡನೆ ಕುಳ್ಳಿರಲು ಸ್ಥಳ ನೋಡತೊಡಗಿದ. ಜಮಾದಾರರು 'ಏ-ಸಾಲೇ **'ಪಕಡೋ ಥಾಲೀ ಪಾಟ' 'ಪಕಡೋ ಥಾಲೀ ಪಾಟ'** ಎಂದು ಗುದ್ದಿ ಆರ್ಭಟಿಸಿದರು. ವಿಕ್ರಮನಿಗೆ ತಿಳಿಯಲಿಲ್ಲ. 'ಏನು?' ಎಂದ. 'ಪಕಡೋ ಥಾಲೀಪಾಟ' 'ಫಟ್ ಫಟ್' ಎಂದು ಕೆನ್ನೆಗೆ ಪ್ರಹಾರ ನೀಡಿದರು. ಮೌಲ್ವೀ ಓಡಿ ಹೋಗಿ ಮಗಿ ಪರಿವಾಣ ತಂದು ವಿಕ್ರಮನ ಕೈಗಿತ್ತ. **'ಪಕಡೋ ಥಾಲೀಪಾಟ'** ಬದ್ಮಾಷ್ **'ಪಕಡೋ ಥಾಲೀಪಾಟ'** ಎಂದು ಹೆಜ್ಜೆ ಹಾಕಿದರು ಮುಂದಕ್ಕೆ.

---

## ವಿಕ್ರಮಶಾಸ್ತ್ರಿ

ವಿಕ್ರಮನು ' ಜಮಾದಾರನನ್ನು ಬಡಿದ, ಅವನ ತಲೆ ಒಡೆದ, ಒದ್ದ ! ತನ್ನ ಶೂರತನವನ್ನೆಲ್ಲ ಮನಸ್ಸಿನಿಂದ ತೋಡಿಕೊಂಡ. ತಲೆಗೆ ಪೆಟ್ಟು ಬಲವಾಗಿ ತಗುಲಿದುದರಿಂದ ಕೊರಗಿದ. ತಲೆಗೆ, ಹುಬ್ಬಿನ ಮೇಲ್ಭಾಗಕ್ಕೆ ಗುಬಟೆಗಳು ಕಾಣಿಸಿಕೊಂಡವು. ಗುಬಟೆಗಳ ಮೇಲೆ ಬೆರಳಾಡಿಸಿ ಸಮಾಧಾನಗೊಳಿಸುತ್ತಲಿದ್ದ. ' ಪೆಟ್ಟು ಬಲವಾಯಿತೇ ! ಪಾಪ, ರಾಕ್ಷಸರಪ್ಪಾ ಜೇಲಿನ ಅಧಿಕಾರಿಗಳು, ಎಂದು ಮುಂದೆ ಕುಳಿತವನೆಂದ. ಮೊದಲೇ ಬಂದು, ಸಾಲಿನಲ್ಲಿ ಕೂಡ್ರಬಾರದೇ ಮಹಾರಾಯಾ!' ಎಂದು ಹಿಂದೆ ಕುಳಿತವ 'ಇರಲಿ ಬಿಡಿ, ಇದೇನು ಮಹಾ!' ಎಂದು ಜಂಭ ಕೊಚ್ಚಿದ. ಹುಚ್ಚಪ್ಪನವರು ವಿಕ್ರಮನ ಮನೋವ್ಯಾಧಿಯನ್ನು ಅರಿತಿ

ದ್ದರು. ಕಳವಳಗೊಂಡರು. ಉಪಚಾರಕ್ಕೆ ಮುಂಪೆ ಬಂದಿದ್ದರೆ, ತಮಗೂ ಅದೇ ಗತಿಯಾಗುವುದೆಂಬುದನ್ನು ಅನುಭವದಿಂದ ಅರಿತಿದ್ದರು.

ಗಂಟೆಗಳು ಉರುಳಿದವು ಅಂಡರ ಟ್ರಾಯಿಲ ಕೈದಿಗಳು ಸಾಲಿನಲ್ಲಿ ! ಶಿಕ್ಷೆ ಹೊತ್ತು ಬಂದವರು ' ಗಂಜಿ ' ಕುಡಿದು, ನೆಕ್ಕಿ ಕೆಲಸಕ್ಕೆ ನಡೆದರು. ಕೈದಿಗಳಿಂದ ಕೆಲಸಗೊಳ್ಳುವುದರಲ್ಲಿ ವಾರ್ಡರ ಪೋಲೀಸರು ನಿರತರಾಗಿರುವರು. ನೇಯ್ಗೆ ಒಂದಡೆಗೆ, ನೂಲನ್ನು ಸರಿಪಡಿಸುವುದು ಬೇರೊಂದು ಕಡೆಗೆ ನಡೆದಿದೆ ಅಂಡರ ಟ್ರಾಯಿಲ್‌ದವರಿಗೂ ' ಗಂಜಿ ಭೋಜನಕ್ಕೆ ಆಮಂತ್ರಣವಾಯಿತು. ಸಾಲಾಗಿ ಹೊರಟರು ಥಾಲಿ ಪಾಟುಗಳೊಡನೆ. ಸಾಲಿನ ಶಿಸ್ತು ಭಂಗಕ್ಕೆ ಗುಣಿರಾಜನಿಂದ ದಂಡನೆ ಪಡೆದರು. ಕಾಲುವೆಯಲ್ಲಿ, ಮುಖಮಾರ್ಜನ ವಿಧಿಯೂ ಅಪ್ಪಣೆಯಂತೆ ಸಾಂಗವಾಯಿತು. ತಿರುಕರಂತೆ ಗಂಜಿಯನ್ನು ಸಾಲಿನಲ್ಲಿಯೇ ಹೋಗಿ ನೀಡಿಸಿಕೊಳ್ಳುವುದು ! ವಿಕ್ರಮನ ಸರತೀ ಆಯಿತು. ಬಿಸಿಲಲ್ಲಿ ಕುಳಿತೇ ಕುಡಿಯಬೇಕು. ನೇಸರನು ನೆತ್ತಿ ಸುಕ್ಕಲು ಬಂದ ! ಬಿಸಿಲಲ್ಲಿಯೇ ಅನ್ನದೇವನು ಪ್ರಕಟನಾದ. ಎರಡುರೊಟ್ಟಿ ! ಹೆಸರು ಬೇಳೆಯ ಹುಳಿ ! ವಿಕ್ರಮನು ಉಣ್ಣುವ ಕೈದಿಗಳ ಮುಖನೋಡುತ್ತ, ರೊಟ್ಟಿ-ಯನ್ನು ಬಾಯಿಗೆ ಇಡುತ್ತಲಿದ್ದ ಸಂತೃಪ್ತ ಭಾವವನ್ನು ಕೈದಿಗಳಲ್ಲಿ ಕಂಡ, ಇದ್ದುದನ್ನೇ ರುಚಿಮಾಡಿ, ರಸಮಾಡಿ ತಿನ್ನುವುದನ್ನು ಕಂಡ ವಿಕ್ರಮನು ತಾನೂ ತಿನ್ನಲು ಯತ್ನಿಸಿದ.

ಭೋಜನ ಸಮಾರಂಭ ಮುಕ್ತಾಯವಾಯಿತು. ಉರಿಬಿಸಿಲಲ್ಲಿಯೇ ಹರಟೆ! ಜಮಾದಾರರು ತಿರುಗುತ್ತಲಿದ್ದರು. ಕೈದಿಗಳು ತಮ್ಮ ಕತೆ-ಯನ್ನೇ ವಿಷಯಮಾಡಿ ಹರಟುತ್ತಲಿದ್ದರು. ವಿಕ್ರಮನು ಬೇಸತ್ತ. ಬಿಸಿಲಿನ ತಾಪ ಬೇರೆ. ಹೊಟ್ಟೆ ತುಂಬ ರೊಟ್ಟಿಯೂ ಇಲ್ಲ. ' ತಗಣಿಯ-ಕಾಟ ಸಹ ನೀವು ಬಿಸಿಲು ಬಾಧೆಬೇಡ ' ಎಂದ ' ಒಳಕ್ಕೆ ಯಾವಾಗ ಹೊಗಿಸುವರು ? ಸಂಜೆಯ ವರೆಗೂ....' ವಿಚಾರಪರನಾದ. ಹುಚ್ಚಪ್ಪ-ನವರು ಕೈದಿಗಳಿಗೆ ಕಾಂಗ್ರೆಸ್ಸಿನ ಜನನ, ಬಾಲ್ಯ, ಯೌವ್ವನದ ಕಥೆ-

ಗಳನ್ನು ಹೇಳುತ್ತಲಿದ್ದರು. ಭಾರತದ ಹಿಂದಿನ ಇಂದಿನ ಪರಿಸ್ಥಿತಿಯನ್ನು ಮನನೆಳೆಯುವ ರೀತಿಯಲ್ಲಿಯೇ ವರ್ಣಿಸಿದರು. ಕಾಂಗ್ರೆಸ್ಸಿನ ಅಗಸ್ಟ ಘೋಷಣೆ, ಮುಖಂಡರ ಬಂಧನ, ಭಾರತೀಯ ತರುಣರು ತೋರಿದ ಕಾರ್ಯ—ಸಾಹಸದ ಚಿತ್ರಗಳನ್ನು ತೋರಿದರು ಮಾತಿನಿಂದ. ಕಮ್ಯುನಿಸ್ಟರ ಕೌಶಲ್ಯ ಕಾರ್ಯಗಳನ್ನು ಹೊಗಳಿದರು.

ವಿಕ್ರಮನು ಬದಿಯಲ್ಲಿ ಕುಳಿತವನನ್ನು, ನಟ್ಟ ದೃಷ್ಟಿಯಿಂದ ನೋಡಿದ. ಅವನು ವಿಕ್ರಮನನ್ನು ನೋಡಿದ. ಬದಿಯವನ ಅಂಗೈಯನ್ನು ದೂರಿನಿಂದ ಕಂಡು 'ಅಬ್ಬಾ!' ಎಂದ. 'ಏನ್ರೀ ಅಪ್ಪಾಅವರ' ಎಂದು ಆತುರಗೊಂಡು ಕೇಳಿದ. 'ನಿನ್ನ ಹಸ್ತದಲ್ಲಿಯ ರೇಖೆ ನೋಡಿದೆ. ರಾಜರ ಕೈಯಲ್ಲಿ ಇರತಕ್ಕ ರೇಖೆಗಳು!' ಎಂದು ಮಾತನಾಡದೇ ಹಸ್ತದಲ್ಲಿಯ ವಿವಿಧ ರೇಖೆಗಳ ಸೂಕ್ಷ್ಮದೃಷ್ಟಿ ಪರೀಕ್ಷಿಸತೊಡಗಿದ. ಕುತೂಹಲಿ ಯಾಗಿ ಕೈಕೊಟ್ಟು ಕುಳಿತಿದ್ದ ನಾಗು ಕೈದಿ. ಒಮ್ಮೆ ವಿಕ್ರಮನ ಮುಖ ನೋಡುವ, ಒಮ್ಮೆ ತನ್ನ ರೇಖೆಗಳನ್ನು ನೋಡಿಕೊಳ್ಳುವ. ವಿಕ್ರಮನ ಎಡಕ್ಕೆ ಕುಳಿತ ಕೈದಿ, ತನ್ನ ಅಂಗೈತೋರಿ, ತನ್ನ ಹಣೆಬರಹ ಓದಲು ಆಜ್ಞಾಪಿಸಿದ. ನಾಲ್ಕೈದು ಕುಳಿತವರು 'ಸಾಮುದ್ರಿಕಾ ಶಾಸ್ತ್ರಜ್ಞ'ನನ್ನು ಕಂಡು, ಪೋಲೀಸರ ಕಣ್ಣು ತಪ್ಪಿಸಿ, ವಿಕ್ರಮನ ಬದಿಗೆ, ಕುಳಿತರು ಭವಿಷ್ಯ ಜೀವನದ ಜ್ಞಾನಕ್ಕಾಗಿ ಕುಳಿತವರೆಲ್ಲ ಕೈತೋರಿ, ಕೇಳಲು ಬಯಸಿದರು.

" ನಿನಗೆ ತಂದೆ ತಾಯಿಗಳೂ. .. "

" ಹೌದ್ರಿ ಅಪ್ಪಾ ಅವರ. ಹ್ವಾದಕಾರ್ತಿ ಣ್ಣಿಗೆ ಎಡ್ಡವರ್‍ಸ್ಸಾತ್ನೋದ್ರಿ ತೀರಕೊಂಡು. ಕರೇರಿ ನಿಮ್ಮಾತು."

" ಮಾವನ ಮಗಳನ್ನೇ...."

" ಇದೂ ಮಾತೂ ಕರೇನ ಮಾವನ್ಮಗಳ್ನs ಮದ್ವಿಮಾಡಿಕೊಂಡೀನ್ರಿ. ಏನ್ಕರೇರೀಯಪ್ಪಾ ನಿಮ್ಮಾತು "

" ನಾಲ್ಕು ವರ್ಷಗಳ ಹಿಂದೆ ವಿಷ......."

" ಈ ಮಾತಂತೂ ತೀರಾಕರೀ-ಯಪ್ಪಾ, ಕೆಟ್ಟ ಕರೀ ಹಾವು ಕಚ್ಚಿತ್ರಿ. ಕರೇರಿ ವಿಷಾ....ಆತ್ರಿ ಕರೇರೀ ಕಡೆ ! "

" ಶ್ರೀಮಂತರ ಮನೆಯವರ ಸಂಬಂಧ.. .. "

"ಅದೇ ಇಷ್ಟು ನೆಂಟಸ್ಕ್ಯಾಗ ಒಗಸ್ತೈತ್ರಿ ನಿಮ್ಮನ್ನ ಕರೀವ್ರ ಐತಿ

" ನೀನು ಶ್ರೀಮಂತನಾಗುವಿ. ರಾಜನಂತೆ ಮೆರೆಯುವಿ ಸುಖಿ ಯಾಗುವಿ. ನಾಲ್ಕು ಮಕ್ಕಳು."

" ಈ ಮಾತ ಮಾತ್ರ ನುಡಿಯೋಡ್ರಿ "

" ಏಕೆ ? "

" ಕೂನೀ ಆರೋಪೈತ್ರಿ ನನಮ್ಯಾಗ! ಇನ್ನ ಎಷ್ಟುದಿನಾ ನೋಡ್ರಿ ಏನನ್ನೂದು ತಿಳಿಯೂತೈತಿ ಶ್ರೀಮಂತನ್ನ ಕೊಂದೆನ್ನ ನ ನಾ ... ಸುರಿಗಾಲು ಸಾಚ್ಚೀನ ಹಾಕ್ರಿ- ಅಂವನ್ಯಾಗs ಯ್ಯಾಂಗ ದಸ್ತನಾಗ್ತೀರಿ ನಿಮ್ಮಾತ ? "

" ನಿನ್ನ ಆರೋಪ ಸಿದ್ಧವಾಗುವುದೇ ಇಲ್ಲ ನೋಡು. ನಿನ್ನ ಬಿಡು ಗಡೆಯೇ ಆಗುತ್ತದೆ. "

"ಅಷ್ಟಾದ್ರs ಏನಹೇಳ್ತೀ ಎಪ್ಪಾ .. ಮೂರು ಮೂರ್ತಿ ಕ್ರೀ ನಿನ್ನಾಯಾಗ ಹಾಕ್ಕೇನಿ !! " ವಿಕ್ರಮನ ಪಾದಗಳಿಗೆ ಹಣೆ ಹಚ್ಚಿ, ಧೂಳಿಯನ್ನು ಕಣ್ಣಿಗೆ, ಮೈಕೈಗೆ ಸವರಿಕೊಂಡು ಕೈದಿಯಾಗಿದ್ದ ತಿಪ್ಪಬದಿ ಕುಳಿತವನಿಗೆ ವಿಕ್ರಮನ ವ್ಯಕ್ತಿತ್ವವನ್ನು ವರ್ಣಿಸಿದ. ಮಹಾಜ್ಞಾನಿ, ಬುದ್ಧಿವಂತನೆಂದು ಪ್ರಚುರಪಡಿಸಿದ. ತನ್ನ ಬಿಡುಗಡೆ ಆಗಿ, ಶ್ರೀಮಂತ ನಾಗಿ ಲೋಲಾಡುತ್ತಲಿರುವ ಆಂತರಿಕ ಆನಂದದಿಂದ, ಪರಿಚಿತ ಕೈದಿಗಳಿ ಗೆಲ್ಲ ವಾರ್ತೆಯ ವರದಿ ಮಾಡಿದ ಪೋಲೀಸರ ಪರಿವೆ ಇಲ್ಲದೇ ಕೈದಿಗಳು, ಓಡಿ ನೆರೆದರು ವಿಕ್ರಮನ ಸುತ್ತು. ಜೇಲೊಜ್ಜ ಕೈದಿಯ ಹಸ್ತ ವಿಕ್ರಮನ ಕೈಯಲ್ಲಿತ್ತು. ನೆರೆದ ಕೈದಿಗಳೆಲ್ಲ ಕೈಚಾಚಿ, 'ನನ್ನದು ನೋಡಿ, ನನ್ನದು ಮೊದಲು ನೋಡಿ ' ಎಂದು ಕೋಲಾಹಲ ಎಬ್ಬಿಸಿದರು. ವಿಕ್ರಮನು

ಎಲ್ಲರಮೂ ನೋಡಿ ಹೇಳುವೆ' ಎಂದು ಸಮಾಧಾನಗೊಳಿಸುತ್ತಲಿದ್ದ. ವಿಕ್ರಮನ ಹೇಳಿಕೆಗೆ ತಲೆದೂಗುತ್ತಲಿದ್ದರು. 'ನಿಜ, ಸತ್ಯ, ಹೌದು' ಎಂದು ಸಂತೋಷ ಪ್ರದರ್ಶಿಸುತ್ತಲಿದ್ದರು.

"ಚೆಲುವ ಹೆಂಡತಿದೊರೆಯುವಳು" ಬೇರೊಬ್ಬ ಕೈದಿಯ ಕೈಪ-ರೀಕ್ಷೆ ಪ್ರಾರಂಭವಾಯಿ

"ಹೂಂ ... .."

"ನಿನ್ನ ತಂದೆಯವರ ಆಸ್ತಿ-ಪಾಸ್ತಿಯನ್ನು ಬೇರೆಯವರು ಎತ್ತಿ-ಹಾಳು ಮಾಡಿದ್ದಾರೆ"

"ಹೂಂ ... ....

"ನಿನ್ನ ಬಾಲ್ಯವೆಲ್ಲ ರೋಗದಿಂದಲೇ ಕಳೆದಿವೆ"

'ಹೂಂ .... ."

"ನೀನು ಎಲ್ಲರನ್ನು ನಂಬುವಿ. ಅವರಿಂದ ಕೇಡಿದೆ"

"ಹೂಂ .... ..."

"ನೀನು ದತ್ತಕಮಗನಾಗುವ ಯೋಗವಿದೆ"

"ಹೂಂ ... ."

"ನಿನ್ನ ಸುತ್ತಲೂ ವೈರಿಗಳಿದ್ದಾರೆ.'" ಕೊಲೆ ಮಾಡಲ, ವಿಷ ಕುಡಿಸಲು ಯತ್ನಿಸುತ್ತಾರೆ."

"ಹೂಂ .... . "

"ಒಬ್ಬ ಹೆಣ್ಣುಮಗಳು ನೀನು ಸಾಯುವ ವರೆಗೂ"

"ಹೇಣ್ತೀನs ಏನ್ರೀ ಮತ್ತs ? ...."

"ಅಲ್ಲ. ಬೇರೆಯವಳು."

"ಮುಂಪೇನೈತಿ ಹೇಳ್ರಿ!? "

"ಮಾನ ಮರ್ಯಾದೆ-ಸುಖ-ಸಂಪತ್ತು

"ಒಂದ್ನಾಕು ಕರೇ ಒಂದ್ನಾಕು ಸುಳ್ಳೂ ಆದೂ ನೋಡ್ರಿ."

"ಏನು ?"

" ಈಗ ನನ ಮದಿವಿ ಆಗೇತ್ರಿ."

" ಇಲ್ಲವೆಂದೆನೆ ನಾನು ? "

" ಹೌದ್ರೀ ಲಕ್ತ ತುಂಡಾಗ್ಯಾಳ್ರೀ ... ಇನ್ನೊಂದು ಮದಿವಿಹಾಂಗಾಕ್ಕೈತಿ. ನಾಬಡವಾSS . "

" ನಿನ್ನ ಹೆಂಡತಿ ಸ-ತ್ತಿ-ದ್ದಾ-ಳೆ ! "

ಕೈತೋರಿದ ಕೈದಿ ನಕ್ಕ. ವಿಕ್ರಮನು ಸುಳ್ಳಿನ ಸುರಳಿಯುವನೆಂದ. ನಿಜ ಹೇಳಲು ಬರುವುದಿಲ್ಲವೆಂದು ಎದುರೇ ಹೇಳಿದ ವಿಕ್ರಮನಿಗೆ ಕೈ ತೋರಿಸಿ ಕೇಳಲು ಆತುರರಿದ್ದವರು, ವಿಕ್ರಮನ ಹೇಳಿಕೆ ಸತ್ಯವೆಂದರು. ತನ್ನ ಹೆಂಡತಿ ಚೆನ್ನಾಗಿರುವ ಕಾಗದ, ನಿನ್ನಿನ ದಿವಸವೇ ಕೈಸೇರಿದೆ. ವಿಕ್ರಮನು ಸತ್ತಿರುವಳೆಂದು ಹೇಳುವ. ನಕ್ಕನಪ್ಪ. ಇವನು ಸಾಮುದ್ರಿಕ ಶಾಸ್ತ್ರ ತಿಳಿದವನೇ ಅಲ್ಲ ವೇಷ ಕಟ್ಟಿದ್ದಾನೆ. ಎಂದು ಪ್ರಚಾರೋಪನ್ಯಾಸಗಳನ್ನೇ ಅಲ್ಲಿ-ಇಲ್ಲ ಕುಳಿತು ಏರ್ಪಡಿಸಿದ. ಏನಾದರೂ ಅವನ ಮಾತಿಗೆ ಜನ, ಕಿವಿಗೊಡಲಿಲ್ಲ. ಕೈತೋರಿ ಕೇಳುತ್ತಲಿದ್ದರು. ವಿಕ್ರಮನ ಹೇಳಿಕೆಯಿಂದ ತೃಪ್ತರಾಗಿ, ನನಗೆ ಹೀಗೆ ಹೇಳಿದ, ಹಾಗ ಹೇಳಿದ ಬಹಳ ಚೆನ್ನಾ ಹೇಳುವ. ಒಂದಿನವನ್ನು ಸರಿಯಾಗಿ ಹೇಳಿದ ಕೊಡಲಿಯ ಪೆಟ್ಟು ಕುಡುಗೋಲಿನ ಕೊಯ್ತ, ಮನೆಯ ಜಗಳ, ಇರುವ ಬೇನೆ ಮೊದಲಾಗಿ ಹೇಳಿದನೆಂದು ಸಂತೋಷದ ಪರಮಾವಧಿ ಅವರಿಗೆ.

ಪೋಲೀಸನು ಗದ್ದಲದ ಕಾರಣ ತಿಳಿಯಲು ಮೆಲ್ಲನೆ ಬಂದ. ಗುಣಿಗೆ ಅಪ್ಪಣೆ ವಿಧಿಸಿದ್ದ ಕಂಡವರನ್ನು ಜಡಿಯಲು. ಗುಂಪಿನ ಸಂದಿಯಿಂದ ನಡೆದುದೇನು? ಎಂದು ಹಣಿಕಿದ. ಗುಣಿ ಕೆಂಗಳಿಯಿತು ಎಲ್ಲರನ್ನು ಚೆದರಿಸಿ, ಸಾಲಿನಲ್ಲಿ ಕೂಡ್ರಿಸಿ, ವಿಕ್ರಮನೆದುರು 'ಶರಣ್ರೀ ಸ್ವಾಮಿ' ಎನ್ನುತ್ತ ಕುಳಿತ. ವಿಕ್ರಮನು ಪ್ರತಿವಂದನೆ ಸಮರ್ಪಿಸಿ ಕುಳ್ಳಿರಲು ಅನುವು ಮಾಡಿಕೊಟ್ಟ. ಪೋಲೀಸನು ತನ್ನ ಹಸ್ತವನ್ನು ವಸ್ತ್ರದಿಂದ ಒರೆಯಿಸಿಕೊಂಡು ವಿಕ್ರಮನ ಕೈಯಲ್ಲಿರಿಸಿದ. ವಿಕ್ರಮನು ನೋಡಿದ. ಎಡದ ಕೈಯರೇಖೆಗಳನ್ನು ಕಂಡ. ಹೊರಳಿಸಿ ನೋಡಿದ. ರೇಖೆಗಳು ಯಾವ್ಯಾ

ಪರ್ವಕ್ಕೆ ತಟ್ಟಿನೆ, ಶನಿ-ಚಂದ್ರ, ಗುರುಪರ್ವಗಳನ್ನು ಸೂಕ್ಷ್ಮವಾಗಿ ಅವ-ಲೋಕಿಸಿದ. ಶುಕ್ರ ಪರ್ವತ ನಿಮ್ನವಾಗಿದ್ದುದರಿಂದ, ಗುಹುಪರ್ವ, ಅದರ ಮೇಲಿನ ರೇಖೆಗಳನ್ನು ಹತ್ತಾರು ಸಲ ನೋಡಿದ.

" ಹೇಳ್ರೀ ಸ್ವಾಮಿ.... ಬಲೆಕಷ್ಟಪಟ್ಟೇನ್ರೀ "

" ಹೌದು. ಎಲ್ಲ ರೀತಿಯಿಂದ,ಎಲ್ಲರಿಂದ. . "

" ತ್ರಿಸ್ತ್ರಾಳ್ಯಾದ್ದಕ್ಕsನಾ ನ ಯ್ಬೇಕಂತ ಮಾಡಿದ್ದೆ

" ಆತ್ಮಹತ್ಯಾ ಪ್ರಸಂಗ ಎರಡು ಕಳೆದಿವೆ."

" ಅಗದೀ ಬರೋಬ್ಬರೀ ಅದ ನಿಮ್ಮಾತು ಏನ್ರೀ ಜೀವಾ ಕಚವಾಸಿ ಹೋತು. ಬದಕೂ ಅನ್ನೋದು ಜಂಕ್ಯಾಗ್ರಿ ನನ್ಭಾಗಕ್ಕ "

" ಇನ್ನು ಸುಖವಿದೆ. ಒಳ್ಳೆಯಕಾಲ ಕಾಣುತ್ತಿದೆ "

" ಏನೇನ್ಮತಿ ಹೇಳ್ರಿ. ದೇವರು ಬಂಧ್ಹಾಂಗ್ಬಂದೀರಿ! "

" ಗುಪ್ತವಾಗಿ ಹೇಳುವ ವಿಷಯಗಳಿವೆ"

" ಇಷ್ಟ್ರಂದ್ಯಾಗ ಬ್ಯಾಡಂತೀರ್ಯಾ? ಬಿಡ್ರೀ-ಬ್ಯಾರೇಕಡೇ ಹೋಗಿ ಕೂಡ್ರೂಣು. ಎಲ್ಲಾನೂ ಹೇಳಿಬಿಡ್ರಿ "

" ಮುಂದ್ಯಾಗs ನಟ್ಗ ಲ್ಲಾs ಅಂತs....ಹೇ೯ ಅಂದ್ರ ಹೇಳ್ತಿನಿ...."

" ಬ್ಯಾಡ್ರಿ- ನಿಮ್ಹೇಳಿಧ್ಹಾಂಗೇ ಮಾಡೂಣು".ಎಂದವನೇ ಪೋಲಿಸ ಎದ್ದ. ಅಧಿಕಾರ ತೋರುತ್ತ ಗುಣಿ ಬೀಸಿ, ಕಂಡಕಂಡವರನ್ನು ಒದ್ದು, ಗುಣಿಯಿಂದ ಜಡಿದು ನಡೆದ. ಕೈತೋರಿ ಭವಿಷ್ಯ ಕೇಳಲು ಅಪ್ಪಣೆ ದಯಪಾಲಿಸಲು ಬೇಡಿದರು. ಅಡ್ಡಬಿದ್ದರು. 'ಆಗಲಿ, ಗದ್ದಲು ಮಾಡದೇ ಒಬ್ಬೊಬ್ಬರಾಗಿ ಹೋಗಿರಿ' ಎಂದು ತಿಳಿಸಿದನು ಪೋಲೀಸ, ವಿಕ್ರಮ ಶಾಸ್ತ್ರಿಯು ಆಢ್ಯತೆಯಿಂದ ಕುಳಿತು ಕೈದಿಗಳ ಭೂತ,ಭವಿಷ್ಯವನ್ನು ಕಥಿಸತೊಡಗಿದ. ಕೈದಿಗಳು ತಂಡತಂಡವಾಗಿ, ಶಾಸ್ತ್ರಿಗಳ ಕಡೆಗೆ ಬರತೊಡಗಿದರು. ಕೈಮುಗಿದರು. ಕಾಲಮಣ್ಣನ್ನು ತಲೆಗೆ ಸವರಿಸಿಕೊಂಡರು, ಸಾಷ್ಟಾಂಗ ನಮಸ್ಕಾರ ನೀಡಿ ಕೈತೋರಿಸುತ್ತಲಿದ್ದರು. ಶಾಸ್ತ್ರಿಗಳಿಗೆ ಬಿಸಿಲಬಾಧೆ ಆದೀತೆಂದು, ರುಂಬಾಲನ್ನು ಎತ್ತಿಹಿಡಿದು ಮರೆಮಾಡಿದರು.

ಗಹ್ದಲವಮಾಡಿವರೆ ಕೆಟ್ಟೀತೆಂದು ಶಾಂತರಾಗಲು ಬಿನ್ನವಿಸುತ್ತಲಿದ್ದರು ಹುಚ್ಚಪ್ಪನವರ ಕಾಂಗ್ರೆಸ್ಸಿನ ಕಥೆ ಕೇಳುವವರಾರು? ವಿಕ್ರಮ ಶಾಸ್ತ್ರಿ-ಗಳು ಭವಿಷ್ಯಹೇಳುತ್ತಲಿರುವಾಗ ಕಾಂಗ್ರೆಸ್ಸಕಥೆ ರುಚಿಸೀತೆ? ನಾಮುಂದೆ ತಾಮುಂದೆ ಎಂದು, ಕೈದಿಗಳ ಕೈಗಳು ಶಾಸ್ತ್ರಿಗಳನ್ನು ಮುತ್ತಿದುವು.

"ದೇವರಂತಹ ಮನುಷ್ಯ' ಎಳ್ಳಷ್ಟೂ ಗರ್ವವಿಲ್ಲ, 'ದೇವಿ'ಯ ಭಕ್ತನಿರಬೇಕು, ಹಸ್ತಸಾಮುದ್ರಿಕನೆಂಬುದು ಸುಳ್ಳು, ದೇವರ ಹೇಳಿಕೆ. ಮೈತುಂಬುತ್ತದೆ, ಆಗ ಪಟ ಪಟ ಆಣೆಕಲ್ಲಿನ ಮಳೆ ಸುರಿದಂತೆ, ಮಾತು ಗಳು ಹೊರಬರುವವು ಹನ್ನೆರಡು ವರುಷ, ಕಾಶಿಯ ಮಹಾಪಂಡಿತರಿಂದ ಕಲಿತಿದ್ದಾರೆ. ಕನ್ನಡನಾಡಿನ ಹಳ್ಳಿಯಮನೆ ಮನೆಯಲ್ಲಿ ಶಾಸ್ತ್ರಿಗಳ ಭವಿಷ್ಯಮೆಚ್ಚಿದೆ. ವಿಖ್ಯಾತರು, ಕೀರ್ತಿಶಾಲಿಗಳು, ಅನೇಕ ರೀತಿಯಿಂದ ಘನವಾಗಿ ಜೇಲಿನ ಜನ ಮಾತನಾಡಿಕೊಳ್ಳತೊಡಗಿದರು ಕೇಳಿದುದಕ್ಕೆ ದಕ್ಷಿಣೆ ಕೊಡಲು ಸಾಮರ್ಥ್ಯವಿಲ್ಲದುದರಿಂದ, ಮರುಗಿ ಶರಣು ಸುವರ್ಣ ಪತ್ರ ನೀಡಿದರು. ಹೊರಗೆ ಇದ್ದುದಾಗಿದ್ದರೆ ಭೂರಿದಕ್ಷಿಣೆ, ಧನ, ವಾಹನ, ವಸನ, ಭೂಮಿಗಳನ್ನು ದಾನವಾಗಿ ಕೊಡಬಹುದೆಂದರು. ಶಾಸ್ತ್ರಿಗಳ ಯೋಗ್ಯತೆಗೆ. ಒಬ್ಬ ಕೈದಿ ಮಾತ್ರ ಪ್ರಚಾರಕ ಕಚೇರಿಯನ್ನು ಮುಚ್ಚಲೇ ಬೇಕಾಯಿತು. ಎಲ್ಲರು ಭಟರಾದಾಗ, ಅವನೊಬ್ಬನೇ ಏನು ಮಾಡು ವಂತಿದೆ. ಹೆಂಡತಿಯು ಜೀವಿಸಿರುವಾಗ ಸತ್ತನೆಂದು ಹೇಳುವವನ ಮಾತನ್ನು ನಂಬುವುದು ಹೇಗೆ! ಎಲ್ಲರೂ ಮರುಳಿಸಿದ್ದರಿಂದ, ತಿರಸ್ಕೃ ನಿಸಿದ. ಭವಿಷ್ಯ ಕಥನ ಕಾರ್ಯಾಲಯದ ಕಲಸ, ಸಾಗಮವಾಗಿ ನಾಗಿ ದ್ದಿತು. ಶಾಸ್ತ್ರಿಗಳು, ಪ್ರಶಸ್ತಿಪತ್ರಿಕ ಪಡೆಯುತ್ತಲಿದ್ದರು. ಪೋಲೀಸನ ಅಪ್ಪಣೆಯೇ ದೊರೆತಿದೆ. ಕೈದಿಗಳು ಕೇಳಿ ಕೇಳಿ, ನಾಲಿಸಲ್ಲಿ ಕಲಿತು, 'ಮಹಾನುಭಾವರಪ್ಪ' ಎಂದರು. 'ನೀರುಕುಡಿದು ಬರುವೆ' ಎಂದರೆ, ಶಾಸ್ತ್ರಿಗಳಿಗೆ ತಮ್ಮ ಕೈಯಿಂದಲೇ ನೀರ್ಕುಡಿಸಿದರು. ಅವರ ಸೇವೆಮಾಡಿ ದರೆ ಮಹತ್ತರಪುಣ್ಯ ಬರುವುದೆಂದುಕೊಂಡವರೂ ಅಲ್ಲಿ ಇದ್ದರು. ಪೋಲಿ ಸನು ಓಡಿ ಬರುತ್ತಲಿದ್ದ. ಕೈದಿಗಳು ಬೆದರಿ ನಾಲಿನಲ್ಲಿ ಜರೆತರು. ಮುಂದಿನ ಭವಿಷ್ಯ ತಿಳಿಯುವದಕ್ಕೆ ಇಂಪೇ ನಾಯಬೇಕಾದೀತೆಂದು

ಮೆಲ್ಲನೆ ಜಾರಿದರು. ಓಡಿಬಂದ ಪೋಲೀಸನು ವಿಕ್ರಮಶಾಸ್ತ್ರಿಗಳೆದುರು ನಿಂತು ಶಿಸ್ತಿನ ಸಲಾಂ ನೀಡಿ ಹೇಳಿದ.

" ಜಮಾದಾರ ಸಾಹೇಬ್ರು ಕರೀತಾರ್ರಿ ".

" ನನ್ನನ್ನೇ ?" ಶಾಸ್ತ್ರಿಗಳು ಕೇಳಿದರು.

" ಅತ್ಲಾಗ ಆಫೀಸ್ನಾಗ ಕೂತಾರ್ರಿ. ಕರಕೊಂಡ್ಬಾ ಅಂದರ್ರಿ "

" ನಡೆ ಹೋಗೋಣ" ಎಂದು ನಡೆದ ಪೋಲೀಸನ ಮುಂದೆ, ಶಾಸ್ತ್ರಿಗಳು ಹಿಂದೆ. ಶಾಸ್ತ್ರಿಗಳು ಬೆದರಿದರು. ಬೆಳಗಿನ ಪ್ರಸಾದದ ಸ್ಮರಣೆ ಆಯಿತು. ಜಮಾದಾರರು ಕರೆಯುವುದರ ಕಾರಣವೇನು ? ಭವಿಷ್ಯ ಕೇಳುತ್ತಿದ್ದಾರೋ ? ಗದ್ದಲವಾಯಿತೆಂದೋ ? ವಿತರ್ಕ – ' ಸುಮ್ಮನೇ ಕೂಡ್ರುಬಾರದೆ ನಾನು, ಮತ್ತೆ ಪ್ರಹಾರಗಳಿಗೆ ಬಲಿಯಾಗಬೇಕು. ವಿಚಾರಿಸುತ್ತ ಅಧೈರ್ಯ ಮನಸ್ಕರಾಗಿ ನಡೆದರು.

ಶಾಸ್ತ್ರಿಗಳ ಬರುವಿಕೆ ಕಾಣುತ್ತಲೇ ಜಮಾದಾರರು, ಎದ್ದು ಮುಂದೆ ಬಂದರು. ಮಿಲಿಟರಿ ನಮಸ್ಕಾರ ನೀಡಿದರು. ಎರಡೂ ಕೈ ಹಿಡಿದು ಕುರ್ಚಿಯಲ್ಲಿ ಕುಳ್ಳಿರಿಸಿದರು. ವಿಕ್ರಮನು, ಶಾಸ್ತ್ರಿಯೂ ಆದ ಗರ್ವದಿಂದ ಕುಳಿತ. ಜಮಾದಾರರು ಪೋಲೀಸನ ಎಡಬಲಕ್ಕೆ ನಿಂತರು. ಫಲಹಾರದ ತಟ್ಟೆಯೂ ಪ್ರಕಟವಾಗಬೇಕೆ ? 'ಚಹಾಪಾನಮಾಡದವನ ಜನ್ಮವ್ಯರ್ಥವೇ ಸರಿ ' ಎಂದು ಕವಿಗಳು ಹಾಡಿದ ಮೇಲೆ ಚಹವಿಲ್ಲದೇ ಸಾಗಿತೆ ? ಆಗ್ರಹ ! ಅತ್ಯಾಗ್ರಹದ ಸುರಿಮಳೆ ಶಾಸ್ತ್ರಿಗಳಿಗೆ. ವಿಕ್ರಮನಿಗೆ ತಂಬಾಕೂ ಸಿಕ್ಕಿತು ಎಂದ ಮೇಲೆ ಕೇಳುವುದೇ ? ಬುದ್ಧಿ ಸೂಕ್ಷ್ಮಡಿ ಚುರುಕಾಯಿತು.

" ಕ್ಷಮಿಸಿ ಶಾಸ್ತ್ರಿಗಳೇ "

" ದೇವರು ಕ್ಷಮಿಸುವವನು ಶಾಸ್ತ್ರಿಗಳೇ ! "

" ತಾವೇ ದೇವರು ! ಏನೋ ದೇಶಭಕ್ತಿಯಿಂದೆ ಬಂದಿರುವಿರಿ. ನಿಮ್ಮಂತಹ ದೇವ ಮನುಷ್ಯರೂ ಜೇಲಿಗೆ ಬಂದ ಮೇಲೆ ಸ್ವರಾಜ್ಯ ದೊರೆಯುವುದು. ನಿಮ್ಮನ್ನು ಬೆಳಗಿನಲ್ಲಿ ಹೊಡೆದೆ. ತಪ್ಪಾಗಿದೆ. ಕ್ಷಮಿಸಬೇಕು.

" ತಪ್ಪು ಯಾರದೂ ಇಲ್ಲ. ಹೊಡಿಸಿದವನೂ ಅವನೇ, ಹೊಡೆದ-ವನೂ ಅವನೆ! ಎಲ್ಲರಲ್ಲಿ ನಿಂತು ಕೆಲಸಮಾಡಿಸುತ್ತಾನೆ ಪರಮೇಶ್ವರ. ನಾವೆಲ್ಲ ನಿಮಿತ್ತಮಾತ್ರರು ಜಮಾದಾರ ಸಾಹೇಬ. "

" ಎಂತಹ ಮಾತು! ಆಹಾಹಾ! ಶಾಸ್ತ್ರಿಗಳೇ ಆನಂದವಾಗು-ವಂತೆ ಹೇಳಿದಿರಿ. ನೀವು ಜನರು ಹೇಳುವಂತೆ, ದೇವತಾ ಮನುಷ್ಯರು"

" ನೀವೂ ದೇವರು ಸಾಹೇಬರೇ...."

" ಅಲ್ಲಾ ನಿಮ್ಮನ್ನು ಹೊಡೆದೆ. ಕೋಪಗೊಳ್ಳಬೇಡಿ. ನನ್ನ ಮೇಲೆ ಕರುಣೆ ತೋರಿರಿ. ನನಗೂ ವಯಸ್ಸಾಗಿದೆ. ದಯಮಾಡಿ ಹೇಳಬೇಕು ಹೊಡೆದೆನೆಂದು ಕೋಪಿಸಬಾರದು. "

" ಇಲ್ಲಾ ಜಮಾದಾರರೇ - ಭಗವಂತನ ಇಚ್ಛೆ, ನನಗೆ ಜೇಗಿನಲ್ಲಿ ಪೆಟ್ಟು ಬೀಳಬೇಕೆಂದಿದ್ದಿತು. ನಿಮ್ಮಲ್ಲಿನಿಂತು ಪೆಟ್ಟು ಹಾಕಿಸಿದ. ಅವನ ಇಚ್ಛೆಯಂತೆ ಚತುರ್ದಶಲೋಕಗಳು ತಿರುಗುತ್ತಿವೆ ಆಡಿ, ಹಾಗಿ, ನಕ್ಕು ನಲಿದು, ಸಾಯುತ್ತಿವೆ ನಾನು ಮಾಡುತ್ತೇನೆ ಎನ್ನುವ ಸ್ವಾತಂತ್ರ್ಯವು ಜೀವನಿಗೆ ಇಲ್ಲವೇ ಇಲ್ಲ. "

"ಶಾಸ್ತ್ರಿಗಳೇ ಇವು ಅಮೃತದ ಮಾತು ನನ್ನಮೇಲೆ ಕೃಪೆ ಮಾಡಿರಿ. ದೈವದಲ್ಲಿ ಏನಿದೆ ಎಂಬುದನ್ನು ಹೇಳ ಬಿಡಿರಿ " ಎಂದವನೇ ಪಾದಧೂಳಿ-ಯನ್ನು ಕೊಂಡ. ಪೋಲೀಸನಿಗೆ ಹೊರಹೊರಡಲು ಅಪ್ಪಣೆ ಇತ್ತ. ಬಾಗಿಲು ಮುಚ್ಚಿಕೊಂಡು—

" ತಮ್ಮ ಹೆಸರೇನು ಶಾಸ್ತ್ರಿಗಳೇ ?

" ವಿಕ್ರಮ "

" ವಿಕ್ರಮಶಾಸ್ತ್ರಿಗಳು ! "

# ಬ್ರಿಟಿಶ್-ಪ್ರಜೆಯಲ್ಲ !!

ಶಾಸ್ತ್ರಿಗಳು ಜಮಾದಾರರ ಆಫೀಸಿನಿಂದ, ಹೊರಬಿದ್ದರು. ಶಾಸ್ತ್ರಿಗಳ ಮುಂದೆ ಒಬ್ಬ ಕೈದಿ ಗಂಟನ್ನು ಹೊತ್ತು ನಡೆದಿದ್ದ. ಶಾಸ್ತ್ರಿಗಳನ್ನು ಬೆಂಬತ್ತಿ ಜಮಾದಾರರೂ ಬರುತ್ತಲಿದ್ದರು. ಜಮಾದಾರರು, ಶಾಸ್ತ್ರಿಗಳ ಹೇಳಿಕೆಯಿಂದ ತೃಪ್ತರಾದಂತಿತ್ತು. ಮಾನ, ಮನ್ನಣೆಯೊಂದಿಗೆ ಬೀಳ್ಕೊಟ್ಟರು. ಜಮಾದಾರರು ಜೇಲಿನ ಬದಿಯಲ್ಲಿ ನಿಂತು, ವಿಕ್ರಮಶಾಸ್ತ್ರಿಗಳಿಂದ ನಿರೋಪಕೊಂಡು ನಡೆದರು. ಶಾಸ್ತ್ರಿಗಳನ್ನು ಕಾವಲರೆಲ್ಲ ಆದರದಿಂದ ಬರಮಾಡಿಕೊಂಡರು. ಕೈದಿಗಳೆಲ್ಲ ಕೊಠಡಿಯನ್ನು ಅಲಂಕರಿಸಿದ್ದರು. ಸಂಜೆಯ ರೊಟ್ಟಿಗಾದರೂ ಶಾಸ್ತ್ರಿಗಳು ಬಂದೇ ಬರುವರು. ತಮ್ಮ ವಿಧಿಲಿಖಿತ ಓದಿಸಬೇಕೆಂದವರು ನಿರಾಶೆಯಿಂದ, ಕೊಠಡಿಯಲ್ಲಿ

ಕುಳಿತಿದ್ದರು. ನಾಳಿನ ದಿನ ಶಾಸ್ತ್ರಿಗಳ ಬದಿಯಲ್ಲಿಯೇ ಕುಳಿತು ಕೇಳಲೇ ಬೇಕೆಂದು ಎಣಿಕೆ ಹಾಕುತ್ತಲಿದ್ದರು. ಶಾಸ್ತ್ರಿಗಳೊಡನೆ ಕೈದಿ ಹೊತ್ತಂದ ಗಂಟೊ ಜೇಲಿನ್ನು ಕಂಡರು. ಹುಚ್ಚಪ್ಪನವರಂತೆ ಕೈದಿಗಳೆಲ್ಲ ಸ್ವಾಗತ ಕೋರಿದರು. 'ಗಂಟಿನಲ್ಲಿ ಏನಿದೆ? ಕೇಳಿದರೆ ಕೋಪಗೊಂಡರೇ? ಎಂದು ಕುತೂಹಲಬಂದ ಗಂಟನ್ನೇ ನೋಡುತ್ತಲಿದ್ದ. 'ಮನೆಯವರು, ಹಾಸಿಗೆ ಹೊದಿಕೆ ಕಳಿಸಿರಬೇಕು' ಎಂದು ಉತ್ತರ ಬರೆದ ಬೇರೊಬ್ಬ. ಶಾಸ್ತ್ರಿಗಳ ಶಯನದ ಸಿದ್ಧತೆ, ಕೈದಿಗಳು ಮುಂದಾಗಿ ಸಿದ್ಧಪಡಿಸಿದ್ದರು. ಗಂಟನ್ನು ಬದಿಯಲ್ಲಿರಿಸಿ, ಶಾಸ್ತ್ರಿಗಳು ಮಾತಿಗೆ ಕುಳಿತರು. 'ಶಾಸ್ತ್ರಿಗಳಿಗೆ ಫಲದಕ್ಷಿಣೆ ಜಮಾದಾರರಿಂದ ಬರಬೇಕು. ಎಲ್ಲರೂ ನಿದ್ರಿಸಿದ ಮೇಲೆ ತಿನ್ನಲು ಬದಿಯಲ್ಲಿರಿಸಿಕೊಂಡಿರಬೇಕು 'ಕಳ್ಳಶಾಸ್ತ್ರಿ' ಎಂದು ಹಳಿದ ಒಬ್ಬ ಮನದಲ್ಲಿ. ಶಾಸ್ತ್ರಿಗಳ ಪ್ರವಚನ ಪ್ರಾರಂಭವಾಯಿತು. ಹುಚ್ಚಪ್ಪನವರು ಶಾಸ್ತ್ರಿಗಳಿಗೆಂದು ಬೇಡಿ ತಂದ ರೊಟ್ಟಿ-ರಸಾಯನವನ್ನು ಮುಂದಿರಿಸಿ, 'ನೈವೇದ್ಯವಾಗಲಿ' ಎಂದರು. ಜಮಾದಾರರ ಆತಿಥ್ಯವು ಅಪಚನವಾಗುವಷ್ಟಾಗಿದೆ ಎಂಬುದು ಹುಚ್ಚಪ್ಪನವರಿಗೆ ಹೇಗೆ ತಿಳಿಯಬೇಕು? ಶಾಸ್ತ್ರಿಗಳು, ಜಮಾದಾರರಿಂದ ಅಶನದ ಆಶೆ ತಪ್ಪಿದ ಎಂದು ಒಪ್ಪಿ, ನಡೆದುದನ್ನೆಲ್ಲ ವಿವರಿಸಿದರು. ಗಂಟನ್ನು ಬಿಚ್ಚಿ, ಕತ್ತಲಲ್ಲಿಯೇ ಎದ್ದು, ಪ್ರಸಾದ ಹಂಚಿದರು. ಬಾಳೆಯ ಹಣ್ಣು! ಕಿತ್ತಳೆ! ದ್ರಾಕ್ಷೆ! ಅಂಜೂರ! ಬಾಯಿ ಚಪ್ಪರಿಸುತ್ತ ಕೈದಿಗಳು ತಿಂದರು. ವಿಕ್ರಮನಿಗೆ ಒಂದೇ 'ಕಿತ್ತಳೆ'! ಹಂಚಿದವನು ಹಲ್ಲು ಕಿರಿಯಲೇಬೇಕಷ್ಟೇ? ನಕ್ಕ! 'ಎಲ್ಲವನ್ನು ಬಕ್ಕರಿಸಿದರು ಮುಂಡೇ ಮಕ್ಕಳು' ಎಂದು ಮನದಲ್ಲಿ ನೊಂದು ನುಡಿದ, 'ಶಾಸ್ತ್ರಿಗಳಿಗೆ ಉಳಿಯಲೇ ಇಲ್ಲ' ವೆಂದು ಔಪಚಾರಿಕ ಮಾತನಾಡಿ, ಕೈದಿಗಳು ಗಬಗಬ ತಿಂದೇಬಿಟ್ಟರು. 'ನಿಮ್ಮ ಸಂತೋಷವೇ ನನ್ನ ಆತ್ಮಸಂತೋಷ, ನೀವು ತಿಂದು ತೃಪ್ತರಾದರೆ ಅಪರಿಮಿತ ಆನಂದ ನನಗೆ' ಎಂದು ಶಾಸ್ತ್ರಿಗಳು ವೇದಶಾಸ್ತ್ರಗಳ ಗಂಟನ್ನು ಜಾಡಿಸಿದರು.

ಶಾಸ್ತ್ರಿಗಳಿಗೆ ಪ್ರಾರ್ಥನಾ ಪತ್ರಿಕೆ ಸಮರ್ಪಿಸಿ, ನಾಳಿನ ದಿನ ಜೋಕ್ಷಿ ಮಾಡಲು ಬೇಡಿಕೊಂಡರು. ಶಾಸ್ತ್ರಿಗಳಿಗೆ ದಣುವೇ ಅಗಿತ್ತು. ನಿದ್ರಿಸಲು

ಯುತ್ತಿಸುವ ಕಾರಣವೇ ಇಲ್ಲ. ಗಾಢ ನಿದ್ರೆ ಆವರಿಸಿತು. ಕೈದಿಗಳು ಅನಿರ್ವಾಹವಾಗಿ ಹುಚ್ಚಪ್ಪನವರ ಮೊರೆಹೋದರು. ಸಮುತ್ಸಾಹವಾದಿಗಳಿಂದ ಮೇಲೆ ಸದಾ ಸಿದ್ಧರೇ ಬಡವರ ಸೇವೆಗೆ. ಪದ-ನಿವೇದಗಳ, ಮುಖಂಡರ ಅವರು ಸಲ್ಲಿಸಿದ ಅಪಾರ ಸೇವೆಯ ಕಥೆಗಳನ್ನು, ರಸಪೂರ್ಣವಾಗಿ ನಿವೇದಿಸುತ್ತಲಿದ್ದರು. ಕೇಳುತ್ತ ಕಣ್ಣು ಮುಚ್ಚಿದರು. ಒಬ್ಬೊಬ್ಬರು ಎಚ್ಚರಿರಲೇಬೇಕಾಯಿತು. 'ಹೂಂ-ಹೂಂ' ಎಂಬ ಶಬ್ದ ಹೊರಡದಿದ್ದಲ್ಲಿ, ಹೇಳಲು ಸ್ಫೂರ್ತಿಯೇ ಬರುತ್ತಲಿರಲಿಲ್ಲ ಹುಚ್ಚಪ್ಪನವರಿಗೆ. 'ಹೂಂ' ಎನ್ನುವವರು ಗಟ್ಟಿಗರಿದ್ದರೆ, ಬೆಳಗಿನ ವರೆಗೂ ಹೇಳಲು ಬಲ್ಲಿದರು ಹುಚ್ಚಪ್ಪನವರು. 'ಪಾಳ್ಯ' ಒಂದೆರಡು ಸಲ ವಿಕ್ರಮನನ್ನು ಎಚ್ಚರಿಸಲು ಯತ್ನಿಸಿದೆ. ಶಾಸ್ತ್ರಿಗಳು ಕನಸಿನ ಲೋಕದಲ್ಲಿದುದರಿಂದ, ಎಚ್ಚರಿಸುವ ಸಿಪಾಯರನ್ನೇ ಮುಂದೊಡ್ಡಿದೆ ದಸಗನಿದ್ರೆಯೇ ಬಾರದಾಗಲು, ಮತ್ತೆ ಪ್ರಯತ್ನಿಸಿದೆ. ಏಳಲೇ ಇಲ್ಲ ಶಾಸ್ತ್ರಿಗಳು. ಹುಚ್ಚಪ್ಪನವರೂ "ಹೂಂ' ಇಲ್ಲದುದರಿಂದ ಹೊರಳಿದರು

§ § § § § §

ಬೆಳಗಿನ ಗಂಜಿ ಸ್ನಾನ ಸಮಾರಂಭ ಸಾಗಿದಿತ್ತು. 'ಅಂಡರ ಟ್ರಾಯಲ್' ಕೈದಿಗಳ ಬಿಡುಗಡೆ, ಘಟಿಸುತ್ತಿರಲಿಲ್ಲ. ಜಮಾದಾರರೇ ಸಲಾಂ ಸಲ್ಲಿಸಿ ಹೋಗಿದ್ದರು ಶಾಸ್ತ್ರಿಗಳಿಗೆ. ಹೊಸ ಪ್ರಾಲೀನನೂ, ಶಾಸ್ತ್ರಿಗಳ ಭವಿಷ್ಯ ಬಯಸಿದ್ದ. ಶಾಸ್ತ್ರಿಗಳ ಪ್ರೀತಿ ಸಂಪಾದನೆಯ ಮಾರ್ಗವೆಂದರೆ ಕೈದಿಗಳನ್ನು, ಪೀಡಿಸದಿರುವುದು ಎಂಬುದನ್ನು ತಿಳಿದಿದ್ದ. ಕೈದಿಗಳು ಶಾಸ್ತ್ರಿಗಳಿಗೆ ವಿಶ್ರಾಂತಿಯನ್ನು ಪಡೆಯಗೊಳಿಸುತ್ತಲಿರಲಿಲ್ಲ. ಗದ್ದಲಾದರೂ ಸರತಿಯ ಸಿಪಾಯಿ ತಾಳ್ಮೆ ವಹಿಸಲೇಬೇಕಾಗಿದ್ದಿತು. ಶಾಸ್ತ್ರಿಗಳ ಕಾರ್ಯಾಲಯವು ಭರದಿಂದ ಸಾಂಗವಾಗುತ್ತಿತ್ತು. 'ಜೇಲರ ಜೇಲರ' ಎಂದು ಪೋಲೀಸರು ಅಲ್ಲಿ-ಇಲ್ಲಿ ಕೂಗಿದರು. ಸೀಟಿ ಊದಿದರು. ಬೆದರಿ ಕೈದಿಗಳು ಸಾಲಿನಲ್ಲಿ ಕುಳಿತರು. ಸಿಪಾಯಿಗಳು, ಕೈದಿಗಳನ್ನು ಬೆದರಿಸುತ್ತ, ಕಾರ್ಯಕೌಶಲ್ಯವನ್ನು ಜೇಲರನಿಗೆ ತೋರುತ್ತಿದ್ದರು. ಎಲ್ಲೆಲ್ಲಿಯೂ ಸ್ಮಶಾನ ಶಾಂತತೆ! ಜೇಲರ ಸಾಹೇಬರು 'ಜಮಾದಾರರ

ಪೋಲೀಸರ, ವಾರ್ಡರರ ಕುಲಕೋಟಿಯನ್ನು ಉದ್ಧಾರ ಮಾಡಿದರು ಗಡಗುಟ್ಟಿ ನಡುಗುತ್ತಿದ್ದರು. ಕೈದಿಗಳು ತಾನಿರುವಾಗ ಗದ್ದಲ ಮಾಡಿದುಹಕ್ಕೆ ಸರತಿಯ ಸಿಪಾಯಿಯೇ ಕಾರಣನೆಂದು, ಹೊಡೆದು, ಪಟ್ಟಾ, ಗುಣಿ ಡ್ರೆಸ್ಸನ್ನೇ ಕಸಿದು, ಹೊರಕ್ಕೆ ದಬ್ಬಿಸಿದ ಸೀಪಾಯಿಯು ಅಲ್ಬೊರೆದು ಅಳುವುದನ್ನು ಕೇಳಿ, ಕೈದಿಗಳು ಮುಮ್ಮಲ ಮರುಗಿದರು ಜಮಾದಾರರು ಮಾತನಾಡುವ ಸ್ಥಿತಿಯಲ್ಲಿ ಇರಲಿಲ್ಲ ಜೇಲರಸಿಗೆ ಬೆದರಿ, ಗಿಡಗಳೂ ಅಲುಗಾಡದೇ ನಿಂತಿದ್ದುವು. ಜೇಲರನ ಬಾಯಿಗೆ ತಡೆಯೇ ಇರಲಿಲ್ಲ. ಶಬ್ದಕೋಶಗಳಲ್ಲಿ ಆತರಹದ ಅಪಶಬ್ದಗಳು ಇರಲಿಕ್ಕಿಲ್ಲ. ನೇಯುವಲ್ಲಿ, ನೂಲು ಸರಿಪಡಿಸುವಲ್ಲ, ಜೇಲಿನಲ್ಲಿ ನೀರವತೆ ತುಂಬಿದ್ದಿತು.

ಜೇಲಿನಲ್ಲಿ ಹಣಿಕಿದರು, ಜೇಲರರು. ಅಲ್ಲಿಯೂ ತಪ್ಪು ಕಂಡಿತೇ! ಜಮಾದಾರರನ್ನು ಹಳಿದರೇ ! ಕೈದಿ ಸರಿಯಾಗಿ ನಿಂತಿಲ್ಲವೆಂದು, ಜೇಲುಗಳು ಹೊಲಸಿವೆ ಎಂದು, ಪೋಲೀಸರಲ್ಲಿ ಶಿಸ್ತುಕಾಯುವ ದಕ್ಷತೆ ಇಲ್ಲವೆಂದು, ಗಂಜಿಯು ಸರಿಯಾಗಿ ಕುದಿದಿಲ್ಲವೆಂದು, ನೂರೆಂಟು ಕಾರಗಳು ಜಮಾದಾರರನ್ನು ನುಗ್ಗಿದವು. ಮಾತಿಗೊಮ್ಮೆ ಸಲಾಮೆನ್ನುತ್ತ ಜಮಾದಾರನಿಂತ. 'ಅಂಡರ ಟ್ರಾಯಿಲ್' ನಾಲಿಗೆ ಜೇಲರನ ಸ್ವಾರಿ-ದಯಮಾಡಿಸಿತು. ಒಬ್ಬ ಕೈದಿಯ ಥಾಲೀಪಾಟನ್ನು ಜೇಲರನೇ ಕಸಿದುಕೊಂಡ. ಕರಕರ ಹಲ್ಲು ತಿಂದರು. ಜಮಾದಾರರಿಗೆ ಥಾಲಿಯಿಂದ ಏಟು ಬಿತ್ತೆಂದೇ ಕೈದಿಗಳು ತಿಳಿದರು. 'ನೋಡು, ನೋಡು' ಎಂದು ಮುಖಕ್ಕೆ ತಿವಿದರು. ಕೆಂಗಣ್ಣವರಾಗಿ ಥಾಲೀಪಾಟನ್ನು ಮತ್ತೆ ನೋಡಿದರು. ಕೈದಿ ತನ್ನ ಹೆಸರನ್ನು ಕೆತ್ತಿದ್ದ. **ರಾಷ್ಟ್ರಧ್ವಜದ** ಚಿತ್ರವನ್ನು ಬರೆದಿದ್ದ. **ವಂದೇಮಾತರಂ** ಎಂದು ಬರೆದು ಸುತ್ತಲೂ, ಸ್ವಸ್ತಿಕ ಸುಮಂಗಲ ರೇಖೆ ಎಳೆದಿದ್ದ. ಬ್ರಹ್ಮಾಂಡವೇ ಉರಿಯುವುದೆಂದು ಭಾನವಾಗಿರಬೇಕು ಜೇಲರರಿಗೆ. ಆವೇಶದಿಂದ ಕೈದಿಯನ್ನು ಎಳೆದರು. ಕೈಯಾರೇ ಥಾಲಿಯಿಂದ ತಲೆ ತಲೆ ಘಟ್ಟಿಸಿದರು. ಬೂಟಿನಿಂದ ಒದ್ದು ಉರುಳಿಸಿದರು. ಕೈದಿ ತಪ್ಪಾಯಿತೆಂದು ಕಾಲು ಹಿಡಿದು ಬೇಡಿಕೊಳ್ಳುತ್ತಿದ್ದ. ಒದ್ದು ದಣಿದು, ವೇಗವಾಗಿ ಹೊರಟರು, ಜಮಾದಾರರೂ

ಓಡಿದರು ಹಿಂದಿನಿಂದ. ಕೈದಿಯು ನೋವನ್ನು ತಾಳದೇ 'ಅಯ್ಯೋ' ಎಂದು ನರಳುತ್ತಲಿದ್ದ.

ನರತಿಯ ಸೀಪಾಯಿ ಓಡಿಬಂದ. 'ಪಕಡೋ ಥಾಲೀಪಾಟ. ಖಡ್ರಹೋ' ಎಂದು ಹುಕುಂ ಹೊರಡಿಸಿದ. ಕೈದಿಗಳೆಲ್ಲ ಥಾಲಿಪಾಟು-ಗಳನ್ನೆತ್ತಿ ನಿಂತರು. ವಾರ್ಡರರು, ಬೇರೆ ಸೀಪಾಯಿಗಳು ಓಡಿಬಂದರು. ವಂದೇ ಮಾತರಂ, ಕ್ವಿಟ್-ಇಂಡಿಯಾ ರಾಷ್ಟ್ರಧ್ವಜ, ಹೆಸರು, ಕಾಟುಗ ಳಿದ್ದ ಥಾಲಿಪಾಟುಗಳೆಲ್ಲ ಪೋಲಿಸರು ವಶವಾದುವು. ಥಾಲೀಪಾಟುಗಳ ಮೇಲೆ ಬರೆದ ಕೈದಿಗಳು, ಜೇಲರನ ಸಂದರ್ಶನ ಸುಖಪ್ರಾಪ್ತಿಗಾಗಿ ದುಗುಡ ಮನಸ್ಸಿನಿಂದ ಪ್ರಯಾಣ ಬೆಳಸಿದರು. ಬರೆಯದಿದ್ದವರು, ತಮ್ಮ ಜಾಣತನಕೊಂಡಾಡಿಕೊಂಡು ಭಾಷಣಮಾಡುತ್ತಲಿದ್ದರು. ಶಾಸ್ತ್ರಿ ಗಳು ಬರೆದಿರಲಿಲ್ಲ. ಅವರಿಗೆ ಜೇಲರನ ಸಂದರ್ಶನ ಲಭ್ಯವು ಭಾಗ್ಯದಲ್ಲಿ ಇರಲಿಲ್ಲ ಎಲ್ಲರನ್ನು ಹೊಡೆಯುವನೆಂದು ಮರುಗಿದರು ಶಾಸ್ತ್ರಿಗಳು."ಅವ ರಿಗಾಗಿ ತಾನು ಏನೂ ಮಾಡುವಂತಿಲ್ಲ'ವೆಂದು ನೊಂದ. ಬರೆಯದಿದ್ದ-ವರು 'ಏತಕ್ಕೆ ಬರೆಯಬೇಕು ? ಹೆಸರು ಬರೆದರೆ ನಮ್ಮದಾಗುವುದೇ ? ಜೇಲಿಂದ ಮೇಲೆ ಅದಕ್ಕೆ ತಕ್ಕಂತೆ ತಲೆಬಾಗಿ ನಡೆಯಲೇಬೇಕು. ರಾಷ್ಟ್ರ ಧ್ವಜದ ಚಿತ್ರತೆಗೆದರೆ, ವಂದೇ ಮಾತರಂ ಬರೆದರೆ ಸ್ವರಾಜ್ಯ ಸಿಕ್ಕಂತಾ ಯಿತೇ' ಎಂದು ಅವಹೇಲನೆ ಮಾಡಿದರು.

ಜೇಲಿನಲ್ಲಿ ಆರ್ಭಟಚೀತ್ಕಾರ! 'ನಾನೂ ಬರೆದಿದ್ದೇನೆ. ಬರೆಯುವ ಅಧಿಕಾರವಿದೆ ! ಯಾರು ನನ್ನನ್ನು ಪ್ರತಿಭಟಿಸುವವರು. ಬರೆದಿರುವೆ. ಇನ್ನು ಬರೆಯುತ್ತೇನೆ' ಎಂಟು ನೂರು ಕೈದಿಗಳೂ ಬೆಕ್ಕಸಬೆರಗಾಗಿ ಕೇಳಿ ದರು ಸ್ವರವನ್ನು. ಜೇಲಿನಲ್ಲಿ ಪ್ರತಿಧ್ವನಿಯಾಗುವಂತೆ ಕೂಗಿದ ಧೈರ್ಯ-ಶಾಲಿ ಯಾರಿರಬಹುದುದೆಂದು, ಕುತೂಹಲದಿಂದ ನೋಡಿದರು. ಶಾಸ್ತ್ರಿ ಗಳು ಕೈಯಲ್ಲಿ ಥಾಲೀಪಾಟನ್ನು ಎತ್ತಿ ಆಫೀಸಿನ ಕಡೆಗೆ ಓಡುತ್ತಿದ್ದಾರೆ. 'ನಾನೇ! ನಾನೇ' ಪ್ರದೀಪ್ತ ಧ್ವನಿಯಿಂದ ಆರ್ಭಟಿಸುತ್ತಾರೆ. ಕೈದಿಗಳು ಹುಚ್ಚು ಸಾಹಸಿಯನ್ನು ಕಂಡು ವಿಚಾರತೋಚದೇ ನಿಂತಿರುವರು.

ಶಾಸ್ತ್ರಿಗಳು ಆಫೀಸದೊಳನುಗ್ಗಲು ಯತ್ನಿಸಿದರು. ಕಾವಲರು ತಡೆದರು. ಜೇಲರರ ಹೃದಯವನ್ನೇ ಭೇದಿಸಿರಬೇಕು. ಶಾಸ್ತ್ರಿಗಳ ಧ್ವನಿ. ಥಾಲೀ ಪಾಟ ಆರೋಪಿಸಿ ನನ್ನ ವಂದಿಸುತ್ತಲಿರುವ ಗುಣಿವತ್ತಿ 'ಏನು? ಯಾವನು' ಎಂದು ವಿಶ್ವಾಮಿತ್ರರಾಗಿ ಬಂದರು. ಶಾಸ್ತ್ರಿಗಳಿಗೆ ಪ್ರಜ್ಞೆ ಇರಲಿಲ್ಲವೆಂದು ನೋಡಿದವರು ಹೇಳಬೇಕಾಗಿತ್ತು. ರೌದ್ರತೆ ಶಾಸ್ತ್ರಿಗಳ ಮುಖದಲ್ಲಿ, ಭೂತ ನೃತ್ಯವನಾಡುತ್ತಿದ್ದಿತು. ಎದುರು ಜೇಲರನೇ ನಿಂತಿದ್ದರೂ 'ಜೇಲ ರರೇ ಹೊರಗೆ ಬನ್ನಿ. ನೀವೇನು ದಂಡನೆ ಮಾಡುವಿರೋ ಮಾಡಿರಿ. ನಾನೂ ಬರೆದಿದ್ದೇನೆ ಎಂದು ಶಕ್ತಿಯ ಅಳವುಮೀರಿ ಕೂಗಿದ. ಕೈಕಾಲು ಮೈ ನಡುಗುತ್ತಲಿದ್ದವು ಪೋಲೀಸರಿಬ್ಬರು ತಡೆಯುತ್ತಲಿದ್ದರೂ, ಕೊಸರಿಕೊಂಡು ನುಗ್ಗುತ್ತಲಿದ್ದರು. ಜೇಲರನು ಶಾಸ್ತ್ರಿಗಳ ತಲೆ-ಕೂದಲನ್ನು ಬಲವಾಗಿ ಹಿಡಿದು, ಗುಣಿಯನ್ನು ಎತ್ತಿ ಬಲಭೀಮನಂತೆ ನಿಂತರು. ಶಾಸ್ತ್ರಿಗಳ ಕ್ರೋಧ, ಆವೇಶ ನಶಿಸಿದವು. ಜೇಲರನ ಎದೆಗೆ ಕೈಕೊಟ್ಟು ನೂಕಿ ಮುಂದೆ ಸರಿದು ನಿಂತು 'ಹೊಡೆಯುವಿಯಾ? ಅಧಿಕಾರವಿದೆಯೇ? ಬಾ ಮುಂದಕ್ಕೆ ಬಾ' ಎಂದು ಕಣಿವೆಲ್ಲಿಯ ಗಡಿಯಂತೆ ನಿಂತರು. ಜೇಲರರು ಮುಂದಕ್ಕೆ ನುಸ್ತು ಬರಲು, ಇಲ್ಲ ಕಂಬಕ್ಕೆ ಬಿಗಿಯಲು 'ಫರ ಮಾನ್' ಹೊರಡಿಸಿದರು. ಹುಂ ನಿಗ್ರಹ ಬಂದಿತು. ವಿಕ್ರಮಶಾಸ್ತ್ರಿಗಳು ಬೆದರಿರಲಿಲ್ಲ. 'ಹಗ್ಗ, ಆ ಮೇಲೆ ಪರಿಣಾಮವನ್ನು ನೋಡು!' ಎನ್ನುತ್ತ ಕಂಬಕ್ಕೆ ಆತು ಕೈಕಟ್ಟಿಕೊಂಡರು! ಜೇಲರನು ಅಪ್ಪಳಿಸಿದ.

"ನೀನು ಸ್ವತಂತ್ರ ಭಾರತದ ಗವ್ಹರ್ನರನೆಂದು ತಿಳಿದಿದ್ದೀಯಲ್ಲವೇ?

"ನಿಸ್ಸಂದೇಹವಾಗಿ! ಸ್ವತಂತ್ರಭಾರತದ ಪ್ರಜೆನಾನು. ಗವ್ಹರ್ನರನು ನಾನು!"

"ಸ್ವತಂತ್ರ ಭಾರತ ಗವ್ಹರ್ನರನನ್ನು ಒದ್ದು ಬಿಗಿಸುವೆ ನೋಡು ಹಾಗಾದರೆ"

"ಆ ಶಕ್ತಿ ನಿನ್ನಲ್ಲಿಲ್ಲ. ನೀನು- ನೀನು ಗುಲಾಮ"

"ನೀನು ಗುಲಾಮನ ಕೈದಿ!"

“ ಯಾರು ಬೊಗಳುವವರು ನಾನು ಕೈದಿ ಎಂದು

“ ನಾನು ಹೇಳುವೆ ”

“ ಹೇಳುವುದಕ್ಕೆ ನಿನಗೆ ಅಧಿಕಾರವೇ ಇಲ್ಲ! ನೀನು ಬ್ರಿಟಿಷರ

“ ನೋಡು ಹಾಗಾದರೆ ”

“ ಏನು ಮಾಡುವ ಶಕ್ತಿ ಇದೆಯೋ ಮಾಡು, ಬೊಗಳಬೇಡ ”

“ರಾಷ್ಟ್ರ ಧ್ವಜವನ್ನು ಏತಕ್ಕೆ ಏರಿಸಿ ”

“ ನನ್ನ ರಾಷ್ಟ್ರದ ಧ್ವಜವೆಂದು, ಸ್ವಾತಂತ್ರ್ಯದೇವಿಯ ಪ್ರೀತಿಯ ಪ್ರತೀಕವೆಂದು ”

“ ಆ ಅಧಿಕಾರ ನಿನಗಿಲ್ಲ ! ”

“ ಸ್ವತಂತ್ರ ಭಾರತದ ಪ್ರಜೆಯಾದುದರಿಂದ, ಆ ಅಧಿಕಾರವು ದೈವದತ್ತವಾಗಿದೆ ”

“ ತಿಳಿಯುತ್ತದೆ ತಡೆ. ”

“ತಡೆ ಎನ್ನುವ ಸಾಮರ್ಥ್ಯವೇ ನಿನಗಿಲ್ಲ. ನನಗಲ್ಲಾ ... ಕೈದಿಗಳ ಒಂದು ಕೂದಲನ್ನು ಧಕ್ಕೆಗೊಳಿಸುವ ಸಾಮರ್ಥ್ಯ ನಿನ್ನಲ್ಲಿಲ್ಲಾ.” ಗುಲಾಮನಾ-ದೇಶದ್ರೋಹಿ !”

ಜೇಲರನು ಹೊಡೆಯಲು ಕೈ ಎತ್ತಿದ. ಥಾಲೀವಾಟ ಕೈದಿಗಳು, ಹುಯಿಲೆಬ್ಬಿಸಿ, ಜೇಲರನ ಮೇಲೆ ಬಿದ್ದರು ಕೈಹಿಡಿದು ನಿಲ್ಲಿಸಿದರು. ಜೇಲರನು ತಬ್ಬಿಬ್ಬಾದ. ಸಿಪಾಯಿಗಳು ಬದಿಗೆ ತಪ್ಪಿಸಿಕೊಳ್ಳಲು, ಅಡಗುವ ಸಿದ್ಧತೆಯಲ್ಲಿದ್ದರು. ಆಫೀಸಿನಲ್ಲಿಯ ಕಾರಕೂನರು ಹೌಹಾರಿದರು. ಗದ್ದಲವೇ ಗದ್ದಲ! **ವಂದೇಮಾತರಂ** ಎಂದರು **ಕ್ವಿಟ್ ಇಂಡಿಯಾ** ಎಂದರು. ಜೇಲರನು ಕೈದಿಗಳ ತೆಕ್ಕೆಯಲ್ಲಿ ಸಿಕ್ಕು ಬಿದ್ದಿದ್ದ. ಶಾಸ್ತ್ರಿಗಳು ಮುಂಬಂದು ಸೆರೆ ಬಿಡಿಸಿದರು. ಕೈದಿಗಳು ಶಾಂತರಾದರು. ಶಾಸ್ತ್ರಿಗಳು ಜೇಲರನನ್ನು ನೋಡಿ “ ನಾನು ಬ್ರಿಟಿಶ ಪ್ರಜೆಯಲ್ಲ ಸ್ವತಂತ್ರ ಭಾರತದ ಏಕನಿಷ್ಠ ಪ್ರಜೆ! ನೀನು ಹೆದರಿರುವಿ. ನಿನ್ನನ್ನು ಹೊಡೆ

ಯುವುದು ದೊಡ್ಡ ವಿಷಯವಲ್ಲ ! ನೀನೂ ನಮ್ಮ ಬಾಂಧವನೆಂದು .... ಸ್ವತಂತ್ರ ಭಾರತದ ಪ್ರಜೆ ಎಂದು ಬಿಟ್ಟಿರುವೆ. ನಾನು ಬ್ರಿಟಿಶ ಪ್ರಜೆಯಲ್ಲ. ಇವರೂ ಅಲ್ಲ !"

ಜೇಲಿನ ಹೆಬ್ಬಾಗಿಲು ಕಾಯುವ ಪೋಲೀಸರು, ಬಾಗಿಲ ಬಿರುಕಿನಲ್ಲಿ ಇಣಿಕಿದರು. ಅವರ ಚಿತ್ತಕ್ಕೆ ವೇದ್ಯವಾಯಿತು. ಗದ್ದಲ ಶಾಂತಗೊಳಿಸಲು ಆಮಂತ್ರಣ ಬಂದರೆ, ನೋಡುವಾ ಎಂದರು. ಜಮಾದಾರನು, ಶಾಂತರಾಗಲು ಸೂಚನೆ ಕೊಡುತ್ತಿರುವುದನ್ನು ಗಮನಿಸಲೇ ಇಲ್ಲಾ ಶಾಸ್ತ್ರಿ! ಕೈ-ಕಣ್ಣು ಗರಗರ ತಿರುಗಿಸಿ ಬೇಸತ್ತರು. ಆವೇಶದಿಂದ ಶಾಸ್ತ್ರಿಗಳು ಸ್ವತಂತ್ರ ಭಾರತದ ಜಯಘೋಷಗೈಯುತ್ತಿದ್ದರು. ಪೋಲೀಸರು ತಬ್ಬಿಬ್ಬಾದರು. ಜೇಲರನನ್ನು ಈ ರೀತಿ ಅಪಮಾನಗೊಳಿಸಿದುದನ್ನು ಜನ್ಮದಲ್ಲಿಯೇ ಕಂಡಿಲ್ಲವೆಂದು, ಖಂಡಿತವಾಗಿ ನುಡಿದುಕೊಂಡರು. ಅಹಂಕಾರಿಗೆ ತಕ್ಕ ಗುರು ದೊರಕಿದನೆಂದು, ಕೆಲವರ ಮತ. ಜೇಲರನ ಪೂಜೆ ವಿಧಿಪೂರ್ವಕ ಸಾಂಗವಾಗಿ ವಾದ್ಯಪ್ರಹಾರದ ವರೆಗೂ ನಡೆಯಲೀ ಎಂದು ಹಾರೈಸಿ, ಹರಕೆ ಬೇಡಿಕೊಂಡವನು ಡ್ರೆಸ್ಸು ಕಳೆದುಕೊಂಡ ಸೀಪಾಯಿ ಒಬ್ಬನೇ ! ಜೇಲರನು ಮಾತನಾಡದೇ ದರ್ಪದಿಂದ ನಿಂತವನು, ಗಂಭೀರನಾದ. ಜಮಾದಾರರಿಗೆ ಆಜ್ಞೆವಿಧಿಸಿದ. ಆಜ್ಞೆಯಂತೆ ಇಪ್ಪತ್ತೈದಕ್ಕೆ ಮಿಕ್ಕಿದ ಪೋಲಿಸರು ಒಳನುಗ್ಗಿದರು. ಕೈಗೆಬೇಡಿ, ಕಾಲಿಗೆ ಭಾರಕಬ್ಬಿಣಕಡಗ ಇಡಿಸಲು ತೊಡಗಿದರು ಸೀಪಾಯಿಗಳು. ವಿಕ್ರಮನು ಅಂಜಿರಲಿಲ್ಲ. ಅಳುಕಿರಲಿಲ್ಲ. ಕಂಬಕ್ಕೆ ಬಲದಕೈಯನ್ನು ಸುತ್ತಿ ಎಡದೆ ಕೈಯನ್ನು ಟೊಂಕದ ಮೇಲಿರಿಸಿದ್ದ. ಜೇಲರ ಎಂದು ಕೂಗಿದ ಶಾಸ್ತ್ರಿಗಳ ಧ್ವನಿಯಲ್ಲಿ ಪ್ರತಿಭೆ ಇತ್ತು ! ವಿದ್ಯುತ್ ಶಕ್ತಿ ಇತ್ತು. ಭೀಕರತೆ ಇದ್ದರೂ, ಆಕರ್ಷಣೀಯವಾಗಿತ್ತು. ತಿರಸ್ಕೃತ ನೋಟ ಬೀರಿದ ಸಾಬರಿಗೂ, ಕೇಳಬೇಕೆನ್ನಿಸಿತು ಶಾಸ್ತ್ರಿಗಳ ಮಾತುಗಳನ್ನು. ಬೇಡಿ, ಕಡಗ ಇಡಿಸುವ ಪೋಲೀಸರೂ, ಕಿವಿಗೊಟ್ಟರು. ಅವ್ಯಾಹತವಾಗಿ, ಅಪ್ರತಿಹತವಾಗಿ ಸಾಗಿದ್ದಿತು ಶಾಸ್ತ್ರಿಗಳ ಪ್ರವಚನ.

' ಜೇಲರ ಸಾಹೇಬ. ನಿಮ್ಮ ದಬ್ಬಾಳಿಕೆ ಕ್ಷಣಕಾಲೀನ. ನಿಮ್ಮ ವರ್ತನೆ ಯಾವನಿಗೂ ಪ್ರಿಯವಾಗಲಾರದು. ರಾಷ್ಟ್ರಧ್ವಜದ ಚಿತ್ರ ಬರೆದರೂ ಎಂಬ ಆಪಾದನೆಗೆ ನೀವು ವಿಧಿಸುವ ಶಿಕ್ಷೆ ಘೋರತರವಾದುದು. ಅದೂ ಅಧಿಕಾರದ ಮರ್ಯಾದೆ ಮೀರಿ ! ರಾಷ್ಟ್ರ ಧುರೀಣರ ಆದೇಶವು ನರನಾಡಿಗಳಲ್ಲಿ ಪ್ರವಹಿಸುತ್ತಿದೆ. ಅದುವೇ ಚಿತ್ರಬರೆಯಿಸಿದೆ. ರಾಷ್ಟ್ರ ಧ್ವಜವನ್ನು ಕೆತ್ತಿಸಿದೆ. **ವಂದೇಮಾತರಂ** ಎನ್ನಿಸಿದೆ. ಅದನ್ನು ಪ್ರತಿಭಟಿಸುವ-ಶಕ್ತಿ ನಿನ್ನಂಥಗುಲಾಮ ವೃತ್ತಿಯವನಿಗೆ ಎಂದಿಗೂ ಸಾಧ್ಯವಿಲ್ಲ. ನಿಸರ್ಗವೇ ಪ್ರೇರೇಪಿಸುತ್ತಿದೆ ' **ಕಾಯದೇಭಂಗ ಮಾಡಿರೀ** ' ಎಂದು. ಒಳಗೆ, ಹೊರಗೆ, ಎಲ್ಲಿದ್ದರೂ ಕಾಯ್ದೆಭಂಗವೇ ನಮ್ಮ ಜೀವನದ ಆದ್ಯ ಕರ್ತವ್ಯ. ಬೇಡಿಹಾಕಿದರೆ, ಚಿತ್ರಹಿಂಸೆ ಮಾಡಿದರೆ, ಸ್ವಾತಂತ್ರ್ಯ ತೇಜವು ಪ್ರದೀಪ್ತವಾಗುವದು. ಪ್ರಜ್ವಲಿತವಾಗುವುದು. ನೀನು ತಿಳಿದಂತೆ ನಿರ್ನಾಮವಾಗದು. ' ಇನ್ನೂ ಮಾತುಗಳು ಓತಪ್ರೋತವಾಗಿ ಬರುತ್ತಲೇ ಇದ್ದುವು. ಜೇಲರಸಾಹೇಬರ ಸನ್ನೆ ಪೋಲೀಸರನ್ನು ಎಚ್ಚರಿಸಿತು. ಕೈದಿಗಳಿಗೆ ಬಡಿತ ಬೀಳುತ್ತಲಿದ್ದವು. ವಿಕ್ರಮ ಶಾಸ್ತ್ರಿಗಳ ಬಾಯಿಯನ್ನೇ ಒತ್ತಿ ಹಿಡಿದು, ಬೇಡಿ ಹಾಕಿ, ಟೊಂಕಕ್ಕೆ ಸರಪಣಿ ಬಿಗಿದರು, ಜೇಲರನು ಮೀಸೆಗೆ ಹುರಿ ಹಾಕುತ್ತ ನಕ್ಕ ! ಗುಣಿಯಿಂದ ಮೊಳಕೈಗೆ ಗಟ್ಟಿಸಿ ಬಡಿದು ' ಶಾಸ್ತ್ರೀ.....ಶಾಸ್ತ್ರೀ ' ಎಂದು ಬೆದರಿಸಿದ. ಕೈದಿಗಳನ್ನೆಲ್ಲ ಜೇಲಿನಲ್ಲಿಯೇ ದಬ್ಬಿ, ಕೂಳು ಕೊಡಲು ತಿಳಿಸಿದರು.. ಕೈದಿಗಳನ್ನು ಎಳೆದು ಒಯ್ಯುತ್ತಲಿದ್ದರು. ಕಬ್ಬಿಣ ರುಳಿಯ ಸಪ್ಪಳು ಕೇಳಿಸುತ್ತ ಕೈದಿಗಳು ಒಳಕ್ಕೆ ನಡೆದಿದ್ದರು. ಶಾಸ್ತ್ರಿಗಳು ಧೀರರಾಗಿ ನೋಡುತ್ತಿದ್ದರು. ಜೇಲರರು ಗಾಬರಿಯಾಗಿ ಹೆಬ್ಬಾಗಿಲದೆಡೆಗೆ ನೋಡಿದರು. ಅವರ ಚಿಕ್ಕಮಗು 'ದಾದಾಽಽ ದಾದಾಽ' ಎಂದು ಅಳುತ್ತ ಬರುತ್ತಲಿದ್ದಿತು. ಸಾಬರು ಸಾವರಿದು ಏಕೆ ? ಏನಾಯಿತು ? ಎನ್ನುತ್ತ ಮುಂದೆ ನಡೆದರು. ಮಗು ಬಂದು ನಿಂತು ! ಅಳುತ್ತ ಹೇಳಿದ.

" ದಾ-ದಾ-ದಾ-ದಾ...."

" ಏ-ನು !-ಏನು ? "

" ಅಮ್ಮಾ.... "

" ಹೊಡೆದಳೇ ? "

" ಇಲ್ಲಾ .... ಇಲ್ಲಾ ದಾದಾ "

" ಏನು ಹಾಗಾದರೇ ? "

" ಅಮ್ಮನು ಅಳುತ್ತಿದ್ದಾಳೆ ! "

" ಏನಾಯಿತು ? "

" ಅಕ್ಕನೂ ಅಳುತ್ತಿದ್ದಾಳೆ !! "

" ಕಾರಣವೇನು ? '

" ಅಣ್ಣನು .... ನಮ್ಮ ಅಣ್ಣಾ !! "

" ಏ .... ನೂ .... "

" ಸತ್ತ - ನಂತೆ ! "

" ಅಣ್ಣ ಸತ್ತನೇ !! "

" ಹೌದಪ್ಪಾ - ನನ್ನ ಅಣ್ಣ ಸತ್ತನಂತೆ ! "

" ಯಾರು ಹೇಳಿದರು! "

" ಪೋಲೀಸರು ಗುಂಡು ಹಾಕಿ ಕೊಂದರಂತೆ ! "

" ಏನು ! "

" ನಿಶಾನೀ ಒಡಿದೇ ಬಿದ್ದನಂತೆ "

ಸಾಹೇಬರು ಗಾಬರಿಯಾಗಿ ಓಡಿದರು. ಮಗುವು ಅಳುತ್ತ ಹಿಂದಿನಿಂದ ಓಡಿತು ಶಾಸ್ತ್ರಿಗಳು ' ಬ್ರಿಟಿಶ ಪ್ರಜೆಯ ಗತಿ ' ನಾನು ಬ್ರಿಟಿಶ ಪ್ರಜೆಯಲ್ಲ ' ಎಂದರು



## ಭವಿಷ್ಯವು ಸತ್ಯ !

ಬೇಡಿಗಳನ್ನು, ಕಬ್ಬಿಣ ಕಾಲಕಡಗಗಳನ್ನು ಅತ್ಯವಸರವಾಗಿ ಏತಕ್ಕೆ ತೆಗೆದರು ? ಜೇಲರನ ಆಜ್ಞೆ ಆಗಿರಲಿಲ್ಲವೇ ಕಬ್ಬಿಣ ಕಡಗ ಸಹಿತ ಜೇಲಿನಲ್ಲಿಯೇ ತುರುಕೆಂದು ? ಅರ್ಧ ಗಂಟೆಯೂ ಕಳೆದಿಲ್ಲ. ಹಾಕಿದರೇಕೆ ! ತೆಗೆದರೇಕೆ ? ಜೇಲರನು ಮಗನನ್ನು ಕಳೆದುಕೊಂಡ, ದುಃಖದಲ್ಲಿರುವುದರಿಂದ, ಕಡಗಗಳು ಸಡಿಲಾಗಿ ಓಡಿದವೆಂದರು. ಅಂಡರಟ್ರಾಯಿಲ್ ಕೈದಿಗಳನ್ನು ದಂಡಿಸುವ ಅಧಿಕಾರವೇ ಅವನಿಗಿಲ್ಲ. ಆದುದರಿಂದ ಅಂಜಿದ, ಸುಪರಿಂಟೆಂಡೆಂಟನ ಕಿವಿಕೇಳಿತು. ಬಾಯಿಗೆ ಬಂದಂತೆ ಜೇಲರರನ್ನು ಹಳಿದ. ಅದಕ್ಕೇ ಬೇಡಿಗಳು ಮಾಯವಾದವೆಂದು ನುಡಿದುಕೊಂಡರು. ಶಾಸ್ತ್ರಿಗಳು, ಮೌಲ್ವಿ, ಹುಚ್ಚಪ್ಪನವರು ಕಲೆತು, ಮಾತನಾಡಿಯೇ ಆಡಿ

ದರು. ಮುಖ್ಯ ವಿಷಯ, ಜೇಲರನ ಜೇಷ್ಠ ಕುಮಾರನ ಮರಣ! ಸತ್ಯ ಸಂಗತಿ ಜ್ಞಾನಕ್ಕೆ ಮೂವರು ಕುತೂಹಲರಾಗಿ ಚರ್ಚಿಸಿದರು. ನಿಶಾನಿಗೂ ಜೇಲರನ ಮಗನಿಗೂ, ಸಂಬಧವೇನು ? ಮರಣಕ್ಕೆ ಧ್ವಜವು ಕಾರಣವಾಯಿತೇ ? ಜೇಲರನ ಮಗನು ರಾಷ್ಟ್ರಪ್ರೇಮಿ ಇರಲೇಬೇಕು. ರಾಷ್ಟ್ರಧ್ವಜಕ್ಕಾಗಿ ದೇಹತ್ಯಾಗಮಾಡಿರಬಹುದು ಕೊನೆಗೂ ನಡೆದುದೇನೂ ಎಂಬುದನ್ನು ತಿಳಿದುಕೊಳ್ಳುವ, ಪ್ರವೃತ್ತಿಯೇ ಪ್ರಬಲವಾಯಿತು. ಯಾರನ್ನು ಕೇಳುವುದು ? ಯಾರು ತಿಳಿಸಬಹುದು ? ಜಮಾದಾರರನ್ನು ಶಾಸ್ತ್ರಿಗಳೇ ಕಂಡು ವರದಿ ಮಾಡಬೇಕೆಂದು ಮೂವರ ಸಭೆಯ ನಿರ್ಣಯವಾಯಿತು. ಹೊರಕ್ಕೆ ಹೊರಡುವಂತಿಲ್ಲ. ಥಾಲೀಪಾಟಿನ ಪ್ರಕರ್ಣವು ಕೈದಿಗಳನ್ನು ಜೇಲಿನ ಪಂಜರದಲ್ಲಿಯೇ ಇರಿಸಿತ್ತು. ರೊಟ್ಟಿಗಳು ಸಳಿಯ ಸಂದಿಯೊಳಗಿಂದಲೇ, ಬಂದಿದ್ದವು. ಶಾಸ್ತ್ರಿಗಳು ಹೊರಕ್ಕೆಹೋಗಿ, ಜಮಾದಾರರನ್ನು ಕಾಣುವ ಬಗೆ ಹೇಗೆ ? ಜಮಾದಾರರು ಜೇಲರನ ಕೀಳುಶಬ್ದಗಳಿಂದಸುಗ್ಗಾಗಿ ಕೈದಿಗಳನ್ನು ಕಾಣಲು ನಾಚಿಕೊಳ್ಳುತ್ತಿದ್ದರು. ಜೇಲರನ ಮಗನು ಸತ್ತದ್ದೇಕೆ ಎಂಬುದನ್ನು ತಿಳಿಯುವದು ಹೇಗೆ ? ತಿಳಿಸುವವರಾರು ?

ಕೈದಿಗಳು ಮಾತನಾಡಿಕೊಳ್ಳುತ್ತಿರುವುದರ ಕಡೆಗೆ, ಶಾಸ್ತ್ರಿಗಳ ಚಿತ್ತವೇಧಿಸಿತು. ಮೂವರ ಸಭೆನಿರ್ಣಯವಿಲ್ಲದೇ ಮುಂದುವರೆಯಿತು. ಶಾಸ್ತ್ರಿಗಳ ಜೊತೆ ಕುಳಿತರು. ಮೌಲ್ವಿಯವರು ಮುಸುಗೆಳೆದರು. ಹುಚ್ಚಪ್ಪನವರು, ಸಂದಿಯೊಳಗಿಂದ ಜೇಲಿನ ಪ್ರಕೃತಿಸೌಂದರ್ಯ ನಿರೀಕ್ಷಣೆ ಮಾಡುತ್ತ ಬಾಗಿಲಲ್ಲಿ ನಿಂತರು. ಶಾಸ್ತ್ರಿಗಳ ಬರುವಿಕೆ ಯಿಂದ ಕೈದಿಗಳು ಹುದುಗಿಕೊಂಡರು. ಆದರದಿಂದ ಕರೆದುದು ನಿಜ. ತಮ್ಮ ಮಾತನ್ನೇ ನಿಲ್ಲಿಸಿದರು. ಶಾಸ್ತ್ರಿಗಳ ಕಿವಿಕೇಳಿತ್ತು. ಬಂಗಾರ ಮಾಡುವ ವಿಧಾನ, ಅದಕ್ಕಾಗಿ ತಾನು ಶ್ರಮಿಸಿದುದು, ಮುಂದಿನ ತನ್ನ ಜೀವಮಾನದಲ್ಲಿ ಜರುಗಲೇಬೇಕಾದವುಗಳನ್ನು ಹೇಳುತ್ತಲಿದ್ದ ಅವನು. ಕೇಳಿದರೆ ಹೇಳುವನೇ ? ಶಾಸ್ತ್ರಿಗಳು, ಹುದುಗಿದುದರ ಕಾರಣ ತಿಳಿದರು. ಕೈದಿಗಳಿಂದ ಅದೇ ವಿಷಯ ತಿಳಿಯುವ ತಂತ್ರಹೂಡಿದರು, ಹಳೆಯ ಕಾಲದ ಸಂಸ್ಕೃತಿ,

ಪೂರ್ವಜರ ಶಿಲ್ಪಕಲೆ, ಕಟ್ಟಿಸಿದ ದೇವಾಲಯ, ದೇವಾಲಯದ ಸಂಪತ್ತು, ವಿದ್ಯಾರಣ್ಯರು ಕರ್ನಾಟದಲ್ಲಿ, ಸುವರ್ಣ ವೃಷ್ಟಿಯನ್ನು, ತಪಃ ಪ್ರಭಾವದಿಂದ ಬರಮಾಡಿದ್ದನ್ನು ಹೇಳುತ್ತಲೇ ಹೀಗೆಂದರು.

" ನಮ್ಮ ಹಿರಿಯರು ತಪೋನಿಧಿಗಳು, ಸಕಲಶಾಸ್ತ್ರಪಾರಂಗತರು. ಕಲಾಕುಶಲರು, ಮಂತ್ರ-ತಂತ್ರ ಯಂತ್ರವಿದ್ಯೆಯಲ್ಲಿ ಬಲ್ಲಿದರು. ಆದರೆ, ನಮ್ಮ ನಾಡಿನಲ್ಲಿ, ನಮ್ಮೆಲ್ಲರ ದುರ್ದೈವದಿಂದ, ಪೂರ್ವಜರ ಕೂಡ, ಕಲೆಗಳೂ ನಷ್ಟವಾಗಿವೆ. ವಿದ್ಯೆಯು ನಾಶವಾಗಿದೆ ಗುಪ್ತವಾಗಿಡಬೇಕೆಂಬ ಮೌಢ್ಯ ಭಾವನೆಯಿಂದ, ಯಾರಿಗೂ ತಿಳಿಸದೇ, ಪಠಣಮಾಡಿಸದೇ ತೀರಿದರು. ಇನ್ನೂ ನಮ್ಮಲ್ಲಿ ಪಂಡಿತರಿದ್ದಾರೆ. ಮಂತ್ರ-ತಂತ್ರಜ್ಞರಿದ್ದಾರೆ ಅವರು ಯಾರಿಗೂ ಹೇಳದೇ ಸತ್ತು, ನಾಡಿನ ಸಂಪತ್ತ-ಸಮೃದ್ಧಿಯ ನಾಶಕ್ಕೆ ಕಾರಣರಾಗುತ್ತಾರೆ. ರೈತರನೇಕರನ್ನು ನಾನೇ ನೋಡಿರುವೆ. ಕಲಿತವರಲ್ಲ. ಶಾಸ್ತ್ರಪಾರಂಗತರಲ್ಲ. ಡಾಕ್ಟರ ಪರೀಕ್ಷೆ ತೇರ್ಗಡೆಯಾಗಿಲ್ಲ. ಹೊಲದ ಬದುವಿನಲ್ಲಿ, ನಿಸರ್ಗದೇವಿಯ ಆಶ್ರಯದಲ್ಲಿ ಬೆಳೆದ ವನಸ್ಪತಿಗಳಿಂದ, ಎಂತೆಂತಹ ರೋಗಗಳನ್ನು ಕಳೆಯುತ್ತಾರೆ. ಸಿವ್ಹಿಲ್ ಸರ್ಜನರು ಆಪ್ರೆಶನ್ ಮಾಡಲೇ ಬೇಕೆನ್ನುವ ರೋಗಗಳನ್ನು , ಒಂದೆರಡು ದಿನಗಳಲ್ಲಿ, ತೊಪ್ಪಲು ತಿನ್ನಿಸಿ ಗುಣಪಡಿಸುತ್ತಾರೆ. ಅಘೋರ ರೋಗಗಳನ್ನು ಸಹಜವಾಗಿ ಕಳೆಯುವರು. ಅವರೆಲ್ಲರೂ ಯಾರಿಗೂ ಹೇಳದೇ ತೀರಿಕೊಂಡರೆ ಅಪಾರ ನಷ್ಟವಲ್ಲವೇ ನಮ್ಮ ರಾಷ್ಟ್ರಕ್ಕೆ "

"ಸಿವಾತ್ಮಾ ಬರೋಬರೈತ್ರಿ ಒಂದ್ಸಾರ ಅಂದ್ರಸ ನೋಡಿ-ಎಂಟ್ಹತ್ತ ವರ್ಸದ ಮಾತಿರಬೇಕು. ಲಮಾಣ್ಣಾರಾಕಿ, ಕಟೀಗೀ ಮಾರಾಕ್ಬಂದಿದ್ಲು. ಅವಳಂತ್ಯಾಕ ಎಂತಾ ಇದ್ಯಾ ಇರಬೇಕ್ರಿ?"

"ಏನು ಮಾಡಿದಳು?"

"ಕುಡ್ಯಾಕಿಷ್ಟು ನೀರ್ಹಣಿಸ್ರೀ ಅಂದ್ಲು. ನಮ್ಮ ಏಣ್ತಿ ಬಳಿ ಹುಂಬಿದ್ದನ್ರಿ, 'ಹೋಗ್ಹೋಲೇ ನಿನ. ಮನ್ಯಾಗ ಹುಡಿಗಿ ಸಾಯಾಕ ಕುಂತೈತಿ ನೀರಂತ ನೀರು' ಅಂದ. ನಮ್ಮ ಎವ್ವಾ ಓಡಿ ಬಂದು, ಚರಿಗೀ ತುಂಬ

ನೀರ್ಧಣಿಸಿದ್ಲು. ಕುಡಿದ ಮ್ಯಾಗ ಕೇಳಿದ್ಲು. 'ಏನಾಗೇದ ಹುಡಿಗ್ಗೆ' ಅಂತ. ಹೊಟ್ಟ್ಯಾಗ ಒಂದು ಟೆಂಗಿನಕಾಯೀ ಅsಟು ಗಂಟಾಗಿತ್ರಿ ನಮ್ಮ ಎಕ್ಕಗ. ಎವ್ವಾ ಅತಗೊಂತs ಎಲ್ಲಾ ಹೇಳಿದ್ಲು. ಕೇಳಿದ್ದs ಒಳಗs ಬಂದ್ಲು ಲಮಾಣಿ"

"ಏತಕ್ಕೆ?"

"ನಮ್ಮ ಎಕ್ಕನ್ನ ಹೊಟ್ಟೀ ಹಿಚಿಕಿ ಹಿಚಿಕಿ ನೋಡಿದ್ಲು. ಇದೇನು ಗನಾಬ್ಯಾನಿಬಿಡು. ಯಾಕಿಟ್ಟ್ಯಾಗ ಬ್ಯಾಕ್ಕೀರಿ ಅಂದ್ಲು. ಸರ್ಕಾರೀದಾಗ್ದರಾ ಎಡ್ಡದಿಂದಾಗ ಸಾತ್ತವs ಅಂತ ಹೇಳಿದ್ಲ. ಲಮಾಣೀ ಒಂದ ಮುದ್ದಿ ಮಣ್ಣು ತೊಗೊಂಡು, ಮಿದ್ದಿ ಮಿದ್ದಿ ಗೊಂಬೀ ಮಾಡಿದ್ಲು. ಎಕ್ಕನ್ನs ಎತ್ತಿ ಹಿತ್ತಲ್ದಾಕುಂಡ್ರಿಸಿದ್ರು. ಮಣ್ಣ ಗೊಂಬೀನ್ನs ಎಕ್ಕನ್ನs ಬಿಸಲಾಗ ಕುಂಡ್ರಿಸಿದ್ರು. ಎಕ್ಕನ ನೆರಳಿನ ಮ್ಯಾಗ ಗೊಂಬೀ ಇಟ್ಟು, ಗೊಂಬೀ ಹೊಟ್ಟಿ ಹಿಡದು ಹಿಚಗಾಕ ಸುರೂ ಮಾಡಿದ್ಲು. ಗೊಂಬೀ ಹೊಟ್ಟೀ ಹಿಚಿಕಿದ್ರುs ಎಕ್ಕನ ಹೊಟ್ಟೀ ನೋಯಬೇಕ್ರೀ? ಎಡ್ಡತಾಸ್ತನಾ ಗೊಂಬೀ ಹಿಚಿಕೇ ಹಿಚಿಕಿದ್ಲು. ಎಕ್ಕನ ಹೊಟ್ಟ್ಯಾಗಿನ- ಗಂಟು ಕರಿಗೇಹೋಗಿತ್ರಿ! ಇಂತಾ ಮಂತ್ರಾ ಹಾಕ್ಕಾಕಿ"

"ಗೊಂಬಿಯನ್ನು ಏನು ಮಾಡಿದಳು?"

"ಎತ್ತಿ ಕೆರ್‍ಯಾಗ ಒಗದು, ಜಳಕಾ ಮಾಡಿಬಂದ್ಲು"

"ಎಂತಹ ಜನಹಿತಕಾರ ವಿದ್ಯೆ! ಈಗ ಆ ಲಮಾಣಿ ಇರಲಿಕ್ಕಿಲ್ಲ. ಅಲ್ಲವೇ?"

"ಸತ್ಲಂತ್ರಿ."

"ಇಂತಾ ಇದ್ಯಾವು ಏಟೆಟೋ ಆದಾವ್ರಿ. ಮಳ್ಳನನಮಕ್ಕು ದಾಗ್ದರ ವಾಗ್ದರಂತ ಸಾಯ್ತಾರ."

"ವಿದ್ಯೆಗಳಿವೆ. ತಮ್ಮ ಮಕ್ಕಳಿಗೂ ಹೇಳಿಸಾಯುವುದಿಲ್ಲವಲ್ಲಪ್ಪ"

"ಅಂತಾ ಎಬ್ಬಂಕ ಮಕಿದ್ರು--ಯಾಕ್ಹೇಳ್ತಾರ್‍ರಿ?"

"ಬೇರೆಯವರಿಗೆ-ಬಂಧುಬಳಗದವರಿಗೆ, ಸ್ನೇಹಿತರಿಗೆ, ಏತಕ್ಕೆ ಹೇಳಬಾರದು?"

"ಹೇಳೀ ಹೇಳ್ತಾರ್ರಿ! ತಿಳಕೋಳಿಲ್ಲಾ ಅಂದ್ರs ಹಿರೇರಿಗ್ಯಾಕ್ರೀ ಅನ್ನೂದು?"

"ಹೇಳಿದ್ದರೆ ಒಳ್ಳೆಯದೇ. ನೀನು ವಯಸ್ಸಾದವನು. ಈ ತರಹದ ಮಂತ್ರ-ತಂತ್ರ ಬಲ್ಲವರನ್ನು ನೋಡಿರುವಿಯಾ?"

"ಶಾಸ್ತ್ರಿಯವರs ಈ ಕುಳಾ ಏನೂ ಸಾಮಾನ್ಯಂತ ತಿಳೀಬ್ಯಾಡ್ರೀ-ಎಲ್ಲಾನೂ ಗೊತ್ತದಾವು," ಮುದುಕನನ್ನು ಬಲ್ಲ ಕೈದಿ, ಅಭಿಮಾನದಿಂದ ಹೇಳಿದ. ಮುದುಕನು.

"ಮಕ್ಳs ನಡವಹಾಂಗ ಬಾಯಿ ಹಾಕ್ತಾರ್ರು ನಮ್ಮಂತಾವೆಲ್ಲಾ ಯಾಗಿಡದ ತೊಪ್ಪಲ್ರಿ?"

"ಹಾಗಲ್ಲಾ ನಿಮ್ಮಿಂದಲೇ ದೇಶದ ಉದ್ಧಾರವಾಗುವುದು ನಾಡಿಗೆ ನಿಮ್ಮ ಅವಶ್ಯಕತೆ ಇದೆ. ನಿಮ್ಮ ಯೋಗ್ಯತೆ ತಿಳಿದಯುಷ್ಟು ಮೂರ್ಖರುನಾವಾಗಿಟ್ಟೇವೆ. ನಿಮ್ಮ ಯೋಗ್ಯತೆ ಸಾಮಾನ್ಯವಲ್ಲ"

"ನಾಕುಗಿಡದ ತೊಪ್ಪಲ ಹೆಸರsಟು ಗೊತ್ತಾದ್ರs ಏನಾದಾಂಗಾತ್ರೀ...."

"ಬಿಡೋ ಎಬ್ಬಾ; ಯಾಕ ಬುರಡೀ ಉಳ್ಳಸ್ತೀ....' ಎಪ್ಪಾ-ಜೇಲಿನ್ಯಾಗ ಯಾಕ ಕುಂತಾನಂತೀರಿ?"

"ಬಿಡೋ ಮಂಗ್ಯಾ .... ದೊಡ್ಡವರ್ಮಂದs ಅಷ್ಟಡ್ಡಾ ಮಾತಾಡ್ತಾರ್ರು. ಹಲ್ಲಾಗ ನಾಲ್ಗೀ ಇಟಗೊಂಡು, ಕೂಡ್ರು ಸುಮ್ನ"

ಶಾಸ್ತ್ರಿಗಳಿಗೆ ಅಪೇಕ್ಷೆ ಇಲ್ಲವಾಯಿತು. ಕೇಳುವ ಕುತೂಹಲದಿಂದ ಉದ್ದುದ್ದ ಭಾಷಣ ಮಾಡಿದುದರ ಪ್ರತಿಫಲವೇ ದೊರೆಯಲಿಲ್ಲಾ. ಮುದುಕನು ಶಾಸ್ತ್ರಿತನಕ್ಕಾದರೂ ಮನ್ನಣೆ ತೋರಬಹುದೆಂದು ಎಣಿಸಿದ್ದ. ತನ್ನಲ್ಲಿ ಧೂರ್ತತನವು ಇಲ್ಲವೇ ಇಲ್ಲವೆಂದು ತಿಳಿದ. ಮೌಲ್ವಿಯವರು

ಶಾಸ್ತ್ರಿಗಳನ್ನು ಕರೆದು ಕಿವಿ ಮಾತನ್ನು ಬಿಚ್ಚಿದರು. ಹುಚ್ಚಪ್ಪನವರು ಗ್ರಂಥ ಪಠನೆಯಲ್ಲಿ, ಮಗ್ನರಾಗಿದ್ದರು ಮುದುಕನಿಗೂ ಹುಡುಗ ಕೈದಿಗೂ ವಾಕ್ಯುದ್ಧ ಮೆಲು ಮಾತಿನಲ್ಲಿ ತಲೆ ಎತ್ತಿತು. ದೊಡ್ಡವರ ಬೆಲೆ ತಿಳಿಯದು. ಮೀಸೆ ಬೆಳ್ಳಗಾದವೇ ಹೊರತು ಬುದ್ಧಿ ಬೆಳೆದಿಲ್ಲ. ಜನರ ಕೂಡ ನಡೆಯುವ ರೀತಿಯೇ ತಿಳಿಯದು ' ಎಂದು ನಿಂದನೆಗೆ ಹುಡುಗನಿಂದ ಗುರಿಯಾದನು ಮುದುಕ. ಮುದುಕನು ' ತಮ್ಮಾ, ನೀನಿನ್ನೂ ಚಿಕ್ಕವ. ಅವರು ದೊಡ್ಡವರು ನಿಜ. ಅವರೊಡನೆ ಮಾತನಾಡುವ ಕಾಲವು ಇದಲ್ಲ ಅಪರಿಚಿತ ಕೈದಿಗಳು ಸುತ್ತಲೂ ಇರುವಾಗ, ಹೇಳುವ ವಿಷಯವೇ ? ಅದಕ್ಕೆ ಬೆಲೆ ಇಲ್ಲವೇ ಎಂದು ಸಮಾಧಾನಕ್ಕೆ ಪ್ರಯತ್ನಿಸಿದ. ತನ್ನ ಗುರುವು ಕಲಿಸಿದುದನ್ನು, ಗುರುವಿನಾಣೆ, ಶಾಸ್ತ್ರಿಗೆ ಕಲಿಸುವೆನಾಗಿ ಹೇಳಿ, ತನ್ನೂರ ಹುಡುಗನ ಮನಸನ್ನು ಸಂತಸಗೊಳಿಸಿದ.

ಪೀವಳಾ ಪ್ರಪಿತಾಮಹನು, ವಿಕ್ರಮನ ಕೊಠಡಿಯ ಬದಿನಿಂತ. ಅವನಿಗೇನೋ ರೋಗವಾಗಿದಯೆಂದು, ಜನ ಆಡಿಕೊಂಡರು. ಅವನು ಸುಮ್ಮನೆ ಬಂದುದೇ ಇಲ್ಲ. ಯಾರಿಗಾದರೂ ಚೇಷ್ಟೆ ಮಾಡಿ, ಕಾರಣವಿಲ್ಲದೇ ನಕ್ಕು, ಟೊಪ್ಪಿಗೆಯನ್ನಾದರೂ ತೂರಿ ಹೋಗುವವನು ಹೆಬ್ಬಾವಿನಂತೆ, ಸ್ತಬ್ಧನೇಕಾಗಿರಬಹುದು ' ಕೊಠಡಿಯನ್ನು ತೆರೆದರು. ಶಾಸ್ತ್ರಿಗಳೇ ಬರಬೇಕು' ಎಂದು ವಿನಯದಿಂದ ಕರೆದು ಕೈಜೋಡಿಸಿದ. 'ಎಲ್ಲಿಗೆ?' ಎಂದು ಕೇಳುವ ಪೂರ್ವದಲ್ಲಿ, ಜಮಾದಾರರು ಕರೆಯುವರೆಂದು ತಿಳಿಸಿ, ಆಚೆಗೆ ಹೊರಳಿ ನಿಂತ. ಮೌಲ್ವಿಯವರು, ಕುಮಾರನ ಮರಣದ ಸ್ಮರಣೆ ಮಾಡಿದರು. ಶಾಸ್ತ್ರಿಗಳು ನಡೆದರು.

ಕೊಠಡಿಗಳೆದುರು ಕುಳಿತವರಾರು? ಜೇಲಿನಲ್ಲಿ ಮದುವೆ ಇದೆಯೇ? ಇಷ್ಟೇಕೆ ಗದ್ದಲು. ವಿಶಾಲ ಬಯಲಿನ ಗಿಡದಡಿಯಲ್ಲಿ, ಜನ ಮಲಗಿದ್ದಾರೆ, ಕುಳಿತು ಚಕ್ಕಂದ ಹರಟೆಗೆ ತೊಡಗಿದ್ದಾರೆ. ಇನ್ನೊಂಟ ಪಾರಾಯಣ ನಡೆದಿದೆ. ಕ್ರಾಪ್ ಹಿಕ್ಕಿ ಕನ್ನಡಿ ನೋಡಿಕೊಳ್ಳುತ್ತಲಿದ್ದಾರೆ. ಫೋನೋ ಒದರಿಸುವರು. ನೂರೈವತ್ತಕ್ಕೂ ಹೆಚ್ಚಿರಬಹುದು. ಅಂದವಾದ ಖಾದೀ

ಉಡುಪಿನಲ್ಲಿ, ತೇಜಃಪುಂಜರಾಗಿರುವರು. ಹೆಂಗುಸುರೂ ಇದ್ದಾರೆ! ಚಿಕ್ಕ ಮಗು ಬೇರೆ! ಮೊಲೆ ಕುಡಿಸುತ್ತಾಳೆ. ಮೈತುಂಬ ಸೆರೆಗು ಹೊದೆದು ಚಿಕ್ಕ ಮಗುವಿನೊಡನೆ ಆಟವಾಡುತ್ತಿದ್ದಾಳೆ. ಯಾರಿವರು? ಜೇಲರನ ಮನೆಯಲ್ಲಿ ಮದುವೆ ಇರಬಹುದು. ಬೀಗರು ಪರಿವಾರ ಸಮೇತ ಪಯಣಬೆಳಿಸಿರಬಹುದೂ ಎನ್ನಬೇಕೆ? ಬೆಳಗಿನಲ್ಲಿ ಜೇಷ್ಠ ಕುಮಾರನ ಮರಣ ವಾರ್ತೆಯನ್ನು ಕಿವಿಯಾರೆ ಕೇಳಿದುದಾಗಿದೆ. ಯಾರಪ್ಪ! ಒಂದು ಕತ್ತಿ ಹೊರಲೂ ಆಗದಷ್ಟು ಒಬ್ಬೊಬ್ಬರ ಬಟ್ಟೆ! ಹಾಸಿಗೆ ಹೊದಿಕೆ. ಕುಣಿಯುವರು, ಭಜನೆ ಮಾಡುವರು. ಬೋಲಾ ಪುಂಡಲೀಕ ವರದ ಹರಿ ವಿಠ್ಠಲ' ಎಂದು ಭಗವನ್ನಾಮಸ್ಮರಣೆ ಬೇರೆ,

"ಜೇಲ್ಸರ, ಅಹೋ ಜೇಲ್ಸರ-"

ಗಿಡದಡಿಯಲ್ಲಿ ಕುಳಿತ ತರುಣಿ ಕೂಗಿದಳು. ಅವಳ ಮೈ ಆತು, ಮುದ್ದು ಕುವರನು ಆಡುತ್ತಲಿದ್ದ. ಸೀಪಾಯಿ ಓಡಿಹೋಗಿ? 'ಏನು?' ಎಂದ.

"ಅತಾ ದೂಧ ಪಾಹಿಜೆ! ಲೌಕರ ಆಣಾಯಲಾ ಸಾಂಗ. ಮುಲಾನಾ ಅತಾ ಪಿಯಾಲಾ ದಿಲ್ಸಚ ಪಾಹಿಜೆ. ಲೌಕ್ಸರ ಆಣ" ಕೇಳಿದವನೇ ಪೋಲೀಸ ಓಡಿದ. ತಂದುಕೊಟ್ಟ. ಹಾಲಿನ ಪಾತ್ರೆ ನೋಡಿ, ಛೀಸಿ ಒಗೆದಳು. ಉಪಗಾರಕ್ಕೆ ದಾನಧರ್ಮಕ್ಕ ತರುಪಿಯಾ? ಒಳ್ಳೆಯ ಹಾಲನ್ನು ತರಲೇಜೇಕೆಂದು ಸಾರಿದಳು. ಪೋಲೀಸನು, ಮತ್ತೆ ಓಡಿದ. ತರುಣಿಯು ಮಗುವನ್ನು ಎತ್ತಿ, ಹೆಗಲಲ್ಲಿ ನಿಲ್ಲಿಸಿ ಕಳ್ಳಸ್ವರದಿಂದ ಹಾಡಲೂ ತೊಡಗಿದಳು. ವಿಕ್ರಮ ಶಾಸ್ತ್ರಿಗಳನ್ನು, ಪೀವಳಾ ಎಚ್ಚರಿಸಿ ಮುಂದಕ್ಕೆ ಸಾಗಿಸಿ, ಆಫೀಸದ ವರೆಗೆ ಕಳಿಸಿ ನಡೆದ. ಜಮಾದಾರರು ಭಯಭಕ್ತಿಯಿಂದಲೇ ಶಾಸ್ತ್ರಿಗಳನ್ನು ಕಂಡರು. ಕೂಡ್ರಿಸಿ ಸೇವಕರಂತೆ ನಿಂತರು. ವಿಕ್ರಮಶಾಸ್ತ್ರಿಗಳು ಅತ್ಯಾಗ್ರಹಪಡಿಸದಿದ್ದಲ್ಲಿ ನಿಂತುಕೊಂಡೇ ಮಾತನಾಡತಕ್ಕವರು.

" ಶಾಸ್ತ್ರಿಗಳೇ - ಈ ಜೇಲರನಿಗೆ ಎಂದು ವರ್ಗವಾಗುವುದು? ಸಾಕಪ್ಪಾ ಎನ್ನಿಸಿದೆ. "

" ಅವರ ಮಗನ ಸುದ್ದಿ ಏನು? "

“ ಜೇಲರನ ಹೊಟ್ಟೆಯಲ್ಲಿ ಹುಟ್ಟುವ ಹುಡುಗನಲ್ಲ ಶಾಸ್ತ್ರಿಗಳೇ. ವಿನಯಶಾಲಿ, ನನ್ನ ಹೊಟ್ಟೆಯ ಮಗನೇ ತೀರಿದಷ್ಟು ದುಃಖವಾಗಿದೆ? ”

“ ಪಾಪ, ರಾಷ್ಟ್ರಧ್ವಜಕ್ಕಾಗಿ ತೀರಿದನೆ? ”

“ ಕಾಲೇಜದ ವಿದ್ಯಾರ್ಥಿ. ಬುದ್ಧಿಶಾಲಿ ಕಲೆಕ್ಟರನ ಕಚೇರಿಯ ಲ್ಲಿಯ ಯುನಿಯನ್ ಜಾಕ್ ಕಿತ್ತಿ, ಆ ಸ್ಥಳದಲ್ಲಿ ಭಾರತದ ರಾಷ್ಟ್ರಧ್ವಜ ವನ್ನು ನಿಲ್ಲಿಸಬೇಕೆಂದು, ವಿದ್ಯಾರ್ಥಿ ಸಂಘದಲ್ಲಿ ನಿರ್ಣಯವಾಯಿತಂತೆ. ಪ್ರಚಂಡ ಮೆರವಣಿಗೆಯೊಂದಿಗೆ ಧ್ವಜವನ್ನು ಒಯ್ಯುವುದಾಗಿ ಕೆಲವರು, ಕೊನೆಗೆ, ಕಲೆಕ್ಟರನು ಕಚೇರಿಯಲ್ಲಿರುವಾಗ, ಐನೂರು ವಿದ್ಯಾರ್ಥಿಗಳು, ಏಕಕಾಲಕ್ಕ ಪ್ರಕಟವಾಗಬೇಕೆಂದು ಗೊತ್ತಾಯಿತಂತೆ! ಹತ್ತೆಂಟು ಧ್ವಜ ಗಳನ್ನು ಅಡಗಿಸಿಟ್ಟುಕೊಂಡು, ಕಚೇರಿಯಲ್ಲಿ ನುಗ್ಗಿ, ಜಯಘೋಷವಮಾ ಡಿದರಂತೆ! ಜಯಘೋಷ ಕೇಳಿ ಕಲೆಕ್ಟರನೇ ಹೊರಬಂದನಂತೆ. ಸ್ವತಂತ್ರ ಭಾರತಕ್ಕೆ ಜಯವಾಗಲೀ ಎಂದು ಧ್ವಜಸ್ತಂಬದಲ್ಲಿ ಹಾರುತ್ತಿದ್ದ ಬ್ರಿಟಿಶರ ಧ್ವಜವನ್ನು, ಒಬ್ಬ ವಿದ್ಯಾರ್ಥಿ ಚರಚರ ಹರಿದು ಒಗೆದು, ಅದೇ ಸ್ಥಳದಲ್ಲಿ ತ್ರಿವರ್ಣದ ಭಾರತ ರಾಷ್ಟ್ರಧ್ವಜವನ್ನು ಹಾರಿಸಿದನಂತೆ. ಪೋಲೀಸರು ಬಂದು ಹೊಡೆದರು. ಓಡಿಸಿದರು. ಧ್ವಜಕಿತ್ತಿ ಎಸೆಯುವದರಲ್ಲಿದ್ದರು. ನಮ್ಮ ಜೇಲರನ ಮಗ ಅರವಿಂದನು ಓಡಿಹೋಗಿ ಧ್ವಜ ಸ್ತಂಭ ಏರಿ, ಮತ್ತೆ ಧ್ವಜಹಾರಿಸಿದ. ಜಯಘೋಷ ಮಾಡಿದ. ಪೋಲೀಸರು, ಎಳೆ ದರೂ ಧ್ವಜಬಿಡದಲೇ ನಿಂತಿದ್ದನಂತೆ, ಕಲಕ್ಟರನಿಗೂ ಜಯಘೋಷ ಮಾಡಲು ಗುಂಪು ಕೂಗುತ್ತಿದ್ದತಂತೆ! ರೊಚ್ಚಿಗೆದ್ದು ಪೋಲೀಸರಿಗೆ ತಿಳಿ ಸಿದರು ಕುಡಿದ ಗುಂಗಿನಲ್ಲಿ ಒಬ್ಬ ಪೋಲೀಸನೇ ಗುಂಡು ಹಾರಿಸಿದ. ಅದು ಅರವಿಂದನನ್ನು ನೆಲಕ್ಕ ಕೆಡಹಿತು. ಬೇರೊಬ್ಬನು ಬೇಗವಾಗಿ ಸ್ತಂ ಭದ ಮೇಲೆ,ಧ್ವಜ ಏರಿಸಿ ಗುಂಡು ಹೊಡೀ ಎಂದು ಆವೇಶದಿಂದ ಕೂಗಿದ. ಹುಡುಗ ಸತ್ತ ಸುದ್ದಿ ಊರಲ್ಲಿ ಹಬ್ಬಿತು. ತಂಡತಂಡವಾಗಿ ಜನನೆರೆದರು. ಕಲೆಕ್ಟರನು ಕಾರಿನಲ್ಲಿ ಹೋಗಿಯೇ ಬಿಟ್ಟ. ”

ಇನ್ನೂ ಅರವಿಂದನ ಶವದ ಮೆರಣಗೆ, ಜನರು ರಾಷ್ಟ್ರಪ್ರೇಮಿಗೆ, ಸಲ್ಲಿಸಿದ ವಂದನೆಯ ವರ್ಣನೆ ನಡೆದಾಗ, ತರುಣಿಯು ಬಾಗಿಲಲ್ಲಿ ನಿಂತಳು.

ಅವಳ ಮಗು ಮುಂಗೈ ಮೇಲೆ ಕುಳಿತು ಜಮಾದಾರರನ್ನು ನೋಡುತ್ತಿದ್ದಿತು. ಶಾಸ್ತ್ರಿಗಳು ಆಸನದಿಂದೆದ್ದು ಸ್ವಾಗತ ಬಯಸಿದರು. ಜಮಾದಾರರು ಕುರ್ಚಿಯನ್ನು ಎತ್ತಿ ಕೂಡ್ರಲು ವಿನಂತಿಸಿದರು.

" ಏನು ಬೇಕು ತಾಯಿ ? " ಜಮಾದಾರರು ತಲೆಬಾಗಿ ಕೇಳಿದರು. ಕುರ್ಚಿಯಲ್ಲಿ ಕುಳಿತು ಮಗುವನ್ನು ಕೆಳಗಿಳಿಸಿದರು. " ಏನೂ ವ್ಯವಸ್ಥೆ ಇಲ್ಲ ಈ ಜೇಲಿನಲ್ಲಿ "

" ಸ್ತ್ರೀಸ್ಥಾನಬದ್ಧರನ್ನು ಇಲ್ಲಿ ಇಡುವುದೇ ಇಲ್ಲ. ಹಿಂಡಲಗಿಯಲ್ಲಿ ಸರಿಯಾದ ವ್ಯವಸ್ಥೆ ಇದೆ. ರಾತ್ರಿ ಗಾಡಿಗೆ ಕಳುಹುತ್ತೇವೆ. ಈಗ ತಮಗೇನು ಬೇಕು ? "

" ಕೂಸಿಗೆ ಹಾಲು, ಹಣ್ಣು "

ಜಮಾದಾರನು ಇತರರಿಗೆ ಆಜ್ಞೆಮಾಡಲಿಲ್ಲ. ತಾನೇ ಓಡಿದ. ಶಾಸ್ತ್ರಿಗಳು ವಿನಯದಿಂದ ಪ್ರಶ್ನಿಸಿದರು.

" ತಮ್ಮ ಹೆಸರೇನು ತಾಯಿ ? "

" ಇಂದಿರಾದೇವಿ" ತಮ್ಮ....

" ವಿಕ್ರಮ "

" ಸಂತೋಷ. ಸ್ಥಾನಬದ್ಧರೇ ? "

" ಇನ್ನೂ ನಿರ್ಣಯವೇ ಇಲ್ಲ. ಖಟ್ಲೆ ನಡೆದಿದೆ "

" ಕರ್ನಾಟಕವು, ಭಾರತಕ್ಕೆ ಶ್ರೇಷ್ಠಸೇವೆ ಸಲ್ಲಿಸಿದೆ. ಅಗಷ್ಟ ೧೯೪೨ರ ಹೋರಾಟದಲ್ಲಿ "

" ನಿಮ್ಮ ನಾನಾ ಪಾಟೀಲರ, ಧೈರ್ಯಸ್ಥೈರ್ಯದ ಕೆಲಸಗಳು, ಕರ್ನಾಟಕಸ್ಥರಿಗೆ ಸ್ಫೂರ್ತಿಕೊಡುತ್ತಲಿವೆ. "

" ಯಾವ ಜಿಲ್ಹೆ ? "

" ಸಾತಾರೆ.......

" ಸಿಂಹಗರ್ಜನೆಯ ನಾಡು "

" ಸ್ಫೂರ್ತಿ ಕರ್ನಾಟಕದ್ದು "

" ತಾಯೀ, ಬಂಧಿಸಿದ ಕಾರಣ ಕೇಳಬಹುದೇ ? "

" ಕಾರಣವಿದ್ದರೆ ಶಿಕ್ಷೆ ಆಗುತ್ತಿತ್ತು. ಸಂಶಯ "

" ಸಂಶಯಕ್ಕೆ ಕಾರಣ ? "

" ನಮ್ಮ ಯಜಮಾನರನ್ನು, ದಾದರ ಸ್ಟೇಶನದಲ್ಲಿ ಬಂಧಿಸಿದರು. ಯಜಮಾನರು ಜೇಲಿಗೆ ಹೊರಡುವಾಗ ತಮ್ಮ ಮಿತ್ರರಿಂದ, ಸಂದೇಶ ಕಳುಹಿದ್ದರು. ರಾಷ್ಟ್ರಕ್ಕಾಗಿ ಆತ್ಮಾರ್ಪಣೆಯ ಪ್ರಸಂಗ ಬಂದಲ್ಲಿ ಸಿದ್ಧರಿರ ಬೇಕೂ ಎಂದು. ಅಬಲೆನಾನು. ಶಕ್ಯವಿದ್ದಷ್ಟು ಕಾರ್ಯಮಾಡುತ್ತಲಿದ್ದೆ. ಬಂಧಿಸಿದರು. ಬಂದೆ ನೋಡಿ "

" ಎಂತಹತ್ಯಾಗಿಗಳು ತಾಯಿ ನಮ್ಮ ಹೆಣ್ಣು ಮಕ್ಕಳು ನಿರುಪ-ಯೋಗಿ. ಅಡುಗೆಮಾಡಿ ಊಟಕ್ಕ ಹಾಕಿದರೆ ದೊಡ್ಡ ಕೆಲಸ ಮಾಡಿದೆವೂ ಎಂದು ಭಾವಿಸುತ್ತಾರೆ. ಕರ್ನಾಟಕದ ಸ್ತ್ರೀಯರಲ್ಲಿ ಜಾಗೃತಿಯಾಗಿಲ್ಲ."

" ಗೆಳೆಯರೇ, ನಾನು ಯಾರೆಂದಿರಿ ? "

" ತಿಳಿಯದು "

" ಕರ್ನಾಟಕದವಳು. ಕನ್ನಡ ನಾಡು ಜನ್ಮಭೂಮಿ. ವಿದ್ಯೆಬುದ್ಧಿಗಳನ್ನು ದಯಪಾಲಿಸಿದ ನಾಡು ಕನ್ನಡ ''

" ಯಜಮಾನರು ಮಹಾರಾಷ್ಟ್ರದವರೇ ? ''

" ಅಹುದು. ದೇಶಸೇವೆಗೆ ಸ್ಫೂರ್ತಿಯನ್ನು ದಯಪಾಲಿಸಿದುದು ಕರ್ನಾಟಕವೇ ? ಕರ್ನಾಟಕವೆಂದರೆ ಹೀಗಳೆಯಬೇಡಿ. ನನ್ನ ತಾಯಿಯ ನಾಡು ಅದು ''

'' ಬಹಳ ಸಂತೋಷವಾಯಿತು ತಾಯಿ ''

'' ಅಣ್ಣಾ, ನೀವೆಲ್ಲಾ ಕಷ್ಟಪಡುತ್ತಿರುವಿರಿ. ನನಗೆ ದುಃಖದ ಬದಲು ಸಂತಸವಾಗುತ್ತಿದೆ. ನನ್ನ ತವರಿನವರು ದೇಶಕ್ಕೆ ಭೂಷಣ ಪ್ರಾಯರೆಂದು ಜನ ನುಡಿದುದನ್ನು ಕೇಳಿ ವೈಜುಂ ಎನ್ನುವುದು. **ದಿವಾಕರ,**

**ಕೆರಮುರಕರ, ಬಿಂದುಮಾಧವ, ಅಂಬಲಿ, ವಾಲಿಯವರು**, 'ಮಹಾ ರಾಷ್ಟ್ರೀಯರ' ನಾಲಿಗೆಯಲ್ಲಿ ನಲಿಯುತ್ತಾರೆ. ನನ್ನ ಅಣ್ಣಂದಿರನ್ನು ಹೊಗಳಿದರೆ ಎಂತಹ ಹೆಮ್ಮೆ ''

" ಮಹಾತಾಯಿ ನೀವು. ಕರ್ನಾಟಕದ ಕೀರ್ತಿಯ ಪ್ರತೀಕ. ಭಾರತಮಾತೆ ಧನ್ಯಳು. ಕರ್ನಾಟಕದಲ್ಲಿ ಜನ್ಮಿಸಿ, ಮಹಾರಾಷ್ಟ್ರದಲ್ಲಿ ತಾಯಿಯ ಹೆಸರನ್ನು ಅಚ್ಚಳಿಯದೇ ಪಾಲಿಸುತ್ತಿರುವಿರಿ. "

" ಅಣ್ಣಾ- ವಿಪ್ಲವ ಕಾಲದಲ್ಲಿ ಜನ್ಮಿಸಿದ ನಾವು, ರಾಷ್ಟ್ರಕ್ಕಾಗಿ ತ್ಯಾಗ ಮಾಡಲೇಬೇಕು. ಸುದೈವದಿಂದ ಕೈಹಿಡಿದವರೂ ರಾಷ್ಟ್ರಪ್ರೇಮಿಗಳು. ಕಾಂಗ್ರೆಸ್ಸಕಾರ್ಯ ಧುರಂಧರರು, ಪತಿಯ ತತ್ವನಿಷ್ಠೆಗೆ, ತಾಯಿಯ ಕೀರ್ತಿಗೆ ಬಾಧೆ ಬರದಂತೆ, ರಾಷ್ಟ್ರೀಯ ವೃತ್ತಿಯವಳಾಗಲೇಬೇಕು. "

" ತಾಯೀ ಎಲ್ಲ ಹೆಂಗಳೆಯರು ತಿಳಿದು ವರ್ತಿಸಿದರೆ ಎಂತಹ ಭಾಗ್ಯದ ಕಾಲವಿದೆ ಭಾರತಕ್ಕೆ"

ಜಮಾದಾರರು ಹಾಲು-ಹಣ್ಣನ್ನು ತಂದರು. ಇಂದಿರಾದೇವಿಯವರು ಅಣ್ಣನಿಗೆ ವಂದನೆ ನೀಡಿ, ಮಗುವಿನೊಡನೆ ಹೊರಟರು. ಶಾಸ್ತ್ರಿಗಳವರು ಜಮಾದಾರರನ್ನು ನೋಡಿ " ಅಪ್ಪಣೆ ಕೊಡಿ ಸಾಹೇಬರೇ " ಎಂದರು.

" ಶಾಸ್ತ್ರೀಜೀ, ಒಳ್ಳೆಯ ಕಾಲ ನನ್ನ ಭಾಗ್ಯದಲ್ಲಿ ಇಲ್ಲ. ನೀವು ಭವಿಷ್ಯ ಹೇಳುವಿರೆಂದುಕೊಂಡಿದ್ದೆ.

" ಹೇಳುವೆ. ಇದಕ್ಕೇ ಬಂದಿರುವೆ."

" ಅರ್ಧಗಂಟೆಯ ನಂತರ ಸುಪ್ರಿಂಟೆಂಡೆಂಟರವರು ಬರುವರಂತೆ! ವ್ಯವಸ್ಥೆ ಮಾಡಬೇಕು. ಇಲ್ಲವೆ ಒದೆತ ! "

" ನಾಳಿನ ದಿನವಿದೆ. ನಿಮ್ಮ ವಶದಲ್ಲಿಯೇ ಇರುವೆ "

ನಿಮ್ಮ ಖಟ್ಲೆಯ ವಿಚಾರಣೆ ನಾಳಿನ ದಿನವೇ ನಡೆಯುವುದಂತೆ. ಬೆಳಗಿನ ಗಾಡಿಗೆ ನಿಮ್ಮನ್ನು ಸೀಪಾಯಿಗಳು ಕರೆದೊಯ್ಯುವರು. ಹೀಗಿದೆ, ತೊಂದರೆಗಳು ಮುತ್ತುತ್ತವೆ "

" ಮತ್ತೆ ಇಲ್ಲಿಗೇ ತರುತ್ತಾರೆ. ನಿಮ್ಮ ಸೇವೆಗೆ ಸಿದ್ಧನಾಗುವೆ "

" ದೇವರು ಏನು ಮಾಡಿಸುವರೋ ಮಾಡಿಸಲಿ. ನಿಮಗೆ ತೊಂದರೆ ಕೊಟ್ಟೆ. ಕ್ಷಮಿಸಿ. "

" ನಾನು ಬೇರೆಯವನೇ ? "

" ಹಾಗಲ್ಲ ಶಾಸ್ತ್ರೀಜೀ "

" ದೂರ ಮಾಡಬೇಡಿ. ಬರುತ್ತೇನೆ "

ಶಾಸ್ತ್ರೀಜಿಯವರನ್ನು ಒಳಹೊಗಿಸಿದರು. ಪಕ್ಕದ ಕೊಠಡಿಯಲ್ಲಿ ಅಳುವ ಧ್ವನಿ ಕೇಳುತ್ತಲಿದ್ದಿತು. ಮಾಲ್ವಿಯವರು, ಹುಚ್ಚಪ್ಪನವರು 'ಅರವಿಂದ'ನ ರೋಮಾಂಚಕ ಮರಣದ ಕಥಾನಕವನ್ನು ತಿಳಿದರು. ಅರವಿಂದನು ವಿರೋಚಿತ ಮರಣವನ್ನೈದುದಕ್ಕಾಗಿ, ಸಂತಸ ವ್ಯಕ್ತಪಡಿಸಿ, ಆತ್ಮಕ್ಕೆ ಸುಖ, ಶಾಂತಿಯನ್ನು ಕೋರಿದರು ಶಾಸ್ತ್ರೀಜಿಯವರು, ತಮಗೆ ಪಾಸಪೋರ್ಟದೊರೆತ್ತಿರ್ದುದನ್ನು ತಿಳಿಸಿ, ಪಯಣ ಸಿದ್ಧತೆಯ ಮಾತನಾಡಿದರು. ಪಕ್ಕದ ಕೊಠಡಿಯಲ್ಲಿ ಅಳು, ನಗು ಏಕಕಾಲಕ್ಕೆ ಉದ್ಭವವಾಗುತ್ತಿದ್ದುವು. ಕಾರಣ ಕೇಳಿದರು ಶಾಸ್ತ್ರೀಜೀಯವರು.

" ನಿಮ್ಮ ಕೆಟ್ಟನಾಲಿಗೆಯೇ ಕಾರಣ ! "

" ಯಾರಿಗೂ ಕೆಡುಕನ್ನು ನುಡಿದಿಲ್ಲ !! "

" ಸಾಮುದ್ರಿಕಾ ಶಾಸ್ತ್ರದ ಪ್ರಭಾವ ಶಾಸ್ತ್ರಿಗಳೇ !! ಒಬ್ಬನ ಬಿಡುಗಡೆ ಆಯಿತು 'ನಿರ್ದೋಷಿ' ಎಂದು ಬರೆದರಂತೆ ಜಡ್ಜರು. ಒಳಗೇಕೆ ಬರುತ್ತಾನೆ ಭೂಪತಿರಂಗ ! ಓಡಿ ಹೋಗಿರಬೇಕು. "

" ಅವನ ಜೊತೆಯವನಿಗೆ ಶಿಕ್ಷೆ ಆಯಿತೆ ? "

" ಅಲ್ಲಾ ಶಾಸ್ತ್ರೀಜೀ-ಹೆಂಡತಿಸತ್ತಿದ್ದಾಳೆ ಎಂದಿದ್ದಿರಿ. ಇಲ್ಲಾ ಎಂದು ವಾದಿಸಿದ. ಸತ್ತಸುದ್ದಿಯನ್ನು ಈದಿನ ಕೇಳಿದ. "

" ನನ್ನ ಭವಿಷ್ಯ ಸುಳ್ಳಾಗಬಾರದಾಗಿತ್ತೆ.... "

ನೀವು ಭವಿಷ್ಯ ಹೇಳದಿದ್ದರೂ ಅವಳು ಸಾಯುತ್ತಿದ್ದಳು. ಹೆಂಡತಿ ಸತ್ತರೆ ಇನ್ನೊಂದುಮಾಡಿಕೊಳ್ಳಲಿ. ಅಳುವುದೇ ಹೆಂಗಸಿನಂತೆ! ಬ್ರಾಹ್ಮಣ ಹೆಣ್ಣುಮಕ್ಕಳೇ ಗಂಡ ತೀರಿದರೆ, ಅಳುವುದನ್ನು ಬಿಟ್ಟು ಬೇರೆ ಲಗ್ನಮಾಡಿ ಕೊಳ್ಳುವ ವಿಚಾರ ಮಾಡುತ್ತಲಿರುವಾಗ, ಇವನಿಗೇನು ಧಾಡಿ-ಸತ್ತರೆ ಸತ್ತಳು ! ಹುಡುಗರಂತೆ ಅಳುತ್ತಾನೆ. ''

'' ಮೌಲ್ವಿಯವರೇ, ಗಂಡ ಹೆಂಡಿರು, ಪ್ರೀತಿಯಾಗಿರಬಹುದು. ಹಾಸ್ಯ ಮಾಡಬಾರದು. ''

'' ಶಾಸ್ತ್ರೀಜೀ ದುಃಖ ಎಲ್ಲರಿಗೂ ಆಗುತ್ತದೆ ನಿಜ. ಚಿತ್ತಗೊಟ್ಟು ಕೇಳಿ. ಹಾಡಿ-ಹಾಡಿ ಅಳುತ್ತಿರುವ ''

ಸ್ವರತೆಗೆದು, ಹೆಂಡತಿಯ ಗುಣ, ರೂಪಗಳನ್ನು ನೆನೆನೆನೆದು ಅಳುತ್ತಲಿದ್ದ ಕೊನೆಗೆ ' ಅಯ್ಯೋ ಎನ್ವಾ!' ಎಂಬಸ್ವರ. ಕೂಡಿಯುವರು, ಶಾಂತತೆಗಾಗಿ ಪೋಲೀಸರನ್ನೇ ಪ್ರಾರ್ಥಿಸಬೇಕಾಯ್ತು ಶಾಂತನಾದರೂ ನಡು-ನಡುವೆ ಸ್ವರ ತೆಗೆಯುತ್ತಿದ್ದ. ವಿಕ್ರಮ ಶಾಸ್ತ್ರೀಯ ಭವಿಷ್ಯಕ್ಕೆ ಬೆಲೆ ಬಂದಿತು. ವಿಶ್ವಾಸಿಕರಾದರು ಕೈದಿಗಳೆಲ್ಲ. ಹೊಡೆತತಿಂದರೂ ಸರಿ ಭವಿಷ್ಯ ಕೇಳಲೇ ಬೇಕೆಂದು ದೃಢಸಂಕಲ್ಪಿತರಾದರು. ಕಾಯುವ ಪೋಲೀಸರ ಕಾಲುಹಿಡಿದರು. ತನ್ನ ಆಪೇಕ್ಷೆ ಪೂರ್ಣಮಾಡಲು ಪ್ರಾರ್ಥಿಸಿದರು. ವಿಕ್ರಮಶಾಸ್ತ್ರಿಗಳ ಸಂದರ್ಶನ ಮಾಡಿಸುವದಾಗಿ ವಚನ ನೀಡಿದ ಪೋಲೀಸ. ಶಾಸ್ತ್ರಿಗಳು ಖಟ್ಲೆ ವಿಚಾರಣೆಗಾಗಿ ಹೊರಡುವರೆಂಬುದನ್ನು ಕೇಳಿ ಕೈದಿಗಳೆಲ್ಲ ತಮ್ಮ ಹಣೆಚಚ್ಚಿಕೊಂಡರು. ಕೈಯ ತುತ್ತು ಬಾಯಿಗಿಡುವುದಾಗ ದ್ದಕ್ಕೆ ಕೊರಗಿದರು. ಶಾಸ್ತ್ರೀಜೀಯ ಭವಿಷ್ಯವು ಸತ್ಯ-ಸತ್ಯವೆಂದರು

———

## ಸ್ವಾತಂತ್ರ್ಯ ದಿನ.

ಆರು ತಿಂಗಳು ಕಠಿಣ ಕಾರಾಗ್ರಹ, ಐವತ್ತು ರೂಪಾಯಿ ದಂಡ, ಇಲ್ಲವೇ ಒಂದು ತಿಂಗಳು ಶಿಕ್ಷೆಪಡೆದು ಬಂದ ವಿಕ್ರಮ. ಕ್ರೂರ ಅಪರಾಧಿ ಮೊದಲಾಗಿ ದೇಶಭಕ್ತಿ ಪ್ರೇರಣೆಯಿಂದ ಕಾರಾಗ್ರಹ ಕಂಡವರೆಲ್ಲ, ಹೃತ್ಪೂರ್ವಕ ಬರಮಾಡಿಕೊಂಡರು. ಶಿಕ್ಷೆ ಹೊತ್ತುಬಂದವರ, ವಸತಿ ಸ್ಥಳಬೇರೆ. ಒಳಗೇ ಇರಬೇಕೆಂಬ ನಿರ್ಬಂಧವಿಲ್ಲ. ವಿಕ್ರಮನು ಮಹಾ-ರಾಷ್ಟ್ರಬಾಂಧವರಿರುವ ಸ್ಥಳವನ್ನೇ ಆಯ್ದುಕೊಂಡ. ಅವರ ನಯನುಡಿ, ರಾಷ್ಟ್ರ ಪ್ರೀತಿಯಮಾತು ಕೇಳಿ ಹಿಗ್ಗುತ್ತಿದ್ದ. ದೇ.ಭ. **ಕಾನಡೆ,** ದೇ.ಭ. **ಜಿಜೂರೀಕರ, ಬಂಡೂನಾನಾ, ಸಾಠೆ** ಎಲ್ಲರೂ ವಿಕ್ರಮನ ಪ್ರೀತಿಯ ಗೆಳೆಯರು. ವಿಕ್ರಮನು ಸಾಹಿತಿ ಎಂಬುದನ್ನು ಅರಿತಿದ್ದರು. ಅವನು ಅಂಡರಟ್ರಾಯಿಲ್‌ದಲ್ಲಿರುವಾಗ, ಇಲ್ಲಿಗೆ ಶಿಕ್ಷೆಹೊತ್ತು ಬರಲಿ, ಕನ್ನಡ ಕಲಿಯುವಾ ಎಂದಿದ್ದರು. ಈಗ ಶಿಷ್ಯರಾಗುವ ಸಿದ್ಧತೆಯಲ್ಲಿದ್ದರು. 'ಸಾಹಿತ್ಯಾಚಾರ್ಯ' ಎಂದು ಕರಿಯುತ್ತಿದ್ದರೇ ಹೊರತು, ವಿಕ್ರಮಾ.

ಎಂದು ಕೂಗುತ್ತಲಿರಲಿಲ್ಲ. '**ಜೋಗ**' ವಿಕ್ರಮನ ಮನಸೆಳೆದವರಲ್ಲಿ ಒಬ್ಬ 'ಜೋಗ'ನ ಮೇಧಾ ಶಕ್ತಿಗೆ ಎಲ್ಲರೂ ಬೆರಗಾಗಿದ್ದರು. ಕನ್ನಡದಿಂದ ಮರಾಠಿಗೆ ಭಾಷಾಂತರಿಸಿ ಹೇಳುವದಕ್ಕೆ ಅವನೇ ಶ್ರೇಷ್ಠ. ಕನ್ನಡ ಮಾತೃಭಾಷೆ ಅವನದು. ಮರಾಠಿಯನ್ನು ಮಾತನಾಡುವಿಕೆ ಕೇಳಬೇಕು ಜೋಗನ ಮುಖದಿಂದ. ಕನ್ನಡ, ಇಂಗ್ಲೀಷ, ಮರಾಠಿ, ಗುಜರಾಥಿ, ಹಿಂದೀ ಭಾಷೆಗಳಲ್ಲಿ ವಿಶಾರದ. ವಿಕ್ರಮನ ಕನ್ನಡ ಮಾತುಗಳನ್ನು ಭಾಷಾಂತರಿಸಿ, ಮಹಾರಾಷ್ಟ್ರೀಯ ಗೆಳೆಯರಿಗೆ ತಿಳಿಸುವನು.

ಎರಡು ಶಾಲೆಗಳು ಪ್ರಾರಂಭವಾದುವು. ಸಾಹಿತ್ಯಾಚಾರ್ಯರು, ಬೆಳಗಿನಲ್ಲಿ ಮಹಾರಾಷ್ಟ್ರೀಯ ಗೆಳೆಯರಿಗೆ ಕನ್ನಡ ಓದು ಬರೆಹ ಕಲಿಸುವರು. ಅದೇ ಸಮಯಕ್ಕೆ 'ಜೋಗ' ನೂರಾರು ಕನ್ನಡ - ಮರಾಠಿಯ ಯುವಕರಿಗೆ, ರಾಷ್ಟ್ರಭಾಷೆಯ ಶಿಕ್ಷಣ ಕೊಡುವನು. ಮಧ್ಯಾಹ್ನಕ್ಕೆ ಸಾಹಿತ್ಯಾಚಾರ್ಯರು, ಹೆಬ್ಬೆರಳಿನ ಬಾಂಧವರನ್ನು ಕಾಣುವರು. ಓದುಬರಹ ಕಲಿಸಿಯೇ ತೀರುವುದಾಗಿ ಅವರ ಹಟ. ಜೇಲಿನಲ್ಲಿ ಬಂದುದಕ್ಕೆ ಕಲಿತಾದರೂ ಹೋಗುವಾ ಎಂದು ಉಬ್ಬಿದರು. ಸಾಹಿತ್ಯಾಚಾರ್ಯರ ಪ್ರೇಮಕ್ಕೆ ಸವಿಮಾತಿಗೆ ಅಕ್ಷರಗಳು ತಲೆಯಲ್ಲಿ ಕತ್ತಿದುವು. ಒಂದೊಂದೇ ಅಕ್ಷರಗಳನ್ನು ಕೂಡಿಸಿ ಓದಲು ಸಾಹಸಮಾಡತೊಡಗಿದರು ಹೆಬ್ಬೆರಳಿನವರು. 'ಜೋಗ'ನ ಪಾಠಶಾಲೆ ಪ್ರಗತಿ ಪಥದಲ್ಲಿದ್ದಿತು. ಸಾಹಿತ್ಯಾಚಾರ್ಯರ ಶಿಷ್ಯಪರಿವಾರವು 'ಗುರುಭ್ಯೋನಮಃ' 'ಶಾಲಾಯೈನಮಃ' ಎಂದಿತು. ಕಾರಣ ಶಾಸ್ತ್ರಿಗಳೇ! ಆರಂಭಶೂರತ್ವವು ಶಾಸ್ತ್ರಿಗಳ ತಲೆಹದಿ ಕೊನೆಯವರೆಗೂ ಯಾವುದರಲ್ಲಿಯೂ, ಉತ್ಸಾಹ ಇರುವುದೇ ಇಲ್ಲ. ಅವರು ದಾಕ್ಷಿಣಾತ್ಯರಲ್ಲವೇ? 'ಮಹಾರಾಷ್ಟ್ರೀಯರಿಗೆ ಕನ್ನಡ ಕಲಿಸುವುದಿಲ್ಲಪ್ಪಾ' ಎನ್ನಿಸಿರಬೇಕು ಸಾಹಿತ್ಯಾಚಾರ್ಯರಿಗೆ. ಬೆಳಗಿನ ಗಂಜಪ್ರಾಶನವಾದರಾಯಿತು. 'ಯಾಕ್ರಿ - ಛಲ್ರಿ-' ಎಂದು ಎಳೆಯುತ್ತಿದ್ದರು. ಆಲಸ್ಯದ ಉಗಮವೇ ತಾವೆಂಬುದನ್ನು ತೋರ್ಪಡಿಸದೇ, ಪಾಠಕ್ಕೆ ಉತ್ಸಾಹವಿದೆ ಎಂದು ಅಭಿನಯಿಸುತ್ತಿದ್ದರು. ಭವಿಷ್ಯಕಥನ ಕಾರ್ಯಾಲಯದ ಮಹತಿ

ವ್ಯಾಪಕನಾಗಿತ್ತು. ಶಾಸ್ತ್ರಿಗಳು ಒಂದು ಗಂಟೆಯಾದರೂ ವಿಧಿಲಿಖಿತ ಓದಲೇಬೇಕಾಗುತ್ತಿತ್ತು. ಶಾಸ್ತ್ರಿಗಳ ಭವಿಷ್ಯವು ಸುಳ್ಳೆಂದು ಸಿದ್ಧಮಾಡಿ ಕೊಟ್ಟವರಿಗೆ ಎರಡು ಪಾಟು ಗಂಜಿ ಇನಾಮು !!

ಹುಚ್ಚಪ್ಪನವರಲ್ಲಿ ಕಾರ್ಯದಕ್ಷತೆ ಇಲ್ಲವೆಂದು ಅಪಾದನೆ ಹೇರಿ, 'ಆರು ತಿಂಗಳ ಕಠಿಣಶಿಕ್ಷೆ'ಯೆಂದು ಬರೆದು ಕಳಿಸಿದ್ದರು. ಹುಚ್ಚಪ್ಪನವರಿಗೆ ಜೇಲಿನ ಬಟ್ಟೆಕೊಟ್ಟು 'ಕ್ವಾರಂಟಾಯಿನ' ವಿಧಿಮುಗಿಸಿದರು. ಅವರು ಪೊರಕೆಕೊಂಡು, ಕಸಗೂಡಿಸುವದನ್ನು ಕಂಡು, ಮರುಗದವರೇ ಜೇಲಿನಲ್ಲಿಲ್ಲ ಕಸಗೂಡಿಸುವುದನ್ನು ಕಡೆಗಣಿಸಿದವರಲ್ಲ. ರೈತರ, ಬಡವರ ಸೇವೆಯೆನ್ನುವರು ಮೌಲ್ವಿಯವರು ಅಂದರ ಟ್ರಾಯಿಲ್ ಕೋಪದಲ್ಲಿಯೇ ಬಿದ್ದಿದ್ದರು ಶಾಸ್ತ್ರಿಗಳು ಮಾತನಾಡಿಸಿ ಬರುವರು. ಖೊಟ್ಟಿ ನಾಣ್ಯಮಾಡಿದ ಈರಯ್ಯ! Quit India ಕರಸನ್ನೇ ನೋಟುಗಳನ್ನೇ ಮುದ್ರಿಸಿದ ಮಾಧವರಾಯ, ಪತ್ರೀಕರಣದ ಜೆನ್ನಟ್ಟಿ ಜಲಿನ ವಶಕ್ಕೆ ಬಂದ ಚೆನ್ನಯ್ಯ, 'ಕಿಮಿಯಾ'ದ ರಮೇಶ, ಹಂದಿಯ ಹಾಲಿನಿಂದ ಬೆಳ್ಳಿ ಮಾಡಿದನೆನ್ನುವ ಬಾಲಪ್ಪ, ಭೂಗತ ದ್ರವ್ಯ ತನ್ನ ಕಣ್ಣಿಗೇ ಕಾಣುವುದೆನ್ನುವ ಭಂಗಾರೆಪ್ಪ, ಬಂಗಾರ ಪೂಜೆಗಿಡಿಸಿ, ರಾತ್ರಿಯೇ ಓಡಿಹೋಗುವಾಗ ಸೀಪಾಯಿಗಳ ಕೈಗೆ ಸಿಕ್ಕ ಸಂಬರವಾಲೆ, ಮಾಮ್ಲೇದಾರನಾಗಿ, ತೂಕಮಾಪಿನ ಇನ್ಸಪೆಕ್ಟರನಾಗಿ, ಇನ್ಸುರನ್ಸ ಕಂಪನಿಯ ಡಾಯರೆಕ್ಟರನಾಗಿ, ವಕೀಲನಾಗಿ, ಡಾಕ್ಟರನಾಗಿ ಕೊನೆಗೆ ಹದಿನೆಂಟು ಹೆಸರಿನ ಆರೋಪಿಯಾದ ಇನ್ಸಪೆಕ್ಟರ ಮಲ್ಲಾರಾಧ್ಯ, ನಾಯಕನ ಆಜ್ಞೆಪಾಲಿಸದೇ ಬಂದ ನೇವ್ಹಿಯ ಯುರೋಪಿಯನ್ ಕೈದಿ, ಮಂತ್ರವಿದ್ಯೆಯಿಂದ ಊರಹೆಣ್ಣುಗಳನ್ನೆಲ್ಲ ತನ್ನ ಹೆಂಡಿರನ್ನೇ ಮಾಡಿಕೊಂಡ ಬಸವಪ್ರಭು, ಇವರೆಲ್ಲ ಶಾಸ್ತ್ರಿಗಳ ಗೆಳೆಯರು.

ಮಕರ ಸಂಕ್ರಮಣ. ಊರಲ್ಲಿದ್ದರೆ ಬಂಧು ಬಾಂಧವರಿಗೆ ಒಲುಮೆಯ ಕಾಣಿಕೆಯೆಂದು ಎಳ್ಳುಬೆಲ್ಲ ನೀಡುತ್ತಲಿದ್ದೆ ಎಂದು ಕೈದಿಗಳೆಲ್ಲ ಯೋಚಿಸಿದರು. ಕಾನಡೆಯವರ ನೇತೃತ್ವದಲ್ಲಿ 'ತೀಳಗೂಳ ಸಮಾರಂಭ

ಸಭೆ ' ಜರುಗಿತು. ' ಮಕರ ಸಂಕ್ರಮಣ'ದ ಮಹತಿಯನ್ನು ಒಬ್ಬ, 'ಸೂರ್ಯ ದೇವನ ಗತಿ' ಬದಲಾಗುವುದರ, ಮರ್ಮದ ಬಗ್ಗೆ ಒಬ್ಬ, ಮಾತ ನಾಡಿದರು ಮರಾಠಿಯಲ್ಲಿ. ಸಾಹಿತ್ಯಾಚಾರ್ಯರು ಕನ್ನಡದಲ್ಲಿಯೇ ಮಾತ ನಾಡುವೆ ಎಂದರು. ಮರಾಠಿ ಮಾತು ಶೂನ್ಯದಲ್ಲಿ ಎಂದು ಒಪ್ಪಿಕೊಳ್ಳ ಲಿಲ್ಲ. ' ಜೋಗ ' ಭಾಷಾಂತರದಿಂದ ಸಾಹಿತ್ಯಾಚಾರ್ಯರ ಭಾಷಣವು ಮೆಚ್ಚಿಗೆ ಆಯಿತು. ವಿಷಯಮಂಡನ ಶೈಲಿ, ವಾಕ್ಪ್ರವಾಹ, ಗಂಭೀರ ಧ್ವನಿ ಕೇಳುವುದೇ ? ಕರತಾಡನವೇಕರತಾಡನ. ಸಾಹಿತ್ಯಾಚಾರ್ಯರು ಎಂದು ಕರೆದದ್ದಕ್ಕೇ ಇರಬಹುದು, ಕುಳಿತು ಮಾತನಾಡುವಸ್ವಾತಂತ್ರ್ಯ. ಬೇರೆಯವರಿಗಿಲ್ಲ. ಒಂದು ವಾಕ್ಯವನ್ನು ಕೊಟ್ಟು ಜನರ ಮುಖ ನೋಡು ವರು. ಪರಿಣಾಮವಾದುದನ್ನು ಕಂಡು, ಜೋಗರ ಭಾಷಾಂತರದ ನಂತರ ಮತ್ತೊಂದು ವಾಕ್ಯಬಿಡುವರು. ಬೇಕು, ಇನ್ನೂ ಮಾತನಾಡಿರಿ ಎಂದು ಕೇಳಿಕೆಗಳಿರುವಾಗ, ಭಾಷಣ ಮುಗಿಸಿದರು, ವೇಳೆ ಬಹಳವಾಗಿದೆಎಂದು ಸಾಹಿತ್ಯಾಚಾರ್ಯರು. ಸಾಹಿತ್ಯಾಚಾರ್ಯರಿಗೆ ' ಎಳ್ಳುಬೆಲ್ಲ ' ಕೊಟ್ಟರು ಮೊದಲು. ಶಾಸ್ತ್ರಿಗಳು ಜೇಲಿನ ತಮ್ಮ ಗೆಳೆಯರಿಗೆಲ್ಲ ಮಮತೆಯಿಂದ ಮುಟ್ಟಿಸಿದರು. ಜೇಲಿನವರಿಗೆಲ್ಲ ಹಬ್ಬವನ್ನು ವಿಜೃಂಭಣೆಯಿಂದ ಆಚರಿ ಸಲು, ಜೇಲರನಿಗೆ ತಿಳಿಯದಲೇ ಎಳ್ಳುಬೆಲ್ಲ ತಂದು ಕೊಟ್ಟ, ಜಮಾದಾ ರರನ್ನು, ಶಾಸ್ತ್ರಿಗಳು ಮರೆಯಲಿಲ್ಲ. ಸಕಲಜಾತಿಯ ಬಾಂಧವರು,ವರ್ಷದ ವರೆಗೆ ಆದ ತಪ್ಪು ಕ್ಷಮಿಸಿ, ನಿಮ್ಮ ಹೃದಯದ ಒಂದು ಮೂಲೆಯಲ್ಲಿ ನನ್ನ ನಿರಪೇಕ್ಷ ಪ್ರೇಮಕ್ಕೆ ಸ್ಥಳಕೊಡಿರಿ, ಎಂದು ಆಲಿಂಗಿಸಿ, ಎಳ್ಳುಬೆಲ್ಲವನ್ನು ಆಂತರೀಕ ಪ್ರೇಮದಿಂದ ತಿನಿಸುತ್ತಿದ್ದರು. ಹೊಲೆಯನನ್ನು ಕಂಡು ಹಾರುತ್ತಲಿರುವ ಹಾರುವರು, ಅಲ್ಲಿರಲಿಲ್ಲ. ಎಲ್ಲರೂ ಸಮ. ನಾವೆಲ್ಲ ಒಂದು, ಓರ್ವ ತಾಯಿಯಸ್ತನಪಾನದಿಂದ, ಪೋಷಿತರಾದವರು ಎನ್ನುತ್ತ ಲಿದ್ದರು. ಜಾತಿವೈಷಮ್ಯಕ್ಕೆ ಎಡೆಗೊಡದೆ, ಹಾರುವ ಮೊದಲು, ಅಂತ್ಯಜ ಕಡೆಯಾಗಿ ಎಲ್ಲರೂ ಒಂದೆಡೆ, ಕಲೆವರು. ಒಂದೆಡೆಯಲ್ಲಿ, ಒಂದೆತರಹದ ಊಟ, ಉಪನಿಷತ್ಕಾರರು **'ಸಹನಾವವತು ಸಹನೌಭುನಕ್ತು ಸಹ ವೀರ್ಯಂಕರ ವಾವಹೈ '** ಎಂದು ನುಡಿದುದರ ಸಾರ್ಥ್ಯಕ್ಯ ಜೇಲಿನಲ್ಲಿ.

ಸಂಕ್ರಮಣ ಮಹೋತ್ಸವವು ಉಚ್ಚ-ನೀಚತೆಯ ಸಂಪರ್ಕವಿಲ್ಲದೇ ಸಾಗಿತು.

§ § § § § §

ದಿನರಾತ್ರಿಗಳು ಉರುಳುತ್ತಲಿದ್ದವು. ಆದಿತ್ಯವಾರ ಗೋದಿಯ ರೊಟ್ಟಿ, ಬೆಲ್ಲದ ತುಣುಕು! ಬರುವ ಆದಿತ್ಯವಾರವು ಹೋಳಿಗೆ ಕೊಡುತ್ತಿತ್ತು. ಇದುವೇ ನಾವಿನ್ನತೆ ಜೇಲಿನ ಜೀವನದಲ್ಲಿ. ಹದಿನೈದು ದಿನಕ್ಕೊಮ್ಮೆ, ಸೊಕ್ಕಿದರೋ ಸೊರಗಿದರೋ, ತಿಳಿಯಲು ತೂಕಬೇರೆ! '**ಆವರೋಗವು ನಿನಗೆ ಹೇಳ್ ಕೊಡುವೆ ಕುಡಿಯೋ**' ಎನ್ನುತ್ತ ಧನ್ವಂತರಿಗಳು ಬರುತ್ತಾರೆ. ಕೆಮ್ಮಿಗೆ-ದಮ್ಮಿಗೆ, ಹುರುಕಿಗೆ - ಹುಣ್ಣಿಗೆ, ವಾತಕ್ಕೆ-ಪಿತ್ತಕ್ಕೆ, ಜ್ವರಕ್ಕೆ ಅದೇಕೆ ಬದುಕಿಗೂ-ಸಾವಿಗೂ ಒಂದೇ ಔಷಧ. ಧನ್ವಂತರಿಯ ಔಷಧ(ಸಲಾಯಿನಬಾಟ್ಲಿ) ಕಲಶವನ್ನು ಕಳವಿಸಿಂದ ತಂದ ಶ್ರೇಯಸ್ಸು ಜೇಲಿನವರಿಗೇ ಸಲ್ಲುವುದು. ಓಡಿ ತರುವಾಗ ತುಳುಕಿ ಚೆಲ್ಲಿದುದನ್ನು ಜಗತ್ತಿನ ಡಾಕ್ಟರರು ಉಪಯೋಗಿಸುತ್ತಲಿರುವರು. ಸಾಯುತ್ತೇನೆ ಎಂದರೂ ಅದೇ ಕಲಶದ ವಾಸೀಯ, ಬದುಕುತ್ತೇನೆಂದರೂ ಅದೇ ಕಲಶ.

ಕಾನಡೇಯವರು, ತಿಂಗಳು ಕಳೆಯುವುದರಲ್ಲಿ, ಕನ್ನಡ ಮಾತುಗಳನ್ನು ತಿಳಿಯುವಂತಾದರು. ವಿಕ್ರಮನೊಡನೆ ಕನ್ನಡ ಮಾತನಾಡದೇ ಸಮಾಧಾನವಿರುತ್ತಿರಲಿಲ್ಲ ಶಾಸ್ತ್ರಿಗಳು ಕೈಗೆ ಸಿಕ್ಕುವುದೇ ಕಷ್ಟ. 'ಯೋಗಕ್ಷೇಮಂ ವಹಾಮ್ಯಹಂ' ಎನ್ನುವುದು, ಎಲ್ಲ ಕಡೆಗೂ ತಿರುಗುವುದು. ಭವಿಷ್ಯ ಹೇಳುವುದು, ಅವರ ನಿತ್ಯದ ನಿರಪೇಕ್ಷ ವ್ಯವಸಾಯ. ಅಡುಗೆ ಮಾಡುವಲ್ಲಿ, ನೂಲುವಲ್ಲಿ, ನೇಯುವಲ್ಲಿ, ರೋಗಿಗಳು ನರಳುವಲ್ಲಿ, ಶಾಸ್ತ್ರಿಗಳು ಇರತಕ್ಕವರೆ. '**ಕುಮಾರ ವ್ಯಾಸನ**' ನ ಕಾವ್ಯ ಪಠಣವು, ಜೋಗನ ಒತ್ತಾಯಕ್ಕೆ ನಡೆಯಲೇಬೇಕು ಶ್ರೋತೃವರ್ಗವು ಅಭಿವೃದ್ಧಿ ಪಡೆಯುತ್ತಲೇ ಇದ್ದಿತು ಶಾಸ್ತ್ರಿಗಳು ಕುಮಾರ ವ್ಯಾಸನನ್ನು ಬಾರಿಬಾರಿಗೂ ಸ್ತುತಿಸುವರು. ಅವನ ಪದ ಲಾಲಿತ್ಯ, ಭಾವಗಾಂಭೀರ್ಯ

ಗಳನ್ನು ಮನಸಾರೆ ಹೊಗಳುವರು. ಜೋಗನು ಜಳಕಕ್ಕೆ ಕುಳಿತಿರಲಿ, ತುತ್ತು ಬಾಯಿಗಿಕ್ಕುತ್ತಿರಲಿ, ಹಾಸಿಗೆಯ ಮೇಲಿರಲಿ, ನುಡಿಯುವುದು ಕುಮಾರವ್ಯಾಸನ ಕವನಗಳನ್ನು

" ಸಾಹಿತ್ಯಾಚಾರ್ಯರೇ ? "

" ಏನು ಕಾಣಡೆಯವರೆ "

**" ನಾಳೆ ಜನೆವರಿ ೨೬ ನೆಯ ದಿನ "**

**" ಸ್ವಾತಂತ್ರ್ಯ ದಿನ "**

" ವಿಜೃಂಭಣೆಯಿಂದ ಆಚರಿಸಬೇಕು. "

" ಆತಂಕವೇನು ? "

" ಜೇಲು. ಅದಕ್ಕಾಗಿ "

" ಎಲ್ಲಿದ್ದರೂ ಸರಿ. ರಾಷ್ಟ್ರಪತಿಗಳ ಆಜ್ಞೆ, ಇದೆ ಸತ್ಯಾಗ್ರಹ ಜೇಲಿನಲ್ಲಿಯೂ ಆಗಲಿ "

" ವ್ಯವಸ್ಥೆಗೆ ತೊಡಗುತ್ತೇನೆ. "

" ವೈಭವದಿಂದ ನೆರವೇರಲಿ "

**" ರಾಷ್ಟ್ರಧ್ವಜಕ್ಕೆ ಹೇಗೆ ? "**

" ಸಿದ್ಧಗೊಳಿಸುವೆ '

† † † † † †

ಜನವರಿ ೨೬ ನೆಯ ದಿನಾಂಕದ ಅರುಣೋದಯವಾಯಿತು. ಜೇಲಿನ ಕೈದಿಗಳು ಧ್ವಜಸ್ತಂಭದ ಸುತ್ತಲೂ ನಿಂತಿರುವರು **"ಜನಗಣ ಮನ ಅಧಿನಾಯಕ ಜಯಹೇ ಭಾರತ ಭಾಗ್ಯವಿಧಾತಾ, ಜಯಹೇ ಜಯಜಯಜಯಹೇ, ಭಾರತ ಭಾಗ್ಯವಿಧಾತಾ "** ಎಂದು ಏಕಕಂಠದಿಂದ, ಭಕ್ತಿಪಾರವಶ್ಯತೆಯಿಂದ, ನುಡಿಯುತ್ತಲಿದ್ದರು ಧ್ವಜವು ಗಾಳಿಗೆ ಮೈಒಡ್ಡಿ, ಪಟಪಟ ಹಾರಾಡುತ್ತಲಿತ್ತು ಸ್ವತಂತ್ರ ಭಾರತ ಮಾತೆಯು, ಕುಲುಕುಲು ನಗುತ್ತ ಬರುವಂತಿತ್ತು. ಎಲ್ಲರ ದೃಷ್ಟಿ

ಹಾರುವ ರಾಷ್ಟ್ರಧ್ವಜದಲ್ಲಿ ಲೀನವಾಗಿತ್ತು. ಕತ್ತೆತ್ತಿ ಸಿಸ್ತಿನಿಂದ ನಿರುಕಿಸುತ್ತಲಿದ್ದರು. ಧ್ವಜ ಸ್ತಂಭದ ಬದಿಯಲ್ಲಿ ಸಾಹಿತ್ಯಾಚಾರ್ಯರು ಗಂಭೀರರಾಗಿ ನಿಂತಿರುವರು. ಎಡದ ಮೈಯ್ಯಲ್ಲಿ ಕಾನಡೆ, ಜೋಗ, ಪ್ರಭೃತಿಗಳು. ಜೇಲು ಪ್ರತಿಧ್ವನಿ ಕೊಡುತ್ತಿದ್ದಿತು '**ಜಯಹೇ**' ಎಂದು. **ವಂದೇಮಾತರಂ** ಪದ ಪ್ರಾರಂಭವಾಯಿತು. ಇನಿಗೊರಲಿನಲ್ಲಿ ವಂದೇಮಾತರಂ ಪದ್ಯದ ಮಾಧುರ್ಯವು ತೆರೆತೆರೆಯಾಗಿ ಪ್ರವಹಿಸಿ, ಎಲ್ಲರ ಹೃದಯದಲ್ಲಿ ವಿಜಯಶ್ರೀಯ ಸಂಚಾರ ಮಾಡಿಸುತ್ತಿದ್ದಿತು. ಧ್ವಜಕ್ಕೆ ತ್ಯಾಗಿಗಳು ವೀರವಂದನ ಸಮರ್ಪಿಸಿದರು. ಪರಮಾತ್ಮನನ್ನು ಆರ್ತಧ್ವನಿಯಿಂದ ಕರೆಯುವ ಋಷಿಗಳಂತೆ, ತಾಯಿಯನ್ನು ಕೂಗಿ ಕರೆಯುವ ಮಗುವಿನಂತೆ, ಮಮತೆಯಿಂದ, ಬಿನದದಿಂದ, ಸಂತಸದಿಂದ '**ಭಾರತ ಮಾತೆ**'**ಯ** ಜಯಘೋಷ ಗೈದರು ರೋಮಹರ್ಷಿತರಾಗಿ, '**ಕನ್ನಡ ತಾಯಿ**'ಗೆ ಜಯಘೋಷ ಸಲ್ಲಿಸಿದರು. '**ವಂದೇಮಾತರಂ**' ಎಂದು ಸ್ವಾತಂತ್ರ್ಯಧ್ವಜಕ್ಕೆ ಬಾಗಿ ನಮಿಸಿದರು.

ಇಮಾಮಸಾಹೇಬರ ಸಂತೋಷವು ಅಪರಿಮಿತ. ಬಹಳ ಚನ್ನಾಗಿದೆ ಎಂದು, ಕೊಂಡು ಇಟ್ಟ 'ಹಸರು' ರುಮಾಲು, ಇಷ್ಟೊಂದು ಮರ್ಯಾದೆ ಪಡೆಯಿತಲ್ಲಾ ಎಂದು ಶಾಸ್ತ್ರಿಗಳು ಕೇಳಿದುದೇ ತಡ, ಹರಿದು ಧ್ವಜ ನಿರ್ಮಿಸಲು ಕೊಟ್ಟಿದ್ದರು. ತಮ್ಮ ಜನ್ಮನ ಸಾರ್ಥಕ್ಯವಾಯಿತೆಂದವರು ಮೂವರು. ಕೇಸರಿಯ ರುಮಾಲನ್ನು ಕೊಟ್ಟ ಶಿಂಗ್ರೀದಾದಾ, ಬೇಡವೆಂದರೂ ತೊಟ್ಟ ನೆಹರುಶರ್ಟನ್ನೇ ಧ್ವಜಕ್ಕಾಗಿ, ಕೊಟ್ಟ ಶಿವಮೂರ್ತಿ. ಖಾದಿಯದೇ ಎಂದು ಹೆಮ್ಮೆ ಶಿವಮೂರ್ತಿಗೆ. ತೊಟ್ಟುಕೊಳ್ಳಲು ಇನ್ನೊಂದು ಇಲ್ಲವೆಂಬುದು, ಧ್ವಜಗಳು ಸಿದ್ಧವಾದ ನಂತರ, ಶಾಸ್ತ್ರಿಗಳಿಗೆ ವಿದಿತವಾಯಿತು. ಜೇಲಿನಲ್ಲಿ ಹತ್ತು ಧ್ವಜಗಳು ಸಿದ್ಧವಾಗುವುದೆಂದರೆ ಸಾಮಾನ್ಯವೇ ?

ಜೇಲಿನ ಹತ್ತಿಪ್ಪತ್ತು ಕಂಬಳಿಗಳನ್ನು ಮಡಿಕೆ ಮಾಡಿ ಇರಿಸಿದರು. ಮೇಲೆ ಬಿಳಿಯ ವಸ್ತ್ರ ಹಾಸಿದರು. ಆಸಿಕಯೂ ಕಂಬಳಿಗಳದೇ. ಅದುವೇ

ಅಧ್ಯಕ್ಷಸ್ಥಾನ. ಇಕ್ಕೆಲದಲ್ಲಿ, ಚಿಕ್ಕ ರಾಷ್ಟ್ರಧ್ವಜ ಎತ್ತಿನಿಂತ, ಚಿಕ್ಕ ಬಾಲಕರಿಬ್ಬರು.

ಕೊಠಡಿಯ ಎದುರೇ ಅಧ್ಯಕ್ಷ ಪೀಠ ಇರುವುದು. ಎದುರು ವಿಶಾಲ ಸ್ಥಳ ಕಾಂಗ್ರೆಸ್ಸ ಕಾರ್ಯಕರ್ತರು. ಕ್ರಿಮಿನಲ್ ಮೊದಲಾಗಿ, ಎಲ್ಲರೂ ಜೈಲಿನಲ್ಲಿ, ಅಧ್ಯಕ್ಷ ಪೀಠದ ಮುಂದೆ ಕುಳಿತಿರುವರು. ಮಧ್ಯಾಹ್ನದ ನಾಲ್ಕು ಗಂಟೆಗೆ ಸರಿಯಾಗಿ ಅಧ್ಯಕ್ಷರು ಮಹಾರಾಷ್ಟ್ರ ಸ್ನೇಹಿತರೊಡನೆ ಬಂದರು ಕೈದಿಗಳು ಕರತಾಡನೆಯಿಂದ ಸ್ವಾಗತ ಕೋರಿದರು ಸೂಚನೆ, ಅನುಮೋದನೆಯ ಶಿಷ್ಟಾಚಾರಗಳಾದವು ನಿಯೋಜಿತ ಅಧ್ಯಕ್ಷರಾದ ಸಾಹಿತ್ಯಾಚಾರ್ಯರು ಪೀಠವನ್ನು ವಂದಿಸಿ, ಅಲಂಕರಿಸಿದರು. ಹರ್ಷೋದ್ಗಾರದ ತೆರೆಗಳು, ಸಭೆಯಲ್ಲಿ ಉಪ್ಪವವಾದವು ' ತಮಗಿಂತಲೂ ಶ್ರೇಷ್ಠರು, ತ್ಯಾಗಿಗಳು ಅಧ್ಯಕ್ಷರಾಗಿದ್ದರೆ' .. ಎಂಬ ನಭೆಯ ನಿಯಮದಂತೆ ಮಾತನಾಡಿ, ' ನಿಮ್ಮ ಬೆಂಬಲದಿಂದ ಸಭೆಯ ಕಾರ್ಯ ನೆರವೇರಿಸುವೆ ' ಎಂದರು ' ಕಾರ್ಯಕ್ರಮ ಪ್ರಾರಂಭವಾಗಲಿ ' ಎಂದರು.

**ಭಾರತ ಸುಮಂಗಲ** ಗೀತೆಯನ್ನು, ಮಂಜುಲಕಂಠದಿಂದ ಹಾಡಿದರು, ಮೂವರು ಕಲೆತು. ' ಭಾರತದ ಪರಿಸ್ಥಿತಿ ' ಯನ್ನು ಹೃದಯಂಗಮವಾಗಿ ತೋರಿದರು ಜೋಗರು. ' ಜನವರಿ ೨೬ ನೆಯ ದಿನ ' ದ ವಿಷಯವಾಗಿ ಕಾನಡೆಯವರು ಸ್ಫೂರ್ತಿ ತುಂಬುತ್ತ ಮಾತನಾಡಿದರು. **' ಸ್ವಾತಂತ್ರ ಘೋಷಣೆ '** ವಿಷಯವನ್ನೆತ್ತಿ, ಕಾಂಗ್ರೆಸ್ಸಿನ ಪೂರ್ವ ವೃಂತ್ತಾಂತ ತಿಳಿಸಿ, ಘೋಷಣೆಯ ಮಹತಿಯನ್ನು ಸ್ಪಷ್ಟೀಕರಿಸಿದರು ಜಿಜೂರೀಕರರು. **' ವಂದೇ ಮಾತರಂ '** ಮಂತ್ರದ ಮಾಧುರ್ಯವನ್ನು ಬಿಂಗಡಿಸಿ ತೋರಿಸಿದರು ಸಾಠೆಯ ಮಾಧವರಾಯರು. ಮಾತನಾಡಿದವರೆಲ್ಲ, ವಿಷಯವು ನಭಿಕರ ಮನಮುಟ್ಟಿದುದನ್ನು ಕಂಡುಕೊಂಡರು. ಕನ್ನಡದಲ್ಲಿ ಮೂವರು ಮಾತನಾಡಿದನಂತರ ' ಸಾಹಿತ್ಯಾಚಾರ್ಯರು ಎದ್ದುನಿಂತರು. ಮತ್ತೆ ಕರತಾಡನೆಯ ಸದ್ದು ಎದ್ದಿತು. ಪ್ರಿಯ ಬಾಂಧವರೇ ...' ಎಂದು ಕೈ ಮುಗಿದು ಕೂಗಿದರು. ಜೋಗರು ' ಪ್ರಿಯಬಾಂಧವಾನ್ನೋ ' ಎಂದು ಪ್ರಾರಂಭಿಸಿದ. ನಭಿಕರು ಚಿತ್ತಪಟ್ಟು ಕೇಳುತ್ತಲಿದ್ದರು. ಕಾಂಗ್ರೆಸ್ಸಿನ

ತತ್ವ, ಮಹಾತ್ಮರ ಸಂದೇಶಗಳನ್ನು ಹೇಳಿ. ‘ನಾವೆಲ್ಲ ವಿಪ್ಲವ ಕಾಲದಲ್ಲಿ ಜನ್ಮಿಸಿದ್ದೇವೆ. ಭಾರತದ ಪಾರತಂತ್ರ್ಯ ವಿಚ್ಛೇದನೆಗೆ, ಅಳಲಿಯ ಸೇವೆ ನಲ್ಲಿಸಿದ್ದೇವೆ. ಮುಂದಿನವರ ನಾಲಗೆಯಲ್ಲಿ ನಿಮ್ಮ ಚರಿತ್ರೆ ನಿಲ್ಲುವುದು. ಭಾರತ ಸ್ವಾತಂತ್ರ್ಯ ಸಂಪಾದನೆಯ, **ವೀರ**ರೆಂದು ಚರಿತ್ರೆಗಳಾಗುವವು. ಮಾನ್ಯರೇ. ಕಷ್ಟ ದಾರಿದ್ರ್ಯತೆ ಎನ್ನದೇ ನೀವಿಂದು ಭಾರತರಾಷ್ಟ್ರದ ಉದ್ಧಾರಕ್ಕಾಗಿ ಕಾರಾಗೃಹದಲ್ಲಿರುವಿರಿ. ಕಾಂಗ್ರೆಸ್ಸಿನ ಧುರೀಣರು, ಇದುವೇ ಕೊನೆಯ ಹೋರಾಟವೆಂದು ಸಾರಿದ್ದಾರೆ ಕೆಲವರು ಹತಾಶರಾಗಿರಬಹುದು. ಕೆಲವರು ಕಾರಾಗೃಹದ ಕಷ್ಟಕ್ಕೆ ಮಣಿದಿರಬಹುದು. **ಧ್ಯೇಯಸಾಧನೆ**ಯಾಗದೇ ಅಡಿಯನ್ನು ಹಿಂದಿಡೆವು ಎಂದು ದೃಢ ಪ್ರತಿಜ್ಞೆಯಿಂದ ಬದ್ಧರಾಗಿರಿ. **೫೭ ರ ಹೋರಾಟ**ವು ಮಹಾನ್-ಮಹಾನ್ ವೀರರನ್ನು ದಯಪಾಲಿಸಿದೆ. **ಛತ್ರಪತಿ ಸಂಭಾಜಿ ಮಹಾರಾಜ** ರಂಥ, ಕ್ಷಾತ್ರವೃತ್ತಿಯ ಆಧುನಿಕ ಸಂಭಾಜಿಗಳು ಉದಯವಾಗಿದ್ದಾರೆ. **ಝಾಂಸಿ ರಾಣಿ, ಕಿತ್ತೂರ ಚೆನ್ನಮ್ಮ** ನಂತಹ ನಾರೀರತ್ನಗಳು, ಈ ಹೋರಾಟದ ಮಧ್ಯದಲ್ಲಿ ಬೆಳಗುತ್ತಿವೆ. ನೀವು ವೀರರ ಕುವರರು ಸಾಮ್ರಾಜ್ಯಕಟ್ಟಿ ವೈಭವದಿಂದ ರಾಜ್ಯವಾಳಿದವರ ವಂಶಜರು. ಜಾಗೃತರಾಗಿ ಪೂರ್ವ ವೈಭವವನ್ನು ಸ್ಮರಿಸಿರಿ. ಭಾರತ ಸ್ವಾತಂತ್ರ್ಯ ಧ್ಯೇಯ ಸಿದ್ಧಿಯಾಗುವವರೆಗೂ, ಪ್ರಪಂಚ ವ್ಯಾಮೋಹವನ್ನು ತೊರೆಯಿರಿ ಬಿಡುಗಡೆಯ ಮರುಕ್ಷಣವೇ ಕರ್ತವ್ಯದ ಸ್ಮರಣೆ ಇರಲಿ. ಹೇಳಿಯಂತೆ ಮನೆಗೆ ಹೋಗುವುದು ಬೇಡ **ಸ್ವತಂತ್ರ ಭಾರತವಾಗಲಿ. ಸ್ವಾತಂತ್ರ್ಯೋತ್ಸವದ ದಿನವೇ ಮನೆ ಮುಟ್ಟುವೆನೆ. ಇಲ್ಲವೇ ಈ ತೃಣ ಸಮಾನ ದೇಹವು ರಾಷ್ಟ್ರದೇವಿಯ ಸನ್ನಿಧಿಗಿರಲೀ** ಎಂದು ಪ್ರತಿಜ್ಞೆ ಕೈಕೊಳ್ಳಿರಿ ಲಾಹೋರ ಕಾಂಗ್ರೆಸ್ಸಿನ ನಿರ್ಣಯವನ್ನು ನಿಂತು ನುಡಿದಂತೆ ಅಲ್ಲ. ನುಡಿದಂತೆ ನಡೆಯಬೇಕು. ಅಂತಹ ಕ್ಷಾತ್ರತೇಜ ನಿಮ್ಮಲ್ಲಿದೆ. ಸಿಂಹದ ಮರಿಗಳೆಂದೇ ಇಲ್ಲಿಗೆ ಬಂದಿದ್ದೀರಿ. ಲಾಹೋರ ಕಾಂಗ್ರೆಸ್ಸಿನ ಸ್ವಾತಂತ್ರ್ಯ ಪ್ರತಿಜ್ಞೆಯು, ಅಸೀಮ ಚಟುವಟಿಕೆಯ ಸ್ಫೂರ್ತಿಯನ್ನು ಕೊಡುತ್ತಿದೆ. ವೇ. ಭ. ಕಾನಡೆಯವರು, **ಪ್ರತಿಜ್ಞೆ**ಯ ಒಂದೊಂದೇ ವಾಕ್ಯಗಳನ್ನು ಸುಸ್ಪಷ್ಟವಾಗಿ ನುಡಿಯುತ್ತಾರೆ. ನೀವೆಲ್ಲರೂ,

ತಾಳ್ಮೆಯಿಂದ, ಉಚ್ಚರಿಸಿ ಮನಸಾ ಪ್ರತಿಜ್ಞೆಗೆ ಬದ್ಧರಿರುವೆನೂ ಎಂದು ನುಡಿಯಿರಿ. ಎದ್ದು ನಿಂತು, ಶಾಂತಭಾವದಿಂದ, ಪ್ರತಿಜ್ಞೆ ಕೈಕೊಳ್ಳುವಿರೆಂದು ನಂಬುತ್ತೇನೆ '' ಕಾನಡೆಯವರು ಪ್ರತಿಜ್ಞಾಯ ಪ್ರತಿಯನ್ನು ಹಿಡಿದು ಸಭೆಯ ಮುಂದೆ ನಿಂತರು ಕೈದಿಗಳೆಲ್ಲ ಶಾಂತರಾಗಿ ಕಾನಡೆಯವರು ಹೇಳಿದಂತೆ, ಅನ್ನುತ್ತಲಿದ್ದರು. ಎಲ್ಲರ ಚಿತ್ತವು ಪ್ರತಿಜ್ಞೆಯ ಅಂತರಂಗದಲ್ಲಿ ತಲ್ಲೀನಗೊಂಡಿತ್ತು. ಅಧ್ಯಕ್ಷರ ಮೊದಲು ಕೈದಿಕಡೆಯಾಗಿ ಜೇಲಿನವರೆಲ್ಲ, ಶಾಂತ ಸ್ವರದಿಂದ ಪ್ರತಿಜ್ಞೆ ಕೈಕೊಳ್ಳುತ್ತಲಿದ್ದರು.

ಜೇಲರನು ಕಳ್ಳಹೆಜ್ಜೆ ಹಾಕುತ್ತ ಒಳಗೆಬಂದ· ಭಾಷಣ ಕೇಳುತ್ತ ಸೀಪಾಯಿಯನ್ನು ಕಂಡ. ಜಮಾದಾರರನ್ನು ನೋಡಿದ, ದೂರದಲ್ಲಿ ಕುರ್ಚಿಯ ಮೇಲೆ ಕುಳಿತದ್ದನ್ನು. ಕ್ರಿಮಿನಲ್ ಕೈದಿಗಳೂ ಸ್ವಾತಂತ್ರ ಸಭೆಯಲ್ಲಿ ಭಾಗ ವಹಿಸಿದುದನ್ನು ನಿರೀಕ್ಷಿಸಿದ. ಹಗುರಾಗಿ ಹೆಜ್ಜೆ ಇಡುತ್ತ ಜನಮಧ್ಯದಲ್ಲಿ ಹೊಕ್ಕ. ತಲ್ಲೀನರಾಗಿ ಪ್ರತಿಜ್ಞೆಕೊಳ್ಳುತ್ತಲಿರುವ ಕೈದಿಗಳಿಗೆ, ಪ್ರಜ್ಞೆ ಇದ್ದಂತಿರಲಿಲ್ಲ. ನೇರವಾಗಿ ಅಧ್ಯಕ್ಷ ಪೀಠದ ವರೆಗೆ ನುಗ್ಗಿ ಕಾನಡೆಯವರ ಕೈಯ್ಯಲ್ಲಿದ್ದ ಕಾಗದವನ್ನು, ಭರದಿಂದ ಕಸಿದ. ಕಾನಡೆಯವರು ಕಸಿದುದನ್ನು ಗಮನಿಸಿದರೂ ಪ್ರತಿಜ್ಞಾವಿಧಿಯನ್ನು ಪೂರ್ಣಮಾಡಲೇಬೇಕಾದುದರಿಂದ, ಮುಖೋದ್ಗತವಿದ್ದ ಲಾಹೋರ ಕಾಂಗ್ರೆಸ್ಸಿನ ನಿರ್ಣಯ ಹೇಳುವುದನ್ನು ನಿಲ್ಲಿಸಲಿಲ್ಲ. ಜನ ಉಚ್ಚರಿಸುತ್ತಲೇ ಇತ್ತು. ಜೇಲರನು ಆರ್ಭಟಿಸಿ, ಕಾನಡೆಯವರಿಗೆ ಹೊಡೆದ. ಕಾನಡೆಯವರು ಕದಲಲಿಲ್ಲ. ಬಾಯಿ ಒತ್ತಿ ಹಿಡಿಯಲು ಮುಂದಾದನು ಜೇಲರ. ಸೀಪಾಯಿಗಳು ಶುದ್ಧಿಯ ಮೇಲೆ ಬಂದರು. ಜಮಾದಾರನ ಗತಿ ಭಗವಂತನೇ ಬಲ್ಲ. ರಜೆ ಕೂಡಿರುವನೆಂದು ತಿಳಿದೇ, ತನ್ನ ಅಧಿಕಾರದಲ್ಲಿ, ಸ್ವಾತಂತ್ರ ದಿನ ಆಚರಿಸಲು ಅನುವು ಕೊಟ್ಟಿದ್ದ. ತಾನೂ ಓಡಿ ಮುಂದಕ್ಕೆ ಬಂದ. ಕಾನಡೆಯವರಿಗೆ ಬಡಿತಬೀಳುತ್ತಲಿದ್ದವು. ಪ್ರತಿಜ್ಞೆಯ ವಿಧಿ ಉಚ್ಚರಿಸುವುದಾಯಿತು. ಕೈದಿಗಳು ಜೇಲರನು ನಡೆಯಿಸಿದುದನ್ನು ಕಣ್ಣಾರೆ ಕಂಡರು. ಶಾಸ್ತ್ರಿಗಳಿಗೂ ಒಂದೆರಡು ಕಡಿತ ದೊರೆತಿದ್ದುವು. ಕೂಡಿದ ಜನಕ್ಕೆ ಜೇಲರನ ವರ್ತನೆ ಸಹನೆಯಾಗದೇ

ನುಗ್ಗಿದರು, ಹಿಡಿ, ಹೊಡಿ, ಕಟ್ಟು' ಎಂದು ಆರ್ಭಟದಿಂದ ಕೂಗಿದರು. ಜೇಲರನು ತಬ್ಬಿಬ್ಬಾದ! ಜನಜಂಗುಳಿಯ ನಡುವೆ ಬರಬಾರದಾಗಿತ್ತೆಂದು ಹತ್ತು ಜನ 'ಹುಯ್ ಹುಯ್' ಎನ್ನುತ್ತ ಹೊತ್ತರು ಜೇಲರನನ್ನು. ಕೊಠಡಿಯಲ್ಲಿ ಹಾಕಿದರು. ಬಾಗಿಲನ್ನು ಮುಚ್ಚಿದರು ವೀರಸೇನಬೇಕು ಜೇಲರನಿಗೆ. ತನ್ನದರ್ಪದ ಬಾಯಿಗೆ ಹೇಳಿಯೇ ಬಿಟ್ಟಿರಬೇಕು. 'ಇಂತಹ ಸಂದರ್ಭ ದೊರೆಯದು ಮಾತನಾಡು ಜೈ. ಬೊಗಳು ಕೀಳು ಶಬ್ದಗಳ ಸಂಗ್ರಹವಿದ್ದಷ್ಟು ಹೊರಗೆ ದೂಡಿಬಿಡು' ಎಂದು

ಕಾನಡೆ ಗದ್ದಲು ಸರಿಸಿ ಮುಂದ ನುಗ್ಗಿದ ಶಾಸ್ತ್ರಿಗಳು ಜನತೆ ಎಸಗಿದ ಅನ್ಯಾಯವನ್ನು, ಬಲವಾಗಿ ಖಂಡಿಸಿ, ಕೈದಿಗಳನ್ನು ದೂಡಿ ಬಾಗಿಲು ತೆರೆಸುವದಕ್ಕೆ ಪ್ರಯತ್ನಿಸುತ್ತಿದ್ದರು. 'ಕಾರ್ಯಕರ್ತರ ಮುಖಕ್ಕೆ ಕಪ್ಪು ಬಡಿಯಬೇಡಿ. ಶಿಸ್ತಿನಿಂದ, ಶಾಂತತನದಿಂದ ಒಂದಕ್ಕೆ ಸರಿಯಲು, ವಿನಂತಿ ಮಾಡಿಕೊಳ್ಳುತ್ತಲಿದ್ದರು. ತಮ್ಮ ತಮ್ಮ ಕೊಠಡಿಯೊಳಕ್ಕೆ ಹೋಗಲು ನಮಸ್ಕರಿಸಿ ಬೇಡುತ್ತಿದ್ದರು. ಕೆಲವರು ಮಾತಿಗೆ ಬೆಲೆನೀಡಿ ಕೊಠಡಿಯಲ್ಲಿ ಹೊಕ್ಕರು. ಕೆಲವರು ಇದೇ ಸಮಯವೆಂದು ಕೂಗಿದರು. ಕಾನಡೆ-ಶಾಸ್ತ್ರಿ ಇರದಿದ್ದರೆ ಜೇಲರನಿಗೆ ಯಮಲೋಕಕ್ಕೆ ವರ್ಗವೇ ಆಗುತ್ತಿತ್ತು. ಜೇಲರನನ್ನು ಆಫೀಸದ ವರೆಗೆ ಕಳಿಸಿ ಬಂದರು. ತಾವೇ ನಿಂತು ಎಲ್ಲ ಕೊಠಡಿಗಳಲ್ಲಿ ಕೈದಿಗಳನ್ನು ಹಾಕಿ, ಪೋಲೀಸರಿಂದ ಕೀಲೀ ಹಾಕಿಸಿದರು. ಜೇಲರನು ಕೃತಜ್ಞತೆ ವ್ಯಕ್ತಪಡಿಸಬೇಕೆಂಬ ಅಪೇಕ್ಷೆ ಇಬ್ಬರಿಗೂ ಇರಲಿಲ್ಲ.

ಅನಿರೀಕ್ಷಿತ ಗಲಭೆ ಆದುದರಿಂದ, ಸಾಯಂಕಾಲಕ್ಕೆ ಧ್ವಜವಂದನೆ ಇಬ್ಬರೇ ಜರುಗಿಸಿ, **ವಂದೇಮಾತರಂ** ಎಂದರು. ಸ್ವಾತಂತ್ರ್ಯ ದಿನವು ಈ ರೀತಿ ನಡೆಯಬೇಕೆಂದು ವಿಧಿ ನಿಯಮವಿದೆ' ಎಂದುಕೊಂಡು ಕೊಠಡಿಯನ್ನು ಹೊಕ್ಕರು. ಪೋಲೀಸನು ಕೀಲಿ ಜಡಿದ ಅಬ್ಬರದಿಂದ.

## ಸುಖ-ಸಂಚಾರಿಗಳು.

" ವಿಕ್ರಮಶಾಸ್ತ್ರಿ .... " ಕೂಗಿದುದನ್ನು ಕೇಳಿ ಲಗುಬಗೆಯಿಂದ ಎದ್ದು ' ಯಾರು ! ' ಎಂದ. ' ನಾನೇ ಜೇಲರ '

" ಏನು ಕೆಲಸ ? "

" ಹೆಸರುಗೊಂಡು ಕೂಗುವೆ. ಕರೆದ ಹೆಸರಿನವರೆಲ್ಲ ತಮ್ಮಗಂಟು, ಹಾಸಿಗೆ ಹೊದಿಕೆ ಸಹಿತ, ಜೇಲಿನ ಸಾಮಾನುಗಳನ್ನು ಅಲ್ಲಿಯೇ ಬಿಟ್ಟು ಹೊರಗೆ ಬರಬೇಕು. "

" ಮಧ್ಯರಾತ್ರಿಯ ಸಮಯ ! ಏತಕ್ಕೆ ಬರಬೇಕು ! "

" ನೀವೆಲ್ಲ ಶೂರರೆಂದು ಬೇರೆ ಜೇಲಿಗೆ ಕಳಿಸುವೆ "

" ಯಾವ ಜೇಲಿಗೆ? "

" ಶಾಸ್ತ್ರೀ ಹಾಗೆಲ್ಲ ಕೇಳಬಾರದು. "

ಶಾಸ್ತ್ರಿಗಳ ಹೇಳಿಕೆಗೆ ಕೈದಿಗಳು ಸಂಮತಿಸಿದರು. ಯಾರ ಹೆಸರು ಹೊರಬರುವುವೆಂಬುದರ ನಿಯಮವಿಲ್ಲ ಇದ್ದರೂ ಸರಿ. ಹೋದರೂ ಸರಿ, 'ಪ್ರೀತಿ ಇರಲಿ, ಮರೆಯಬೇಡಿ, ಕಾಗದ ಬರೆಯಿರಿ' ಎಂಬ ಹೇಳಿಕೆಗಳು ನಡೆದುವು ವಿಳಾಸ ಬರೆದುಕೊಂಡರು ಕತ್ತಲಲ್ಲಿ ಗೆಳೆಯರು ಒಬ್ಬರನ್ನೊಬ್ಬರು ಆಲಂಗಿಸಿದರು. ಅಗಲಿರುವ ಪ್ರಸಂಗ ಬಂದುದಕ್ಕೆ ಜೇಲರನನ್ನು ಶಪಿಸಿದರು. ಕೊಠಡಿಯಲ್ಲಿಯ ಕೈದಿಗಳು ಶಾಸ್ತ್ರಿಗಳ ಪಾದಕ್ಕೆ ಬಿದ್ದರು. ಶಾಸ್ತ್ರಿಗಳು ಎಲ್ಲರನ್ನೂ ಸಂತೈಸಿದರು. 'ನಾವೆಲ್ಲ ಒಂದೇ ತಾಯಿಯ ಮಕ್ಕಳು. ಮತ್ತೆ ಕಲೆಯುತ್ತೇವೆ. ಒಂದೇ ಧ್ಯೇಯಕ್ಕಾಗಿ ಕಲೆ ತಿದ್ದೆವು ನಾನು ನಿಮ್ಮನ್ನು ಅಗಲಿ ಹೋದರೂ- ನನ್ನ ಹೃದಯದಲ್ಲಿ ನಿಮ್ಮನ್ನು ಕೂಡ್ರಿಸಿರುವೆ. ನೀವು ತೋರಿದ ಪ್ರೀತಿ ವಿಶ್ವಾಸಗಳನ್ನು ನಾನೆಂದೂ ಮರೆಯಲಾರೆ ನಿಮ್ಮ ಅನುಕರಣೀಯ ವರ್ತನೆ,- ನನ್ನ ಜೀವ ನಕ್ಕೆ ಸ್ಫೂರ್ತಿಯನ್ನು ಕೊಟ್ಟಿವೆ. ಗೆಳೆಯರೇ, ನನ್ನವರೂ ಎಂದು, ನಿಮಗೆ ನಾನೇನಾದರೂ ಬಿರುನುಡಿಗಳನ್ನಾಡಿದ್ದರೆ ಮರೆತು, ನನ್ನನ್ನು ಕ್ಷಮಿಸಿರಿ. ವಿಕ್ರಮನು ನಿಮ್ಮ ಒಡಹುಟ್ಟಿದ ತಮ್ಮನೆಂದು ತಿಳಿಯಿರಿ. ಸರ್ವಶಕ್ತನಾದ ಪರಮೇಶ್ವರನು, ಧ್ಯೇಯಸಿದ್ಧಿಯನ್ನು ಕರುಣಿಸಲಿ **ಭಾರತರಾಷ್ಟ್ರವು ಬೇಗನೇ ಸ್ವತಂತ್ರವಾದುದನ್ನು ನಾವೆಲ್ಲ ನೋಡುವಂತೆ ಅನುಗ್ರಹಿಸಲಿ!** ' ಎಂದು ಕೈಮುಗಿದ. ಕತ್ತಲಲ್ಲಿಯೇ ಚಿಕ್ಕ ಭಾಷಣ ಮಾಡಿದ ಬೀಳ್ಕೊಟ್ಟರು.

ಐವತ್ತೇ ಹೆಸರುಗಳು ಹೊರಬಂದುವು, ವಿಕ್ರಮನದೇ ಮೊದಲ ನಯದು. ಜೋಗರು ವಿಕ್ರಮನ ಪಂಕ್ತಿಯಲ್ಲಿದ್ದರು ಮಹಾರಾಷ್ಟ್ರೀಯ ಗೆಳೆಯರು ವಿಕ್ರಮನೊಡನೆ ಹೊರಡಲು, ಹೆಸರು ಬಾರದ್ದಕ್ಕೆ ಮರುಗಿದರು. ಐವತ್ತು ಜನ ಹಾಸಿಗೆ ಹೊತ್ತು ನಡೆದರು ಸಿಪಾಯಿಗಳ ಬೆಂಬತ್ತಿ ಪ್ರತಿ ಕೊಠಡಿಯವರು 'ಶಾಸ್ತ್ರಿಗಳೇ ನಮಸ್ಕಾರ. ಹೋಗಿಬನ್ನಿ' ಎನ್ನುತ್ತಿದ್ದರು. ಕಾನಡೆ ಖಿನ್ನ ಮನಸ್ಕನಾಗಿ ಕೊಠಡಿಯಲ್ಲಿಯೇ ಗೋಡೆಗೆ ಆತು ನಿಂತಿದ್ದ. ಕಲವರು ಅಗಲುವಿಕೆಯಿಂದ ಕಣ್ಣೀರು ತಂದರು ಜೇಲಿ

ನವರೆಲ್ಲ ಶಾಸ್ತ್ರಿಗಳಿಗೆ ವಂದನೆ ಸಮರ್ಪಿಸಿ, ರಾಷ್ಟ್ರದ ಜಯಘೋಷ ಮಾಡಿ ಬೀಳ್ಕೊಟ್ಟರು.

ಮೈಮುಖದ ಗುರುತುಗಳನ್ನು ಪರೀಕ್ಷಿಸುವ ವಿಧಾನವನ್ನು ಕ್ಷಿಪ್ರದಲ್ಲಿಯೇ ಮುಕ್ತಮಾಡಿದರು. ಶಾಸ್ತ್ರಿಗಳು ವಿನೀತರಾಗಿ ಕೇಳಿದರು. ವಂದನೆಕೊಟ್ಟು ಪ್ರಶ್ನಿಸಿದರು, ಯಾವ ಜೇಲಿಗೆ ಎಂಬುದನ್ನು, ಜೇಲರನು ಹೇಳಲೇ ಇಲ್ಲ. ಒಬ್ಬನ ಬಲದಕ್ಕೆ, ಇನ್ನೊಬ್ಬನ ಎಡದಕ್ಕೆ ಮುಂಗೈಗಳನ್ನು ಕೂಡಿಸಿ ' ಜೋಡಿ ' ಹಾಕಿದರು. ಕಾಲಿನಲ್ಲಿ ಕಬ್ಬಿಣ ಬಳೆ, ಬಳೆಗೆ ತೊಡಕಿದ ಕಬ್ಬಿಣ ಸರಪಳಿ ಟೊಂಕಕ್ಕೆ ಬಿಗಿದರು ಇಬ್ಬರಿಗೆ ಒಬ್ಬರಂತೆ, ಕೈದಿಯ ಸಂರಕ್ಷಣೆಗೆ ಪೋಲೀಸರು. ಹೆಬ್ಬಾಗಿಲು ತೆರೆದು ಹೊರಹಾಕಿದರು. ಜಮಾದಾರನು ಕೈಮುಗಿದ ಶಾಸ್ತ್ರಿಗಳಿಗೆ ಕೈದಿಗಳನ್ನೆಲ್ಲ ಮಿಲಟರಿ ಲಾರಿಯಲ್ಲಿ ತುಂಬಿದರು. ಇಬ್ಬರ ನಕ್ಕದಲ್ಲಿ ಒಬ್ಬೊಬ್ಬ ಸಿಪಾಯಿ ಬಂದೂಕಿನೊಡನೆ, ದಕ್ಷತೆಯಿಂದ ನಿಂತರು ಲಾರಿ ಓಡಿತು ರೈಲ್ವೆ ಸ್ಟೇಶನ್ನದವರೆಗೆ

ಟ್ರೇನು, ಕೈದಿಗಳನ್ನು ಕೂಡ್ರಿಸಿಕೊಂಡು ಓಡಿತು. ಕೈದಿಗಳು, ಒಬ್ಬರು ಒಬ್ಬರ ಮೈಲಿತು, ತೂಕಡಿಸತೊಡಗಿದರು. ಸಿಪಾಯಿಗಳಿಗೆ ನಿದ್ರೆ ಬಂದಿರಲಿಕ್ಕಿಲ್ಲ ! ಶಾಸ್ತ್ರಿಗಳು ಜಾಗೃತಾವಸ್ಥೆಯನ್ನೇ ಪಡೆದಿದ್ದರು. ತಂಬಾಕು ಬೇಡಿತು ಮನಸ್ಸು ಅಪರಿಚಿತ ಸಿಪಾಯಿಗಳನ್ನು ಕೇಳಿದರೆ ಕೊಡುವರೋ ? ಕೊಡದಿದ್ದರೆ ಇಲ್ಲ. ಬೈದರೆ ಪರಿಚಿತರಾರೂ ಎಚ್ಚರಿಲ್ಲ. ಸಿಪಾಯಿ ಮುಖನೋಡ ತೊಡಗಿದ ವಿಕ್ರಮನ ನೋಟಕ್ಕೆ ಸಿಪಾಯಿ ಬೆದರಿದನೇನೋ ! ತನ್ನ ಎರಡೂ ಕೈಗಳಿಂದ ಬಂದೂಕನ್ನು ಬಿಗಿದು ಹಿಡಿದ. ತಾನು ಹಿಡಿದುದು ಬಂದೂಕು ಅಹುದೋ ಅಲ್ಲವೋ ಎಂಬ ಸಂಶಯವಿದ್ದವರಂತೆ, ಕ್ಷಣಕ್ಷಣಕ್ಕೂ ಬಂದೂಕು ತನ್ನ ಎರಡು ಕೈಗಳಲ್ಲಿಯೇ ಇದೆ ಎಂದು, ಮನಸ್ಸಿಗೆ ಹೇಳುತ್ತಿದ್ದ. ವಿಕ್ರಮನು ಸಿಪಾಯಿಯ ಸಂಶಯವೃತ್ತಿ ಕಂಡು, ಮಾತನಾಡಿಸುವ ಉತ್ಸುಕತೆ ಆಯಿತು. ವಿಕ್ರಮನು ಎದ್ದುನಿಂತ. ಸಿಪಾಯಿ ಬಂದೂಕನ್ನು, ವಿಕ್ರಮನ ಎದೆಗೆ ತಟ್ಟಿಸಿ ' ಕೂಡ್ರು. ನಿಲ್ಲಬೇಡ ' ಎಂದ.

" ತಮ್ಮ ಅಪ್ಪಣೆ " ಎಂದು ಶಿರಬಾಗುವ ಶರಣಪ್ಪನವರನ್ನು ಬಿಟ್ಟ. ಸೀಪಾಯಿ ಮೆಲ್ಲನೇ ಬಂದೂಕನ್ನು ತೆಗೆದುಕೊಂಡ. ವಿಕ್ರಮನು ನಯವಾಗಿ—

" ಪೋಲಿಸಸಾಹೇಬ " ಎಂದ.

" ಏನು ಬೇಕು ? " ಬಂದೂಕನ್ನು ಘಟ್ಟಿಸಿ ಕೇಳಿದ.

" ಕೋಪಮಾಡಿಕೊಳ್ಳಬೇಡಿ "

" ಏನು ಬೇಕಾಗಿದೆ ರಾಯರೆ ? " ಬೇರೊಬ್ಬ ಸೀಪಾಯಿ ಸಹಾನು ಭೂತಿ ತೋರಿ ಕೇಳಿದ.

" ತಂಬಾಕ........"

" ತೆಗೆದುಕೊಳ್ಳಿ, ನಾನು ಕೊಡುತ್ತೇನೆ"

ಸಿಪಾಯಿಯು ಬಂದೂಕನ್ನು ನೆಲಕ್ಕೆ ಮಲಗಿಸಿ, ಚೀಲದಲ್ಲಿ ಇರಿಸಿದ ಚಂಚಿಯನ್ನು ಉಚ್ಚುತ್ತ, ವಿಕ್ರಮನಿರುವಲ್ಲಿಗೆ ಬಂದು, ಪ್ರಶಸ್ಥ ಆಸನ ಹಾಕಿ ಕುಳಿತ. ತಂಬಾಕು ನೀಡಿದ. ವಿಕ್ರಮನು ಸೀಪಾಯಿಗೆ ಹೇಳಿದ.

" ಭಿಕ್ಷೆಬೇಡುವುದೂ ಒಂದು ವಿದ್ಯೆ ಅಲ್ಲವೇ ? "

" ನಾಚಿಕೆ ಬಿಟ್ಟರಾಯಿತು. ಅದರಲ್ಲೇನಿದೆ "

" ನಾಚಿಕೆ ಬಿಡಲೂ ಕಲಿಯಬೇಕಲ್ಲವೇ. ಪ್ರಥಮಪಾಠವೆಂದು ತಂಬಾಕು ತಿನ್ನುವುದನ್ನು ಕಲಿಯಬೇಕು. ಇಲ್ಲದಾಗಲು, ಯಾರಬಾಯಿ ಕೆಂಪಾಗಿದೆ. ಯಾರ ಬೆರಳಿಗೆ ಸುಣ್ಣ ಮೆತ್ತಿದೆ. ನೋಡುವುದು.— ಕೊನೆಗೆ 'ಭಿಕ್ಷಾಂದೇಹಿ' ಎಂದು ಜೋಳಿಗೆ ಮುಂದೆ ಹಿಡಿಯುವುದು.

" ಇದರಲ್ಲೇನು ರಾಯರೇ; ಪ್ರಸಂಗದಲ್ಲಿ ಎಂಥೆಂಥವರೂ ಕೇಳುವರು. ಜೇಲಿನಲ್ಲಿ ದೊರೆಯುತ್ತಿತ್ತೆ ?"

" ಜಮಾದಾರರು ಒಳ್ಳೆಯವರಿದ್ದರು "

" ಸರಿಬಿಡಿ ಹಾಗಾದರೆ. ಶಿಕ್ಷೆ ಎಷ್ಟಾಗಿದೆ ?"

" ಆರುತಿಂಗಳು "

" ಇಷ್ಟೇ ? "

" ಕಡಿಮೆ ಆಗಿದೆ ಎನ್ನುವಿರೇನು ? "

" ನೀವು ಕಾಂಗ್ರೆಸ್ ಕೆಲಸ ಮಾಡಿದವರೇ ಅಲ್ಲ !! "

" ನಿಮ್ಮ ಮಾತಿನ ಅರ್ಥವೇ ತಿಳಿಯಲಿಲ್ಲ "

" ಈ ಸಲ ಕಾಂಗ್ರೆಸ್ಸಿನ ಕೆಲಸಗಾರರು ಜೇಲಿನಲ್ಲಿ ಸಿಕ್ಕುಬಿದ್ದಿಲ್ಲ. ಸಿಕ್ಕು ಬಿದ್ದವರು ಇಪ್ಪತ್ತು - ಮೂವತ್ತು ವರ್ಷ ಶಿಕ್ಷೆ ತೆಗೆದುಕೊಂಡಿದ್ದಾರೆ. ನೀವು ಕ್ರಿಮಿನಲ್ ಕೈದಿಗಳು ಹಾಗಾದರೆ "

" ಅಲ್ಲಾ ಸಾಹೇಬರೇ "

" ನಾಲ್ಕು ಆರು ತಿಂಗಳು ಶಿಕ್ಷೆ ಎಂದರೆ ಮಹತ್ವವೇ ಅಲ್ಲಾ. ಶಿಕ್ಷೆಯ ಅವಧಿಯ ಮೇಲಿಂದ ಕೆಲಸಮಾಡಿದ ಮಹತ್ವವನ್ನು ಊಹಿಸ ಬಹುದು. ನೀವು ಕೋಪಿಸಬೇಡಿ "

" ಕೋಪಕ್ಕೆ ಕಾರಣವೇನು ಸಾಹೇಬರೇ ? "

" ರಾಯರೇ ನೀವೆಲ್ಲಾ ಹೀಗೆ ಜೇಲಿಗೆ ಬರುವಿರಿ. ಕಷ್ಟಪಡುವಿರಿ. ನೀವೆಂದರೆ ನೀವು ಒಬ್ಬರೇ ಅಲ್ಲಾ. ದೇಶದಲ್ಲಿಯ ನಿಮ್ಮಂಥವರೆಲ್ಲ. ಏನು ಮಾಡಿದಂತಾಯಿತು ? "

" ಈ ಮಾರ್ಗದಿಂದಲೇ ಸ್ವಾತಂತ್ರ್ಯ ದೊರೆಯುವುದು. "

" ಶಕ್ಯವಿಲ್ಲ ರಾಯರೇ, ತೋಫು ತುಬಾಕಿಗಳನ್ನಿಟ್ಟು ರಾಜ್ಯವಾಳು ವರು. ನಮ್ಮಿಂದಲೇ ನಮ್ಮನ್ನು ಕೊಲ್ಲಿಸುವರು. ಶಾಂತತನದಿಂದ ರಾಜ್ಯ ಕೊಡುವರೆಂದು ತಿಳಿದುಕೊಳ್ಳುವುದು ಹುಚ್ಚುತನ "

" ಮಹಾತ್ಮನ ಶಾಂತಿ-ಸತ್ಯ, ತ್ಯಾಗದ ಪ್ರಭಾವವು ಜಗತ್ತಿಗೆ ತೋರುವುದು. ಶಾಂತಿ ಸತ್ಯದಿಂದಲೇ ಭಾರತೀಯರು ಸ್ವತಂತ್ರರಾದರೂ ಎಂದು, ವಿಶ್ವ ಬಂಧುಗಳೆಲ್ಲ ಬೆರಗಾಗಿ ನಿರೀಕ್ಷಿಸುವರು "

" ಏನು ಮಾತು ರಾಯರೇ ? ಗಾಂಧಿ ಒಬ್ಬ ಹುಚ್ಚ. ಚರ್ಚಿಲ್ ಇಂಗ್ಲಂಡದ ಮುಖ್ಯಮಂತ್ರಿ, 'ಈ ಅರಬತ್ತಲೆ ಫಕೀರನು ಸ್ವರಾಜ್ಯ ದೊರ

ಕಿಸುವನಂತೆ’ ಎಂದು ನಿಂದಿಸಿದನಂತೆ. ಮದ್ದು ಗುಂಡು ಸಿದ್ಧಮಾಡ ಬೇಕು. ಬ್ರಿಟಿಶರ ಕೂಡ ಯುದ್ಧ ಮಾಡಿ ಓಡಿಸಬೇಕು. ಸುಮ್ಮನೇ ಜಯಕಾರ ಮಾಡಿದರೆ ಏನು ? ”

ದೂರದಲ್ಲಿ, ಮಾತುಗಳನ್ನು ಕೇಳುತ್ತಲೇ ಕುಳಿತ ಪೋಲೀಸನು, ಮುಂದೆ ಬಂದು ಹೇಳಿದ.

“ ಸ್ವರಾಜ್ಯ ಸಿಗುವುದು ನನಗೆ ಖಾತ್ರಿ ಇದೆ ”

“ ಅದು ಹೇಗೆ ? ”

“ ದೇಶದಲ್ಲಿ ಹಾಗೆ ಚಮತ್ಕಾರವೇ ನಡೆಯುವದು. ”

“ ಕಾಂಗ್ರೆಸ್ಸಿನವರಿಂದ ಸಿಗುವವೇ ? ” ಮೊದಲು ಮಾತನಾಡಿದ ಪೋಲೀಸ ಕೇಳಿದ.

“ ಕಾಂಗ್ರೆಸ್ಸಿಗೆ ಬ್ರಿಟಿಶರು ಮಣಿಯುವದಿಲ್ಲ. ಅವರ ಗಂಡ ಬೇರೊಬ್ಬ ಹುಟ್ಟಿದ್ದಾನೆ. ”

“ ಹಿಟ್ಲರನೇ ”

“ ಅವನ ಗುರು ! ”

“ ಯಾರು ?

“ **ಸುಭಾಷಚಂದ್ರ ಬೋಸ** ” ಅಭಿಮಾನದಿಂದ ಪೋಲೀಸ ಹೇಳಿದ.

“ ಒಪ್ಪುತ್ತೇನೆ. ಅವನಿಂದ ರಾಷ್ಟ್ರಸ್ವತಂತ್ರವಾಗುವದು. ”

“ ಅವನು ಸತ್ತಿದ್ದಾನೆ. ” ವಿಕ್ರಮನೆಂದ.

“ ನೀವು ಸತ್ತಿರುವಿರಿ. ಅವನು ಸಮ್ರಾಟನಾಗಿರುವ. ಏಶಿಯಾ ಖಂಡದ ಪ್ರಭು ಅವನೇ! ”

“ ಸುಳ್ಳು ಮಾತನ್ನು ಕಾರಣವಿಲ್ಲದೇ ಯಾಕೆ ಹೇಳುವಿರಿ. ಅವನು ಸತ್ತನೆಂದು ಪ್ರಕಟವಾಗಿದೆ.

ಸ್ಟೇಶನ್ ಬಂದುದರಿಂದ ಗಾಡಿನಿಂತಿತು. ಮಾತುಗಳು ಬಂದಾದವು.

ಎರಡನೆಯ ಸಲ ತಂಬಾಕನ್ನು ತುಂಬಿದರು. ಕೈದಿಗಳೆಲ್ಲ ನಿದ್ರಿಸುತ್ತಲಿದ್ದರು. ಸೀಪಾಯಿಗಳೂ ಕೆಲವರು ಎಚ್ಚರಿರಲು ತಿಳಿಸಿ, ಕೆಲವರು ಕುಳಿತಲ್ಲಿಯೇ ನಿದ್ರೆಯಲ್ಲಿ ತಲ್ಲೀನರಾದರು. ಗಾಡಿ ಓಡಿತು.

" ರಾಯರೇ ನೀವು ಹಳ್ಳಿಯವರೇನು? "

" ಯಾಕೆ? "

" ನನ್ನ ಮಾತುಗಳೆಲ್ಲ ಸುಳ್ಳು ಎನ್ನುವಿರಿ? "

" ವೃತ್ತಪತ್ರದಲ್ಲಿ ನಾನೇ ಓದಿರುವೆ "

" ರಾಯರೇ ಏನು ನಿಮ್ಮ ಸಂಯುಕ್ತ ಕರ್ನಾಟಕ!! ನಾನು ರೇಡಿಯೋದಲ್ಲಿ ಬಂದ ಸುದ್ದಿಯನ್ನು ಹೇಳಿದೆ. ಭೋಸನು ಜಾವಾ, ಸುಮಾತ್ರಾ ಬೋರ್ನಿಯೋ ಗೆದ್ದನಂತೆ! ದಿಲ್ಲಿಯ ಕೆಂಪು ಕೋಟೆಯ ಮೇಲೆ ಧ್ವಜ ನಿಲ್ಲಿಸುವನಂತೆ "

" ಎಂದಿಗೂ ಶಕ್ಯವಿಲ್ಲ. ಸೈನ್ಯ ಬೇಡವೆ? "

" ನಿಮ್ಮ ಕಾಂಗ್ರೆಸ್ಸಿಗೆ ಸೈನ್ಯವಿದೆ. ಅವರೇ ಗೆದೆಯುತ್ತಾರೆ."

" ಸಾಕುಬಿಡು ವೆಂಕಟೇಶ, ಬೇರೆ ಮಾತಾಡು. ಹಿಟ್ಲರಿದ್ದಂತಿದೆ ತನ್ನಕುದುರೆ ಎಂದು ಒಬ್ಬ ಭಟಕಾವಾಲೆ ಅಂದದ್ದಕ್ಕೆ ೬ ತಿಂಗಳ ಶಿಕ್ಷೆ ಆಗಿದೆಯಂತೆ! ನಮಗೇಕೆ? ಸುಮ್ಮನಿರು. " ತಂಬಾಕು ಕೊಟ್ಟ ಪೋಲೀಸನು ನುಡಿದುಬಿಟ್ಟ. ವೆಂಕಟೇಶನಿಗೆ ಬೋಸನೆಂದರೆ ಮೈತುಂಬುತ್ತಿದ್ದಿತು. ತಾನು ಪೋಲೀಸನೆಂಬ ಅರಿವಾಗಲೀ ಅನ್ನದಾತರ ಕಡೆಗೆ ಗಮನವಾಗಲೀ ಇರುತ್ತಿಲಿರಲಿಲ್ಲ. ಹೇಳಿದ ಪೋಲೀಸನಿಗೆ ಹೀಗೆ ಹೇಳಿದ.

" ಸಾಹೇಬ ಈಗ ನನಗೆ ಪಶ್ಚಾತ್ತಾಪವಾಗಿದೆ. ಸೈನ್ಯದಲ್ಲಿ ಸೇರಿದ್ದರೆ ಭೋಸ ಸೈನ್ಯದಲ್ಲಿ ಕೂಡಲು ಬರುತ್ತಿತ್ತು. ಏನು ಮಾಡುವದು. ತುಂಡ ಹೆಂಡತಿಯನ್ನು ಗಂಟು ಹಾಕಿದರು. ಇಲ್ಲದಿದ್ದರೆ ಭೋಸ ಸಮ್ರಾಟನ ಸೈನಿಕನಾಗುತ್ತಿದ್ದೆ "

" ನಾಟಕದಲ್ಲಿಯ ಭೋಸನಿಗೆ ಸೈನಿಕನಾಗಿ ಅಭಿಲಾಷೆ ಪೂರ್ಣ ಮಾಡಿಕೊ "

" ವೆಂಕಟೇಶನಿಗೂ ಸಾಹೇಬರಿಗೂ ಸ್ವಾರಸ್ಯಮಯ ವಾಗ್ವಾದಗಳು ನಡೆದವು. ಕಾಂಗ್ರೆಸ್ಸನ್ನು ಇಬ್ಬರೂ ನಿಂದಿಸಿ ಪರದೇಶದಲ್ಲಿ ಹೋಗಿ ಭೋಸನು ಸ್ವತಂತ್ರ ಸರಕಾರ ಸ್ಥಾಪಿಸಿದುದನ್ನು ಹೆಮ್ಮೆಯಿಂದ ಹೇಳಿದ ವೆಂಕಟೇಶ. ವಿಕ್ರಮನು ಯಾವಪಕ್ಷಕ್ಕೂ ಅಂಟಿಕೊಳ್ಳದೇ ಮಾತನಾಡಿ ಪಾರಾಗುತ್ತಿದ್ದ. ಪೋಲೀಸನು ವೆಂಕಟೇಶನಿಗೆ ಕೇಳಿದ.

" ನಿಮ್ಮ ಪ್ರಾಣದ ಉತ್ತರ ಕೊಡುವವನು, ನನಗೆ ಗಿಡಕ್ಕೆ ಕಟ್ಟಿಸಿಕೊಂಡೆಯಲ್ಲಾ ಆದರೆ ಕಾಂಗ್ರೆಸ್ಸ ಜನರನ್ನು ಆಗ ಬೈಯ್ಯಬೇಕು "

" ನಿಮ್ಮನ್ನು ಗಿಡಕ್ಕೆ ಕಟ್ಟಿದವರೇ? " ವಿಕ್ರಮನು ಕುತೂಹಲದಿಂದ ಕೇಳಿದ.

" ಸ್ಟೇಶನ್ನು ಕಾಯುವದಕ್ಕೆ ನಿಯಮಿಸಿದ್ದರು ನಾನೂ ವೆಂಕಟೇಶ ಜೊತೆಯಾಗಿದ್ದೆವು. ಗುಂಪು ಬಂದು ನುಗ್ಗಿತು. ಅವರ ಕೈಯಲ್ಲಿಯೂ ಬಂದೂಕುಗಳಿದ್ದವು. ಅವರೆದುರು ಬಂದೂಕನ್ನು ಇಟ್ಟು, ಸ್ಟೇಶನ್ನು ಸುಟ್ಟು ಹೋಗಿರಿ. ನಮ್ಮನ್ನು ಬಂದೂಕನ್ನು ಬಿಟ್ಟುಬಿಡಿರೀ ಎಂದು ಹೇಳಿಕೊಂಡ ವೀರ ಇವನು "

" ಹೆದರಿ ಬಂದೂಕನ್ನು ಕೆಳಗಿಡಲಿಲ್ಲ. ದೇಶ ಪ್ರೇಮದಿಂದ ಹಾಗೆ ಮಾಡಿದೆ "

" ಹೆದರಿದೆ ಎಂದು ಒಪ್ಪಿಕೊ "

" ನೀವು ಹೆದರಿದಿರಿ "

" ನಾನು ಹೆದರಿದ್ದು ಕೂಡಿದ ಜನಕ್ಕಲ್ಲ. ನೌಕರಿಗಾಗಿ. ಹೆಂಡರು ಮಕ್ಕಳಿಗಾಗಿ "

" ಅದಕ್ಕೇ ' ಗಿಡಕ್ಕೆ ಕಟ್ಟಿ ಹೋಗಿರಿ ' ಎಂದು ಬೇಡಿಕೊಂಡಿರಲ್ಲವೇ! "

“ ವೆಂಕಟೇಶ, ನಿನಗಿನ್ನು ಸಂಸಾರದ ಚಿಂತೆ ಇಲ್ಲ. ವರ್ಷಕ್ಕೆ ಒಂದರಂತೆ ಮಕ್ಕಳಾಗಲಿ ಆಮೇಲೆ ತಿಳಿಯುತ್ತದೆ. ”

ಸೊಲ್ಲಾಪೂರ ನಿಲ್ದಾಣ ಬಂದಿತು. ಪೋಲಿಸರು ಬೇಡಿ, ಕಡಗ-ಗಳನ್ನು ಬಿಚ್ಚಿ, ಚೀಲದಲ್ಲಿ ಹಾಕಿಕೊಂಡರು, ಕೈದಿಗಳ ಕೈಗಳಿಗೆ ಸ್ವಾತಂತ್ರ್ಯ ಲಭಿಸಿತು. ‘ಬೆಳಗಾಗಿದೆ ಮುಖ ಮಾರ್ಜನೆಗೆ ಅವಕಾಶ ಕೊಡಿರಿ.’ ಕೈದಿಗಳ ಬೇಡಿಕೆ ಫಲನಡೆಯಲಿಲ್ಲ. ಚುರಮುರಿಯ ಚೀಲ ಕೈದಿಗಳ ಡಬ್ಬಿಯಲ್ಲಿ ನುಗ್ಗಿ ಬಂತು! ಮೂರುಮೂರು ಬೊಗಸೆ ತುಂಬ ಚುರಮುರಿ ! ಒಂದು ಸೇರು ಪ್ರಮಾಣ ಬೆಲ್ಲ! ಐವತ್ತು ಕೈದಿಗಳು ತಿನ್ನಲು ತೊಡಗಿದರು. ಪೋಲಿಸರು ಬುತ್ತಿಯ ಗಂಟು ಬಿಚ್ಚಿದರು. ನೀರನ್ನು ಕುಳಿತಲ್ಲಿ ತಂದುಕೊಟ್ಟವರು ಪೋಲಿಸರೆ. ಪೋಲಿಸರು ಒಬ್ಬೊಬ್ಬರಾಗಿ ಬಂದೂಕು ಚೀಲ ತೆಗೆದುಕೊಂಡು ಕೆಳಗಿಳಿದರು. ವಿಕ್ರಮನು ವೆಂಕಟೇಶನನ್ನು ಕೇಳಿದ, ಸೊಲ್ಲಾಪುರ ಜಿಲ್ಲೆಯ ಪೋಲೀಸರು, ಕೈದಿಗಳನ್ನು **‘ ಇಸಾಪೂರ ’** ಜೇಲಿಗೆ ಮುಟ್ಟಿಸುವರು. ತಾವು ತಿರುಗಿ ಹೊರಡುವವೆಂದು ವೆಂಕಟೇಶ ಹೇಳಿದ. ಗಾಡಿಗಳು ಬರುತ್ತಿದ್ದವು ಹೋಗುತ್ತಿದ್ದವು. ಜನ, ನಿಲ್ದಾಣದಲ್ಲಿ ತಿರುಗುತ್ತಲಿದ್ದರು ಕೆಳಗಿಳಿಯುವ ಅಧಿಕಾರ ಕೈದಿಗಳಿಗಿಲ್ಲ ಕಿಡಿಕಿಯಲ್ಲಿ ಹಣಿಕಿ ಹಣ್ಣಿನ, ಫಲಹಾರ ಅಂಗಡಿ ನೋಡಿ, ಹೊಟ್ಟೆಹಸಿವನ್ನು ಹಿಂಗಿಸಿಕೊಳ್ಳುತ್ತಲಿದ್ದರು. ಸೊಲ್ಲಾಪುರದ ತುಂಡ ಪೋಲೀಸರು, ತಮ್ಮ ವಶಕ್ಕೆ ಬಂದ ಕೈದಿಗಳ ಎಣಿಕೆ ಕೊಂಡರು. ಕೈದಿಗಳನ್ನು ಪ್ರಿಯವಾಗಿ ಮಾತನಾಡಿಸಿದರು. ಸೇದಲು ಅಪೇಕ್ಷಿಸಿದವರಿಗೆ ಬೀಡಿಯ ಲೂಟಿಮಾಡಿಸಿದರು. ಎಲೆ - ಅಡಿಕೆ - ತಂಬಾಕು ಕೊಟ್ಟರು. ಗಾಡಿ ‘ ಕಿರ್’ ಎಂದು ಕಿರಚಿ ಓಡಿತು ವೇಗವಾಗಿ.

ಮಧ್ಯಾಹ್ನದ ಸಮಯ **‘ಧೋಂಡ’** ನಿಲ್ದಾಣಕ್ಕೆ ಗಾಡಿ ತಲ್ಪಿಸಿತು. ಊಟ ದೊರೆಯುವದೇನೋ ಎಂದು, ಕೈದಿಗಳು ಕಾತರರಾದರು. ಕೆಳಗಿಳಿಸಿ ಒಂದೆಡೆ ಕೂಡ್ರಿಸಿದರು. ಕಾಯಲು ನಾಲ್ವರು ನಿಂತರು. ಉಳಿದ ಸೀಪಾಯಿಗಳು ಸಡೆದರು. ಕೈದಿಗಳು ಬರುಹೋಗುವವರ ಮುಖ

ನೋಡುತ್ತ ಕುಳಿತರು. ಸಿಪಾಯಿಗಳನ್ನು ಅಂಗಲಾಚಿ ಬೇಡಿದರು. ಕೈಕಾಲು ಹಿಡಿದು ಕೇಳಿಕೊಂಡರು. ಚುರಮುರಿ, ಬೆಲ್ಲಗಳೇ ಹೊಟ್ಟೆಗೆ ಆಧಾರ. 'ಊಟ! ಊಟ' ವೆಂದು ಕೈದಿಗಳು ಕನಕರಿಸಿದರು. 'ನಾಸ್ತಿ' ಎಂದರು ಪೋಲಿಸರು. ಎರಡು ಮೂರು ಗಂಟೆಗಳು ಸರಿದವು. ಬೇಗ ಗಾಡಿಯಾದರೂ ಬರಲಿ. ಜೇಲಿನಲ್ಲಿ ಹೊಗಿಸಲಿ. ಅಲ್ಲಿ ರೊಟ್ಟ್ಯಾದರೂ ದೊರಕೀತು' ಎಂದು ನುಡಿದುಕೊಂಡರು. ಕತ್ತಲಾಯಿತು. ನೀರೇ ಒಡಲಿಗೆ ಆಧಾರ! ಸಿಪಾಯಿಗಳು, ತಿನ್ನುತ್ತಿದ್ದರು, ಕುಡಿಯುತ್ತಿದ್ದರು, ಕೂಡುತ್ತಿದ್ದರು, ಮಲಗುತ್ತಿದ್ದರು. ಕೈದಿಗಳ ತಳಮಳತೆಯ ಚಿಂತೆ ಅವರಿಗಿರುವುದೇ? ಕೈದಿಗಳಿಗಾಗಿಯೇ ಸ್ಪೇಶಲ್ ಡಬ್ಬಿ ಟ್ರೇನಿನಲ್ಲಿ ಸಿದ್ಧವೇ ಇತ್ತು. ತುರುಕಿದರು, ತುಂಬಿದರು ಕೈದಿಗಳನ್ನು. ಗಾಡಿಯು ಓಡುತ್ತಲಿತ್ತು. ಕೈದಿಗಳ ಮನಸ್ಸು ನೊಂದಿತ್ತು. ಅನ್ನ ಕೋಶವು ನಿದ್ರಿಸುತ್ತಿತ್ತು. ವಿಕ್ರಮನು 'ಸುಖ ಸಂಚಾರಿಗಳು ನಾವೇ! ನೀರು ಕುಡಿದು ಸಂಚಾರ ಮಾಡುವೆವು ಎಂದ.

---

## ಅಸಂತೋಷ !!

ನಾಲ್ಕಾರು ಸಾವಿರ ಸ್ವರಗಳಿಂದ ಜಯಘೋಷ ಕೇಳಿತು, ಕೈದಿಯ ಕಿವಿಗಳಿಗೆ! ದಿಗಂತವು ಜಯಘೋಷದಿಂದ ಪ್ರಫುಲ್ಲವಾಗಿತ್ತು. ರಾಷ್ಟ್ರ ಮಾತೆಯ 'ಜಯ ಜಯ.' ಶಬ್ದವು; ಪ್ರಶಾಂತ ರಾತ್ರಿಯಲ್ಲಿ, ರಾಷ್ಟ್ರ-ಪ್ರೇಮಿಗಳ ಹೃದಯಕ್ಕೆ ತುಷ್ಟಿಪುಷ್ಟಿಪ್ರದಾನಮಾಡುತ್ತಲಿದ್ದಿತು. ಸ್ವಾಗತ ಬಯಸಿ, ಜಯಕಾರ ಕೊಡುವವರೆಲ್ಲ ಕೈದಿಗಳೆಂದು ತಿಳಿದ ವಿಕ್ರಮ. ಕೈದಿಗಳ ಬಟ್ಟೆಬರೆಗಳೆಲ್ಲ ಜೇಲಿನವರ ವಶವಾದವು ಜೇಲಿನ ಡ್ರೆಸ್ಸುಗಳನ್ನೇ ಹಾಕಿಸಿದರು. 'ಅಲ್ಯುಮಿನಿಯಮ್' ಥಾಲೀಪಾಟ ಅಕ್ಷಯಪಾತ್ರೆಗಳು ದೊರೆತವು. ವಿಕ್ರಮನು ಜೇಲಿನ ಚಣ್ಣ, ಲಂಡ ಅಂಗಿ ಹಾಕಿಕೊಂಡ. ತನ್ನನ್ನು ತಾನೇ ನೋಡಿಕೊಂಡ. ಎದೆಯ ಮೇಲೆ ೧೧೪೨ ಎಂದು

ಡಾಂಬರಿನ ನಂಬರ ಮುದ್ರೆ! ಹೊದಿಯಲು ಕೊಟ್ಟ ಕಂಬಳಿ, ಹಾಸಲು ದಯಪಾಲಿಸಿದ ಟೆಂಗಿನ ಚಾಪಿ, ಲಂಗೋಟಿಗಳನ್ನೆಲ್ಲ ಸುರಳಿಸುತ್ತಿ, ಸಾಲಿನಲ್ಲಿ ನಿಂತ. ಒಳಕ್ಕೆ ಕರೆದೊಯ್ದರು. ಒಳಗಿನ ಕೈದಿಗಳ ಜಯಘೋಷದ ಆರ್ಭಟವು, ಭರತಿಯು ಕಡಲಂತಿತ್ತು. ಮಾತುಗಳು ಕೇಳದಂತಿದ್ದವು. ನಾಲ್ಕನೆಯ ಕಂಬರಿಂದು, ಜೇಲಾಧಿಕಾರಿ ಹೇಳಿಯೇ ಇದ್ದ ಹೊಗಿಸಿದರು. ರೊಟ್ಟಿ-ರಸ್ತಾಯನ ಸಿದ್ಧವೇ ಇತ್ತು. ನಾಲ್ಕು ದೀಪಗಳು! ಊಟದ ರುಚಿಯು ಬನ್ನಣೆ ಆಯಿತು ವಸಿದ ಹೊಟ್ಟೆಗಳು ತುಂಬಿದವು. ಚಾಪಿಯನ್ನು ಉರುಳಿಸಿ ಕಂಬಳಿ ಹೊದೆದು ಗಾಢಸಿದ್ರ ಗೈದರು.

'**ಅರುಣ**'ನಿಗೂ ಮೊದಲೆದ್ದನು ವಿಕ್ರಮ. ವ್ಯೈಹಗುರಾಗಿತ್ತು. ಸಂಪುನಿದ್ರೆಯಲ್ಲಿ ಮಗ್ನರಾದ ಕೈದಿಗಳು, ಇನ್ನೂ ಗೊರಕೆಗಳನ್ನು ಬಿಡುತ್ತಿದ್ದರು. 'ತುರುಮನೆಯೋ! ಸೆರೆಮನೆಯೋ ? ದನಕಟ್ಟುವುದಕ್ಕೆ ಕಟ್ಟಿದುದು, ಜನದನ ಇರಿಸಲು ಉಪಯೋಗಿಸಿದ್ದಾರೆ. ನೂರೈವತ್ತು ಜನ ಮಲಗಲು ಅನುವಿದ. ತಗಡುಗಳ ಹೊದಿಕೆ ನೆರೆಮನೆಗೆ. ಮುಳ್ಳುತಂತಿಯೊಳಗಿನಿಂದ, ನೋಸಿ ಗಾಳಿ ತೇಲುತ್ತಿದೆ. ಬಗಣಿ-ಚಿಕ್ಕಾಡುಗಳಿಲ್ಲ. ಮಲ-ಮೂತ್ರವಿಸರ್ಜನೆಯ ವ್ಯವಸ್ಥೆ ಬೇರೆ. ದುರ್ನಾತಬಾರದಂತೆ ಯೋಜಿಸಿರುವರು. ನೀರಿನ ಹರವಿಗಳು ತುಂಬಿವೆ. ಸರಿಯಾಗಿದೆ.' ಎಂದು 'ಶರಾ' ಬರೆದು ಸಹಿ ಮಾಡಿದನು ೧೧೪೨.

ಅರುಣನೂ ಉದಯವಾದ. ನೇಸರನು ಏಳುವನೆಂದು ಪಕ್ಷಿಗಳು ಹೇಳುತ್ತ ಕಿಲಕಿಲನಾದ ಮಾಡಿದವು. 'ಇಸ್ಪಾಟ್' ಜೇಲ ಜಮಾದಾರ, ನಾಲ್ವರು ಪೋಲೀಸರೊಡಗೂಡಿ, ತಂತಿಯ ಬಾಗಿಲನ್ನು ತೆರೆದು ಒಳ ಬಂದರು ಕೈದಿಗಳ ಎಣಿಕೆ ಮಾಡಿಕೊಂಡು ನಡೆದರು, ಬೇರೊಂದು 'ಬರಾಕಿ'ನ ಎಣಿಕೆಗೆ. ಬಾಗಿಲು ತೆರವೇ ಇತ್ತು. ಕೈದಿಗಳು ಎದ್ದರು. ವಿಕ್ರಮನು ಬಾಗಿಲು ದಾಟಿ ಹೊರಗೆ ಬಂದ. ನಲ್ಲಿಯ ವ್ಯವಸ್ಥೆ ಕಂಡ. ಜೇಲಿನವರೇ ದಯಪಾಲಿಸಿದ 'ಲಂಗೋಟಿ' ಬಿಗಿದು ಸ್ನಾನ ಮಾಡಿದ. ಬಹುದಿನಗಳಿಂದ ನೆನಪಾಗದ ಮಂತ್ರಸ್ತೋತ್ರಗಳು ಹೊರಬಂದವು.

‘ ಜಪ ’ ಮಾಡುವೆ ಎಂದು ಸ್ಫೂರ್ತಿಯಿಂದ ಸಂಕೇಶ್ವರ ಮಠದವರ ಕುರಿತು ಕಣ್ಮುಚ್ಚಿದ. ರುಚಿಗಂಜಿ ಕುಡಿಯಲು ಏಳಲಿಲ್ಲ

“ ಋಷಿಗಳೇ-ತಪಸ್ವಿಗಳೇ ”

“ ಯಾರು ? ” ಕಣ್ತೆರೆದು ವಿಕ್ರಮ ನೋಡಿದ

“ ಪರೀಕ್ಷಿಸಿ ನೋಡಿ ”

“ ಭೀಮಣ್ಣಾ !! ” ಎಂದವನೇ ಗಟ್ಟಿಯಾಗಿ ಆಲಿಂಗಿಸಿದ ಭೀಮಣ್ಣನೂ ವಿಕ್ರಮನ ಊರವನೆ. ಭೀಮಣ್ಣನು ಕಾಂಗ್ರೆಸ ಕಾರ್ಯಕರ್ತ. ಹುಟ್ಟಾ ಸ್ವಯಂ ಸೇವಕನು. ಅವನು ಆವಸ್ಥೆಗಳಲ್ಲಿ, ತನು ಮನದಿಂದ ಸೇವೆಸಲ್ಲಿಸುವುದರಲ್ಲಿ ಸಮರ್ಥ. ದುಂಬನು ನಿಜ. ಮನವು ಮಾನಿನಿಯರಂತೆ ಮೃದು. ವಿಕ್ರಮನ ಊರಿನವರೆಲ್ಲ ‘ ದುಂಬಣ್ಣಾ ’ನೆಂದು ಕರೆಯುವರೇ ವಿನಾ ತಪ್ಪಿ ಭೀಮಣ್ಣನೆನ್ನುವುದಿಲ್ಲ. ಮಾತುಗಳು ಬಿರುಸು. ಮುಚ್ಚುಮರೆಯವನಲ್ಲ. ಖಾದೀ ಪ್ರೇಮಿ. ಮನೆಯಲ್ಲಿರಲಿ, ಬೀದಿಯಲ್ಲಿ ಗೆಳೆಯರೊಡನೆ ಸರಿದಿರಲಿ—ನೂಲುವ ಕಲಸಕ್ಕೆ ಬಿಡುವದಿಲ್ಲ. ಜೇಲಿನಲ್ಲಿ ಕುಳಿತು ವರುಷದ ಬಟ್ಟೆಗೆ ತಕ್ಕಷ್ಟು ನೂತಿರುವ. ಸತತೋದ್ಯೋಗಿ ಎಂದು ಹೆಸರೇ ಪಡೆದಿರುವ.

ಭೀಮಣ್ಣನು ‘ ಬಿಸಾಪುರ ’ ಮಹಾತ್ಮ್ಯವನ್ನು ಹೇಳದೇ ಬಿಡಲಿಲ್ಲ. ‘ ವಿಕ್ರಮಾ, ನೀನು ಬೆದರಬೇಡ. ನಿನ್ನ ಜಟವು, ಒಂದು ಹಮಾಮು ಸೋಪಿನಲ್ಲಿ ತೀರುತ್ತದ. ಪೋಲೀಸರಿಗೆ, ಸೋಪು ಕೊಡಬೇಕು. ಬೇಕಾದುದನ್ನು ಅವರಿಂದ ತರಿಸಬೇಕು. ಜೇಲಿನಲ್ಲಿ ನಮ್ಮ ಹಣದಿಂದ ಸೋಪು-ಕೊಬ್ಬರಿಯ ಎಣ್ಣೆ ಕೊಡುವರು. ಬೀಡಿ ಎಂಟಕ್ಕೆ ಒಂದು ಹಮಾಮು. ಸಿಗ್ರೇಟ ಒಂದಕ್ಕೆ ಎರಡು. ಜರದಾ ೧ ತೊಲೆಯ ಚೀಟಿಗೆ ಒಂದು ”

“ ನಾಣ್ಯಗಳು ಬಹಳ ಚೆನ್ನಾಗಿವೆ ಭೀಮಣ್ಣಾ ”

“ ಜೇಲಸಾಮ್ರಾಜ್ಯದಲ್ಲಿ ಸಿಪಾಯಿಗಳ ಹೆಂಡಿರೆಲ್ಲ ಕುಪ್ಪಸಕ್ಕೆ ಹಮಾಮು ಉಪಯೋಗಿಸುವರು ”

“ ಉಪಯೋಗಿಸಲಿ ಸಮಯಕ್ಕೆ ಒದಗುವರಲ್ಲ ”

" ನಿನಗೆ ಅನುಕೂಲ. ನಿನಗೆ ಶ್ರೀಖಂಡ ಮಾಡಿಕೊಡುತ್ತೇನೆ. ಉಪ್ಪಿನಕಾಯಿ, ಸಂಡಿಗೆ ಇರಿಸಿದ್ದೇನೆ. "

" ಮೂರೇ ತಿಂಗಳುಗಳಿವೆ. ಇನ್ನೂ ಇಪ್ಪತ್ತು ತಿಂಗಳಾಗಿದ್ದರೆ ಸುಖವಾಗಿರಬಹುದಾಗಿತ್ತು. ವಿಶ್ರಾಂತಿ...."

" ನಿನಗೆ ವಿಶ್ರಾಂತಿ ಇಲ್ಲ. ನಿನ್ನ ದಾರಿಕಾಯುತ್ತಿದ್ದರು. ಒಳ್ಳೇ ದೇಶಭಕ್ತ, ಸಾಹಿತಿ, ಪಂಡಿತ, ಕಪಿ ಬಂದಿರುವಿ. ವಿಶ್ರಾಂತಿ ಕೊಡುವರೇ ?"

" ಏನು ಬೇಡ ಭೀಮಣ್ಣ "

" ಬಿಡುಗಡೆ ಇಲ್ಲೊ ಕಾಮಣ್ಣ "

" ಕೈಜೋಡಿಸುತ್ತೇನೆ "

" ಸೋಗುಮಾಡಬೇಡ. ಮುಖಂಡ ಮಹಾಶಯ ಬರುತ್ತಾನೆಂದು, ಮೊದಲೇ ಶಂಖ ಊದಿರುವೆ. ಬರದಿದ್ದರೆ ಹೊತ್ತು ಒಯ್ಯುತ್ತೇನೆ."

" **ಕರ್ನಾಟಕದ** ಜನ ಎಷ್ಟಿವೆ ? "

" ಮೂರು ಬರಾಕು ತುಂಬಿ ಹೆಚ್ಚಾದ್ದರಿಂದ **ಹೊರಗೆ** (Tent) ಟೆಂಟ**ಹೊ**ಡೆದು ನಾನೂರು ಜನರನ್ನು ಇಟ್ಟಿದ್ದಾರೆ. **ಗುಜರಾಥಿಗಳು, ಮಹಾರಾಷ್ಟ್ರರು, ಹೂರರು,** ಮತ್ತೆ ಯಾರು ಯಾರು ಬೇಕು ಹೇಳು ? "

" ಯಾರೂ ಬೇಡ. ಹೊಟ್ಟೆಗೆ...."

" ಬಿಸ್ಕೂಟ ಬೇಕೇನೋ "

" ಎಲ್ಲಿಹ ? "

" ಒಣಗಿದ ಕಟಕು ರೊಟ್ಟಿಗೆ ಜೇಲಿನಲ್ಲಿ ಬಿಸ್ಕೂಟ ಎಂದು ಹೆಸರು ಬರೆದುಕೊ "

ಹುಂಬಣ್ಣನು ವಿಕ್ರಮನಿಗೆ ಕಟಕು ರೊಟ್ಟಿ, ಉಪ್ಪಿನಕಾಯಿಕೊಟ್ಟ. ಹೊಟ್ಟೆ ತುಂಬದಿದ್ದೀತೆ. ಹುಂಬಣ್ಣನು ತಂತಿಯೊಳಗಿಂದ ಪಾರಾಗುತ್ತ, ಎಲ್ಲ ಬರಾಕುಗಳನ್ನು ಸುತ್ತಿ ಡ ವಿಕ್ರಮನು ಬಂದುದನ್ನು ತಿಳಿಸಿದ. ಕನ್ನಡಿಗರು ವಿಕ್ರಮನನ್ನು ಕಾಣಲು ಬಂದರು. ನೂರಾರು ತರುಣರು ವಿಕ್ರಮನ

ಸುತ್ತಲೂ ಕುಳಿತರು. ಪರಸ್ಪರರ ಪರಿಚಯಗಳಾದವು. ಹೊರ ಪರಿಸ್ಥಿತಿಯ ಪೃಚ್ಛಾಪೃಚ್ಛೆಗಳಾದವು. ಕನ್ನಡ ನಾಡಿನ ಮುಖಂಡರ ಭಾವೀ-ಧೋರಣೆ ವಿಚಾರಿಸಿದರು. ಸಮಗ್ರ ಭಾರತದಲ್ಲಿಯ ರಾಜ್ಯಕ್ರಾಂತಿಯ ಸಿಂಹಾವಲೋಕನೆ ಮಾಡಿಸಿದರು. ಬ್ರಿಟಿಷರು ಬಲ-ಪ್ರಯೋಗದಿಂದ ಕಾಂಗ್ರೆಸ್ಸಿನ ಹೋರಾಟವನ್ನು ಹತ್ತಿಕ್ಕಿದರು. ಪರಿಸ್ಥಿತಿ ಶಾಂತವಾದರೆ ಹೇಗೆ ? ಹೋರಾಟದ ಮೊದಲಿನ ಆವೇಶ ಕುಂಠಿತವಾಗಿದೆ. ಸರಕಾರಿ ಕಟ್ಟಡಗಳ ನಾಶದ ಪ್ರಮಾಣವು ತೀರಕಡಿಮೆ. ಹಾರೈಸಿದಂತೆ ಯಾವ ಕೆಲಸವಾಗಿದೆ? ಅಧಿಕಾರಿಗಳನ್ನೇ ಬಂಧಿಸಿ ಸೆರೆಮನೆಯಲ್ಲಿ ಇರಿಸಬೇಕು. ಪ್ರತಿಸರಕಾರ ಸ್ಥಾಪಿಸಬೇಕೆಂದುದು, ಕನಸಿನಲ್ಲಿ ಉಳಿಯಿತು ನಾನಾ ಪಾಟೀಲರು ಮಾತ್ರ '**ಪತ್ರೀಸರಕಾರ**' ಸ್ಥಾಪಿಸಿ ಕೆಲವು ಗ್ರಾಮಗಳನ್ನು ಸ್ವಾಧೀನ ಪಡಿಸಿಕೊಂಡಿರುವರೆಂದು ವಾರ್ತೆ ಇದೆ. ಅನೇಕಾನೇಕ ಪ್ರಶ್ನೆಗಳಾದವು. ವಿಕ್ರಮನು ಪ್ರಶ್ನೆಗಳನ್ನು ಸಾವಧಾನದಿಂದ ಕೇಳಿಕೊಂಡ. ಎಲ್ಲರೂ ಒಪ್ಪುವಂತೆ ಮಾತನಾಡಿದ.

ಊಟವಾಗಿದೆ, ಮಲಗಬೇಕು ಎಂದರೆ ವಿಕ್ರಮನಿಗೆ ವಿಶ್ರಾಂತಿ ಇಲ್ಲ. ' ಸಭೆಯಲ್ಲಿ ಮಾತನಾಡುವಾಗ ನನ್ನ ಕೈಕಾಲು ನಡುಗುತ್ತಿವೆ. ಅದಕ್ಕೆ ಏನು ಮಾಡಬೇಕೂ' ಎಂದು ಒಬ್ಬ. 'ಜವಾಹಿರಲಾಲಾನು ಯುರೋಪದವನೆಂದರೆ ಅಲ್ಲಾ ಎನ್ನುತ್ತಾನೆ. ಇಹನ ಕಿವಿಹಿಂಡಿ ನೀವಾದರು ಹೇಳಿರಿ ' ಎಂದು ಬೇರೊಬ್ಬ. ನನಗೆ ದೇಶಸೇವೆ ಮಾಡುವ ಆಶೆ ಇನ್ನೂ ಇದೆ. ಒಂದೇ ಒಂದು ತೊಂದರೆ ಇದೆ. ' ಎನ್ನುವ 'ಏನು?' ಎಂದರೆ ಹೆಂಡತಿ ದಿನಾಲು ಕನಸಿನಲ್ಲಿ ಬಂದು, 'ಸಾಕು ದೇ.ಭ.ರೇ ಮನೆಗೆ ಬನ್ನಿ' ಎನ್ನುವಳೆಂದು ಹೇಳುವ. ಬೇರೊಬ್ಬನು ಯುರೋಪದ ಯುದ್ಧದ ವಾರ್ತೆ ಕೇಳುವ. ನಾಲ್ಕಾರು ದಿನಗಳಲ್ಲಿ ಜೀಸತ್ತ. ಮಹಾತ್ಮರು ಭೆಟ್ಟಿಯಾಗುವ ಜನರಿಗೆ ಉತ್ತರಕೊಟ್ಟು ಬೇಜಾರಪಟ್ಟು, ಉಪಾಯವೆಂದು ಮೌನದಿನ ಪಾಲಿಸುತ್ತಿರಬಹುದೆಂದು ತಾನೂ ಮೌನವ್ರತಮಾಡಬೇಕೆಂದ.

ಭೀಮಣ್ಣನು, ಇಸಾಪುರ ಜೇಲಿನ ಹಿಂಬದಿಗಿರುವ ವಿಶಾಲ ಕೆರೆಗೆ ಈಜಲು ವಿಕ್ರಮನನ್ನು ಕರೆದೊಯ್ದು ಕಾಯುವ ಪೋಲೀಸರು ಕೈದಿಗಳನ್ನೆಲ್ಲ ಕೆರೆಬಿಡಿಸಿ ತರಲು ತೊಂದರೆಪಟ್ಟುಕೊಳ್ಳುತ್ತಿದ್ದರು. ವಿಕ್ರಮನು ಕೆರೆಗೆ ಬರಲು ಒಪ್ಪಿದ ಕಾರಣ ಬೇರೆ. ಬರಾಕಿನಲ್ಲಿ ಕುಳಿತರೆ ಕೇಳುವ ಕೈದಿಗಳ ಕಾಟ ತಗಣಿ ಚಿಕ್ಕಾಡುಗಳಿಗೆ ರಕ್ತ ಕೊಡಬಹುದು. ಕೈದಿಗಳ ಕೇಳಿಕೆಗಳ ಕಾಟ ತಾಳಲಾಗದೆಂದ, ತಾನು ಎಲ್ಲರಲ್ಲಿ ಬಲ್ಲಿದನೆಂದು ತೋರಿ ಹೇಳಿಕೊಂಡದುದೇ ತಪ್ಪು 'ಈ ವಿಷಯಜ್ಞಾನ ನನಗಿಲ್ಲ' ಎಂದರೆ ಅವನ ಕುಲದೇವನಾಣೆ. ಸುಳ್ಳು ನಾಲ್ಕು - ಸತ್ಯ ನಾಲ್ಕನ್ನು ಬೆರೆಯಿಸಿ, ಪಾಂಡಿತ್ಯ ಪ್ರದರ್ಶಿಸಿದ ಪರಿಣಾಮದ ಫಲ ಉಣ್ಣು.

ರಾತ್ರಿಯಾದರೂ ನಿದ್ರೆ ಮಾಡಿ ಶಾಂತರಾಗಿರಬೇಕಂದರೆ ಅದೂ ಇಲ್ಲ. ನಂಜೆಯಾಗುತ್ತಲೇ ನಾಲ್ವರು ಕಲೆತು ರಾಮನಾಮ ಜಪ ಪ್ರಾರಂಭಿಸುವರು. ಒಂದೆಡೆ 'ರಾಮಕೃಷ್ಣ ಹs ರೀ-ಜೈಜೈರಾಮಕೃಷ್ಣ ಹs ರಿ' ನಡೆಯುವುದು. 'ಜಾಗೃತ ಸ್ವಪ್ನೀ ಪಾಂಡೂರಂಗ s - ಪಾಂಡುರಂಗ ಧ್ಯಾನೀ' ಪ್ರಾರಂಭವಾಯಿತೇ. 'ವಿಠ್ಠಲ ರುಕುಮಾಯ್ ವಿಠೋಬ ರುಕುಮಾಯ್' ಒಂದು ಗುಂಪು. 'ಶಿವ ಶಿವ ಶಿವ ಎಂದು ನುಡೀ ನುಡೀ ನಿನ್ನ ಭವಪಾಶದ ಬೇಡಿ ಕಡೀ ಕಡೀ' 'ಸ್ಥಿರಾಪಲಾ ಸಮಾಧಿತs ಸ್ಥಿತಪ್ರಜ್ಞ ಕಸಾ ಆಸೆ, ಕೃಷ್ಣಾ ಸಾಂಗsತನಾಬೋಲೆ ...” ಮುಸಲ್ಮಾನರ ನಮಾಜಿನ ಕೂಗು' ನಾಕಪ್ಪಾ ನಾಕು ಎಂದ. 'ನಂಕೀಪಬೊಂದು ಮನೆಯ ಮಾಡಿ ಶಬ್ದಕ್ಕಂಜಿದೊಡೆಂತಯ್ಯಾ, ಅಯ್ಯಾ ಜೇಲಿನಲಿ ಕಾಲಿರಿಸಿ ಕಲಕಲರವಕಂಜಿದೊಡೆಂತಯ್ಯಾ, ಅಯ್ಯಾ ರೊಟ್ಟಿಯು ತಿನ್ನು ರಸಾಯನವನೀಂಟು ಇದುವೆ ನಮ್ಮ ಆಳರಸರ ಹಾಳ್ ಪ್ರಸಾದ ವಿಕ್ರಮ— ಭಯ್ಯಾ.... ....

† † † † † †

ಅಂದು ಆದಿತ್ಯವಾರ, ಜೆಲ್ಲ ಗೋದಿಯ ರೊಟ್ಟಿಗಳು ಬರಾಕನ್ನು ಹೊಕ್ಕವು. ಗೋದಿಯ ರೊಟ್ಟಿಯನ್ನು, ಎಣಿಕೆ ಮಾಡಿಕೊಂಡ. ತನ್ನ ಬರಾಕಿನಲ್ಲಿ ನೂರೈವತ್ತು ಜನ. ಪ್ರತಿಯೊಬ್ಬರಿಗೆ ಎರಡು ಎರಡು ಬರುವಂತೆ ಕೊಟ್ಟಿದ್ದರು. ಗೋದಿಯ ರೊಟ್ಟಿಯ ಮೇಲೆ ಮಾಂಸದ ತುಣುಕು!! ರೊಟ್ಟಿಯನ್ನು ತಂದಿರಿಸಿದ ಸೀಪಾಯಿಗೆ, ವಿನಂತಿ ಮಾಡಿಕೊಂಡ.

" ಸಾಹೇಬ. ಮಾಂಸದ ತುಣುಕು ಹತ್ತಿದೆ ನೋಡಿ "

" ನಾನೇನು ಮಾಡಬೇಕು ? "

" ನಾವೆಲ್ಲ ಶಾಕಾಹಾರಿಗಳು "

" ಇರಬಹುದು "

" ಬೇರೆ ರೊಟ್ಟಿಗಳನ್ನು ತಂದು ಕೊಡಿರಿ "

" ಇದು ನಿಮ್ಮಪ್ಪನ ಮನೆಯಲ್ಲ ? "

" ಸಾಹೇಬರೇ ನಾನು ಎಷ್ಟು ಕೇಳುವೆನೋ ಅಷ್ಟಕ್ಕೇ ಉತ್ತರ ಕೊಡಿರಿ. ಹೆಚ್ಚು ಮಾತುಬೇಡ "

" ಏ ಸರದಾರಾ........"

" ಗದ್ದಲವಾದರ ನಿಮ್ಮಗಳಿಯೂ ನಟ್ಟಗಾಗುವುದಿಲ್ಲ. ಬರಾಕಿನವರು ಮಾಂಸ ತಿನ್ನುದಿಲ್ಲ ತುಣುಕು ರೊಟ್ಟಿಗೆ ಅಂಟಿತ್ತೆಂಬುದು ತಿಳಿದರೆ ಒಳ್ಳೆಯದಲ್ಲ ಹೇಳಿಕೊಳ್ಳುತ್ತಾರೆ. ಬೇರೆ ತಂದುಕೊಡಿ. ವಿನಯದಿಂದ ಬೇಡಿಕೊಳ್ಳುತ್ತೇನೆ.

" ನೀನು ತಿನ್ನುವಿಯಾ ? "

" ಇಲ್ಲ "

" ನಿಮ್ಮಪ್ಪ ತಿನ್ನುತ್ತಾನೆ. ಭಡವೆ. ಬೇರೆ ತರಬೇಕಂತ '

" ಎಚ್ಚರದಿಂದ ಮಾತನಾಡು "

' ನಿನ್ನ ಹೆಂಡತಿಯಲ್ಲನಾನು "

ಮಾತಿಗೆ ಮಾತು ಮಥಿಸತೊಡಗಿದವು. ವಿಕ್ರಮನ ತಾಯಿ ಹೆಂಡತಿಯರೂ ನಿಂದನೆಯಲ್ಲಿ ಸಿಕ್ಕರು. ಸೀಪಾಯಿಯ ಬಾಯಿಗೆ ತಾಳವೇ ಇರಲಿಲ್ಲ. ಕೀಳು ಶಬ್ದಗಳಿಂದ ಹಳಿದ ನಿಂದಿಸಿದ. ವಾರ್ಡರನು ಪೋಲಿಸನಿಗೆ ಬೆಂಬಲಿಗನಾಗಿ ತಾತ್ಸಾರದ ನಗೆ ತೋರುತ್ತಿದ್ದ. ವಿಕ್ರಮನು ಅದೆಷ್ಟು ಬಗೆಯಾಗಿ ಬೇಡಿಕೊಂಡ. ವಿಕ್ರಮನ ವಿನಯ ಸೀಪಾಯಿಗೆ ಹಾಸ್ಯದ್ದಾಯಿತು. ಕಂಡ ಕಂಡಂತೆ ತುಚ್ಛೀಕರಿಸಿ ಮಾತನಾಡಿದ. ಮಾಂಸತಿನ್ನು. ಹೊಲಸು ತಿನ್ನುವ ನೀವು ಮಾಂಸತಿನ್ನುವದಿಲ್ಲವೇ ' ಎಂದ. ಸಹನೆಗೆ ಸ್ಥಾನವಿಲ್ಲದಾಯಿತು. ಎದ್ದವನೇ ಸೀಪಾಯಿಯ ಕೆನ್ನೆಗೆ ಜೋರಿನಿಂದ ಒಂದರಮೇಲೊಂದರಂತೆ ಹೊಡೆದ. ಸೀಪಾಯಿ ಕೈಗುಣಿಯಿಂದ ವಿಕ್ರಮನನ್ನು ಜಡಿದ. ವಾರ್ಡರನು ಸೀಪಾಯಿಗೆ ಸಹಾಯಕನಾದ. ಬರಾಕಿನವರು ಗದ್ದಲಕ್ಕೆ ನೆರೆದರು. ವಿಕ್ರಮನ ವಿಪನ್ನಾವಸ್ಥೆ ಕಣ್ಣಾರೆ ಕಂಡರು. ಬೆಟಗೇರಿಯ ಸಾವಜೀ ಆವೇಶದಿಂದ ಗದ್ದಲದಲ್ಲಿ ನುಗ್ಗಿದ. ವಿಕ್ರಮನ ಕೆನ್ನೆಯ ಮೇಲೆ ಬೆರಳಗುರುತುಗಳಿದ್ದವು. ಕಣ್ಣೀರು ಇಳಿಯುತ್ತಿದ್ದವು. ಸಾವಜೀ ಸೀಪಾಯಿಯನ್ನು ಒತ್ತಿ ಹಿಡಿದು ನೆಲಕ್ಕೆ ಕೆಡಹಿದ. ಮೇಲೆ ಕುಳಿತು ಶಕ್ತಿಸರ್ವಸ್ವವನ್ನು ಉಪಯೋಗಿಸಿದ. ಸಿಟ್ಟು ಶಾಂತವಾಗದ್ದಕ್ಕೆ ಸೀಪಾಯಿಯ ಮೈಮೇಲಿನ ಬಟ್ಟೆ ಚರಚರ ಹರಿದ. ಅವನ ಕೈಗೆ, ಮುಖಕ್ಕೆ ಕಂಡಲ್ಲಿ ಕಡಿದ ! ಸೀಪಾಯಿ ವಿಲಿವಿಲಿ ಒದ್ದಾಡುತ್ತಿದ್ದ ! ವಾರ್ಡರನು ಇನ್ನಿತರರ ಕೈಗೆ ಸಿಕ್ಕು ಒದ್ದಾಡಿದ. ಸೀಟಿ ಊದಿದ. ಸೀಪಾಯಿಗಳೆಲ್ಲ ಓಡಿ ವಿಕ್ರಮನಿರುವ ಬರಾಕನ್ನು ಹೊಕ್ಕರು. ಜಮಾದಾರನೂ ಓಡಿ ಬಂದ. ಜೇಲರನೂ ಪ್ರವೇಶಿಸಿದ. ಕಾರಣ ಕೇಳಲೊಲ್ಲರು. ನೆಲಕ್ಕೆ ಬಿದ್ದ ಸೀಪಾಯಿಯನ್ನು ಎತ್ತಿದರು. ಜೇಲರನು 'ಏನು?' ಎಂದ. ವಿಕ್ರಮನೇ ಕಾರಣನೆಂದು ಬೆರಳಿನಿಂದ ತೋರಿಸಿದ ವಾರ್ಡರ. ಜೇಲರನು ವಿಕ್ರಮನನ್ನು ಒದ್ದು ನೆಲಕ್ಕೆ ಕೆಡಹಿದ. ಪೋಲೀಸರು ವಾರ್ಡರ, ಜೇಲರ ಎಲ್ಲರೂ ಒದ್ದರು. ಮೊರಬದ ಶಾಮನು ಪ್ರೇಕ್ಷಕನಾಗಿದ್ದವನು ಮೆಲ್ಲನೇ ಮುಂದೆ ಬಂದ. ಸುಖಸಾರಕ ರಸಾಯನ ತುಂಬಿದ ದೊಡ್ಡ ಪಾತ್ರೆ ಎತ್ತಿ ಜೇಲರನ ಮೇಲೆ ಸುರಿದ. ಇನ್ನೂ ಖಳ್-ಖಳ್

ಕುದಿಯುತ್ತಲಿರುವ ರಸಾಯನ ಸುರಿದರೆ ಜೇಲರನ ಗತಿ ಏನು ? ಸಾಯುವ ಸಂಕಟದಿಂದ ಚೀರಿದವನೇ ಸೀಟಿ ಊದುತ್ತ ಓಡಿದ. ನಡೆಯಲು ಶಕ್ತಿ ಸಾಲದೇ ಬಾಗಿಲಲ್ಲಿ ಬಿದ್ದ. ಸೀಪಾಯಿಗಳು ಹೊತ್ತುಕೊಂಡು ಹೊರಟರು.

ಎಲ್ಲ ಬರಾಕಿನಲ್ಲಿ ಕೋಲಾಹಲವೆದ್ದಿತು. ಏನಾಯಿತು? ಯಾರನ್ನು ಹೊಡೆದರು ? ಕೂಗಿ-ಕೂಗಿ ಕೇಳುವುದು ಹೇಳುವುದು ನಡೆಯಿತು. ಪೋಲೀಸರ ಭಯಸೂಚಕ ಸೀಟಿಗಳು ಒಂದೇ ಉಸುರಿನಿಂದ ಊದುತ್ತಿದ್ದವು. ಕಾಯ್ದಿಟ್ಟಪೋಲೀಸ ದಳವೇ ಒಳನುಗ್ಗಿತು. ಕೈದಿಗಳು ಹೌಹಾರಿದರು. ಪೋಲೀಸರು ಪ್ರತಿಯೊಂದು ಬರಾಕಿನಲ್ಲಿ ನುಗ್ಗಿದರು. ಕಂಡವರನ್ನು ಕೈಗುಣಿಯಿಂದ ಟೊಂಕದ ಕೆಳಗೇ ಹೊಡೆದು, ಉರುಳಿಸುತ್ತಲಿದ್ದರು. ಚೀರುವದು, ನರಳುವುದು ಹಾಹಾಕಾರವು ಪ್ರತಿಬರಾಕಿನಿಂದ ಕೇಳತೊಡಗಿದವು. ಕೈದಿಗಳೂ ರೊಚ್ಚಿದರು. ಪ್ರತಿಭಟಿಸುವ ನಿರ್ಧಾರ ಕೈಕೊಂಡರು. ಸಾಯುವುದಕ್ಕೆ ಸಿದ್ಧರಾಗಿರಿ. ಹೊಡೆಯಿರಿ. ಹೆದರಬೇಡಿರಿ ಎಂಬ ಸಂದೇಶಗಳು ತಲ್ಪಿದವು. ಹೇಡಿಗಳೂ ಹುಮ್ಮಸಗೊಂಡರು. ದೌರ್ಬಲ್ಯವನ್ನು ಕಳೆದೊಗೆದರು. ಒಳನುಗ್ಗಿದ ಪೋಲೀಸರ ಕೈಗುಣಿ ಕಸಿದರು. ಕಾಳಗವು ಸಾಗಿತು. ಚೀತ್ಕಾರ ಹಾಹಾಕಾರದ ಬದಲು 'ಹರಹರ ಮಹಾದೇವ.' ಕೇಳುತ್ತಿದ್ದಿತು. ಬರಾಕನ್ನು ಬಿಟ್ಟು ಹೊರಬರಲು ಆಜ್ಞೆಆಯಿತು. ಸೀಪಾಯಿಗಳ ಆಜ್ಞೆ ಅಲ್ಲ. ಪೋಲೀಸರ ಹಿಡಿ ತಪ್ಪಿಸಿಕೊಂಡು ಕೈದಿಗಳು, ಬರಾಕಿನ ಮುಂದಿರುವ ಬೈಲಿನಲ್ಲಿ ನಿಂತರು. ಕಲ್ಲಿನ ತೂರಾಟಗಳು ನಡೆದವು. ಬೈಲಿನಲ್ಲಿಯ ಕಾಳಗವು, ಊರ್ಜಿತ ಸ್ಥಿತಿ ಪಡೆಯುತ್ತಲೇ ಇದ್ದಿತು. ಒಬ್ಬರ ಮಾತು ಒಬ್ಬರಿಗೆ ಕೇಳುವಂತಿಲ್ಲ. ಕಲ್ಲುಗಳು ತೂರಿ, ಹಾರಿ ಬರುತ್ತಿದ್ದವು. ಬರಾಕಿನ ತಗಡುಗಳ ಮೇಲೆ ಬಿದ್ದುದಕ್ಕೆ ಸಪ್ಪಳು ಅತಿ ಆಯಿತು, ಸೀಪಾಯಿಗಳ ತಲೆ ಒಡೆದಂತೆ, ಕೈದಿಗಳನೇಕರ ತಲೆ ಒಡೆದಿದ್ದುವು. ಕೈಕಾಲುಗಳು ಮುರಿದಿದ್ದುವು. ಕೊನೆಗೆ ಸೀಪಾಯಿಗಳೇ ಹೊರಕ್ಕೆ ಓಡಿದರು. ಕೈದಿಗಳಲ್ಲಿ ಶಾಂತತೆ

ಇನ್ನೂ ಜನಿಸಿರಲಿಲ್ಲ. ಬರಾಕಿನ ತಗಡುಗಳನ್ನು ಕಿತ್ತಿದರು. ನಿಃ೦ನ ಸಂಗ್ರಹವನ್ನು ಉರುಳಿಸಿದರು. ಶಕ್ಯವಿದ್ದ ಹಾನಿಯನ್ನು ಮಾಡಲು ದೃಢ ಸಂಕಲ್ಪಿತರಾಗಿ ಸಾಗಿಸುತ್ತಿದ್ದರು.

ಕೈದಿಗಳಲ್ಲಿ ಕೆಲವರು, ಪ್ರಳಯವೇ ಸನ್ನಿಹಿತವಾಯಿತೆಂದು ಭಾವಿಸಿದರು. ಇನ್ನು ತಾವು ಬದುಕುವುದಿಲ್ಲವೆಂದು ಕೊರಗಿದರು ಕಂಡಲ್ಲಿ ಅಡಗಿದರು. ಬಂದದ್ದೆಲ್ಲ ಬರಲಿ ಗೋವಿಂದನ ದಯ ಒಂದಿರಲೀ ಎನ್ನುತ್ತ, ತಮ್ಮ ಬರಾಕುಗಳಲ್ಲಿ ಕುಳಿತರು ಕೆಲವರು. ವಿಕ್ರಮನೆಲ್ಲಿ? ಹೋರಾಟದ ಜನಕ! ಅವನ ಸುಳಿವೇ ಇಲ್ಲ. ಸಾವಜೀ-ಶಾಮೂ ಹುಡುಕಿದರು. ಬರಾಕಿನವರೆಲ್ಲರನ್ನು ಕೂಗಿ ಕೇಳಿದ ಕೂಗಿದರೆಂಬುದಷ್ಟೇ ತಿಳಿಯುತ್ತಿದ್ದಿತು. ಏನು ಕೇಳಿದರೆಂಬುದನ್ನು ತಿಳಿಯುವುದು ಕಷ್ಟ ಭೀಮಣ್ಣನು ಕಾಳಗದ ಧುರೀಣನೇ. ತನ್ನ ವಿಕ್ರಮನೇ ಜನಕನೆಂಬುದಕ್ಕೆ ಹೆಮ್ಮೆ ಬೇರೆ ಭೀಮಣ್ಣನ ಮೈತುಂಬ ಗಾಯಗಳಾಗಿದ್ದವು ತಲೆ ಒಡೆದುದರಿಂದ ನೆತ್ತರವು ಕೆನ್ನೆಗುಂಟ ಇಳಿಯುತ್ತಿದ್ದಿತು ಅದಾವುದರ ಪರಿವೆ ಅವನಿಗಿದ್ದಿಲ್ಲ 'ವಿಕ್ರನೆಲ್ಲಿ? ವಿಕ್ರನೆಲ್ಲಿ?' ಶೋಧಿಸುತ್ತ ಶಾಮು-ಸಾವಜೀಗಳನ್ನು ಕೂಡಿದ.

"ವಿಕ್ರಮನೆಲ್ಲಿ ಸಾವಜೀ?"

"ನಾನೂ ಹುಡುಕುತ್ತಿದ್ದೇನೆ."

"ಬರಾಕಿನಲ್ಲಿ ಇಲ್ಲ"

"ಪೋಲೀಸರು ಎಳೆದೊಯ್ದರೇ ?"

"ಇಲ್ಲ. ನಾನು ನೋಡುತ್ತಲೇ ಇರುವೆ"

"ಹಾಗಾದರೆ ಎಲ್ಲಿರುವ !"

"ಎಳೆವೇ ಒಯ್ದಿರ ಬಹುದೇನು ?"

"ಭೀಮಣ್ಣಾ"

"ಏನು ಸಾವಜೀ ?"

" ಆಫೀಸರ ಒಳಕ್ಕೆ ನುಗ್ಗೋಣ. ಜೀವ ಹೋಗಲಿ. ಕರೆದು ಕೊಂಡೇ ಬರೋಣ. "

" ರಾಮೂ.... "

" ಗುರುಗಳನ್ನು ಕರೆದುಕೊಂಡೇ ಬರೋಣ. "

" ಜೀವ ಹೋಗಲಿ ಬಿಡಿಸಿಕೊಂಡೇ ಬರೋಣ ನಡೆಯಿರಿ

ಹೊರಡುವುದಕ್ಕೆ ಸಿದ್ಧರಾದರು. ಬೆಂಬಲಕ್ಕೆ ನೂರೆರಡು ನೂರು ಕೈದಿಗಳೂ ಕಲೆತರು. ಯಾರ ಮೊಗದಲ್ಲಿಯೂ ನಿರಾಶೆಯಿಲ್ಲ. ಸ್ಫೂರ್ತಿ ಇದೆ. ಹೋರಾಟದ ಕೆಚ್ಚಿದೆ. ' ರಾಮಾ, ರಾಮಾ ' ವಿಕ್ರಮನೇ ಕೂಗಿ ಕರೆದುದು ಕೇಳಿತು. ಸಂತಸದಿಂದ ನೋಡಿದರು. ಸೆರೆಯಿಂದ ವಿಕ್ರಮನು ಬಂದ. ರಾಮು ಹಿಡಿದ ವಾಯುಯಾನದಲ್ಲಿ ಅತಗೆ ಕುಳಿತಿದ್ದ ಎಂದು ಹೇಳುವನೇ ನಿಲ್ಲುವನೆ? ಆಗ ಹೋರಾಟದ ಅರ್ಜಟಿಕ್ಕ ಬಿದ್ದು ಓಡಿದ್ದ. ಓಡುವುದನ್ನು ಯಾರೂ ನೋಡಬಾರದೆಂದು ಅವನಿಕ್ಷೆ ಶಾಂತತೆ ನೆಲಸಿದು ದನ್ನು ತಿಳಿದು ಹೊರಬಂದ. ಆವೇಶದಿಂದ ಮಾತನಾಡಿದ.

" ರಾಮೂ, ಈ ದಿನ ಬಹಳ ಅನ್ಯಾಯ ಮಾಡಿದೆವು. ಕಾಂಗ್ರೆಸ್ಸಿನ ತತ್ತ್ವಗಳನ್ನೆಲ್ಲ ಮುರಿದೆವು. ಘೋರ ಅಪರಾಧ ಮಾಡಿದವು ನಮ್ಮ ಒಂದು ತಪ್ಪಿಗಾಗಿ ಎಷ್ಟು ಜೀವಿಗಳು ಕಷ್ಟಪಟ್ಟವು. ಹಿಂಸೆ ಆಯಿತು. ರಕ್ತ ಕಾಣಿಸಿಕೊಂಡಿತು "

" ಸಾಕು ಸುಮ್ಮನಿರಿ ಗುರುಗಳೇ ?

" ಏ ದೇಶಭಕ್ತಾ- ಇದರಲ್ಲಿ ನಿನಗೆ ತಿಳಿಯುವದಿಲ್ಲಾ ಸುಮ್ಮನಿರು " ಭೀಮಣ್ಣನೆಂದ.

" ಹಿಂಸಾ ಕೃತಿ ನಮ್ಮಿಂದಾಯಿತು "

“ ಜೇಲರನಲ್ಲಿ ಕ್ಷಮೆಯಾಚಿಸೋಣ ”

“ ಸತ್ತರೂ ನನ್ನಿಂದಾಗದು ”

“ ಹಾಗಾದರೆ ನಾನು ಉಪವಾಸ ಮಾಡುವೆ. ಈ ಅಸಂತೋಷವು ಇಲ್ಲವಾಗುವ ವರೆಗೆ ಉಪವಾಸ !! ” ವಿಕ್ರಮನು ತಲೆಹಿಡಿದುಕೊಂಡು

---

# ಅಗ್ನಯೇ ಸ್ವಾಹಾ !!

ವಿಕ್ರಮನ ಮನಕ್ಕೆ ಸ್ವಾಸ್ಥ್ಯವಿರಲಿಲ್ಲ. ತನ್ನ ಕಿಂಚಿತ್ ಕೋಪದ ಅನಾಹುತಕ್ಕೆ ನಡುಗಿದ. 'ಶಠಂಪ್ರತಿಶಾಠ್ಯಂ' ಎನ್ನುವವನು ಆವನಲ್ಲ. ಇಂದಿನ ಪ್ರಕರ್ಣದಿಂದ ತನ್ನನ್ನು ಕಲ್ಪನಾತೀತ ಕಷ್ಟಕ್ಕೆ ಗುರಿಪಡಿಸುವ ರೆಂದ. ತನ್ನದ್ದೇ ತಪ್ಪು. ಅನರ್ಥಕ್ಕೆಲ್ಲ ತಾನೇ ಕಾರಣನು ಎಂಬ ಬೇನೆ ವಿಕ್ರಮನಿಗೆ. ಊಟ ಬರಲೇ ಇಲ್ಲ. ಸಿಪಾಯಿಗಳು ಬರಾಕಿನ ಸಮೀಪಕ್ಕೂ ಸುಳಿಯದಾದರು. ಜೇಲರನು ರಸಾಯನ ಸ್ನಾನದಿಂದ ಮರಣ ಮುಖದಲ್ಲಿರಬಹುದು. ಬರಾಕಿನ ಕೈದಿಗಳು ರೊಚ್ಚಿನಲ್ಲಿ ಇದ್ದರು. ವಿಕ್ರಮನೊಬ್ಬನೇ ತಳಮಳಿಸುವನು. ಜೇಲರನಲ್ಲಿ ಕ್ಷಮೆಯಾಚಿಸುವ ಇಚ್ಛೆ ಪ್ರಬಲವಾಗಿತ್ತು. ಶಾಮನ, ಭೀಮಣ್ಣನವರ ಮಾತಿಗೂ ಮನ್ನಣೆ ಕೊಡಬೇಕಾಗಿತ್ತು. ಇದ್ದಕ್ಕಿದ್ದಂತೆ ಸುಪ್ರಿಂಟೆಂಡೆಂಟರು ಒಬ್ಬಂಟಿಗರಾಗಿ ಒಳಕ್ಕೆ ಬಂದರು. ಕೈದಿಗಳು ಹುಯಿಲೆಬ್ಬಿಸಿದರು. ಅಂಜುತ್ತ ಮುಂದೆ ಬರುತ್ತಲಿದ್ದರು. ಕೈಮುಗಿದರು ಕೈದಿಗಳಿಗೆ. ಜೊತೆ ಪೋಲೀಸರಿರಲಿಲ್ಲ. ಅವರನ್ನು ಎಂದೂ ಬಿಟ್ಟಿರದ ಪಿಸ್ತೂಲೂ ಅಗಲಿದ್ದಿತು. ಹುಂಬ ಕೈದಿಗಳು ಕೂಗಿದರು. 'ಹರಾಮಖೋರ. 'ದಾರೂ ಪೀನಾ ಹರಾಮಹೈ' ಎಂದರು. ಸುಪ್ರಿಂಟೆಂಡೆಂಟರು, ಜೋಡಿಸಿದ ಕರಗಳನ್ನು ಕೆಳಕ್ಕಿಳಿಸದೇ 'ಶಾಂತರಾಗಿ, ಶಾಂತರಾಗಿರಿ. ನಿಮ್ಮ ಬಂಧುವಲ್ಲವೇ ನಾನು. ನಿಮ್ಮೊಡನೆ ಒಂದೆರಡು ಮಾತನಾಡುವೆ' ಎಂದು ವಿನಯವಾಗಿ ಮಾತನಾಡಿದರು. ವಿನಯದ ಅರ್ಥವನ್ನೇ ಕೈದಿಗಳು ಬೇರೆವಿಧದಲ್ಲಿ ವಿದ್ರೂಪಗೊಳಿಸಿದರು. ಅವನ ಮಾತುಗಳು ಕೇಳಿಸದಂತೆ ಕಿರಚಿದರು.

ವಿಕ್ರಮನು ರಭಸದಿಂದ ಹೊರ ಬಂದ. ಶಾಮು ಭೀಮಣ್ಣನವರು ಬೇಡವೆಂದುದನ್ನು, ಗಮನಿಸುವ ತಾಳ್ಮೆ ಅವನಲ್ಲಿರಲಿಲ್ಲ. ಸುಪ್ರಿಂಟೆಂಡೆಂಟರವರ ಕಡೆಗೆ ನೇರವಾಗಿಸಾಗಿದ, ಸಾಷ್ಟಾಂಗ ನಮಸ್ಕಾರವನ್ನೇ ಹಾಕಿ, ದೇವನೆದುರು ನಿಲ್ಲುವ ಭಕ್ತನಂತೆ ನಿಂತ.

" ಸಾಹೇಬ, ನನ್ನದೇ ತಪ್ಪು." ವಿಕ್ರಮನು ಕಂಪಿತ ಧ್ವನಿಯಿಂದ ಹೇಳಿ ಅವರ ಉತ್ತರದ ನಿರೀಕ್ಷಣೆಯಲ್ಲಿ ನಿಂತ. ಸಾಬರ ಕೈಕೋಳಕ್ಕೆ ಬಂದಿರಲೇ ಇಲ್ಲ.

" ಯಾರ ತಪ್ಪೂ ಇದರಲ್ಲಿಲ್ಲ "

" ಸಾಹೇಬ ನಾನೇ ನೊದಲು ಹೊಡೆದೆ "

" ಅವನೂ ಕೀಳು ಶಬ್ದಗಳಿಂದ ನಿಂದಿಸಿದ."

" ಆದರೂ ನಾನೇ ತಾಳ್ಮೆವಹಿಸಬೇಕಿತ್ತು ತಪ್ಪು ನನ್ನದೆ "

" ಯಾರ ತಪ್ಪೇ ಇರಲಿ. ವ್ಯವಸ್ಥೆಯೇ ಸರಿ ಇರಲಿಲ್ಲವೆಂದುಕೊಳ್ಳುವ ಕೈದಿಗಳು ಊಟಮಾಡಲಿ. ಜೇಲರನ ಪ್ರೋಲೀಸರ, ಪತಿಯಿಂದ. ನಾನು ಕ್ಷಮೆ ಕೇಳಿಕೊಳ್ಳುತ್ತೇನೆ ದಯಮಾಡಿ, ಎಲ್ಲರಿಗೂ ಹೇಳಿಕೊಳ್ಳಿರಿ. ಅವರು ಕೇಳಿದುದನ್ನು ಕೊಡುವೆ. ಜೇಲಿನಲ್ಲಿ ಗದ್ದಲವಾಗುವುದು ನನಗೆ ಬೇಡ ನಿನ್ನಂತೆ ನಾನೂ ದೇಶಪ್ರೇಮಿ "

ಸಾಬರ ಮಾತಿಗೆ ವಿಕ್ರಮನು ಮರುಳಾದ ಸಾಬರ ಪತಿಯಿಂದ ಕೈದಿಗಳಿಗೆ ಶಾಂತರಾಗಿರಲು ಪ್ರಾರ್ಥಿಸುವುದಕ್ಕೆ ಹೊರಟ. ಎಲ್ಲರನ್ನೂ ಕಂಡ. ಸಾಬರು ವಿನಂತಿಮಾಡಿಕೊಂಡ ಶಬ್ದಗಳಿಂದಲೇ ಹೇಳಿ ಒಪ್ಪಿಸಿದ ಹಿಂದೆ ನಿಂದನೆಯೂ ಪ್ರಾರಂಭವಾಯಿತು ನಾವಜೀ ಶಾಮರು ಮಾತ್ರ ನೋತ ಕೈಸಿಕರಂತಾದರು ಜೀವಕೊಡಲು ಸಿದ್ಧರಿರುವಾಗ ವಿಕ್ರಮನು ನಮಸ್ಕರಿಸಿ ಕ್ಷಮೆಯಾಚಿಸಿದುದು, ಅಸಹ್ಯವಾಯಿತು. ವಿಕ್ರಮನು 'ಗಂಡೈಕ್ಷೆ'ಂದು ಮುಂಬಣ್ಣನು ಹುರಿದಿದ್ದ 'ಈ ಜೇಲರನಿಗೆ ವರ್ಗವಾಗಬೇಕು. ಪ್ರತಿದಿನ ವೃತ್ತಪತ್ರಗಳಲ್ಲಿಯ ಮಹತ್ವದ ಸುದ್ದಿಗಳ ಕುತ್ತಿಗೆ ಕೊಯ್ಯದೇ ಕೊಡಬೇಕು. ಕನ್ನಡ ಲಾಯಬ್ರರಿಗೆ ೫೦೦ ಪುಸ್ತಕ ತರಿಸಬೇಕು ಅಡುಗೆಯ ವ್ಯವಸ್ಥೆಯಲ್ಲಿ, ಕೈದಿಗಳ ಪ್ರತಿನಿಧಿಗಳಿರಬೇಕು' ಪ್ರಚಂಡ ಬಹುಮತದಿಂದ ಸೂಚನೆಗಳು ಅಂಗೀಕೃತವಾದವು. ಸುಪ್ರಿಂಟೆಂಡೆಂಟರವರಿಗೆ ನಿರ್ಣಯದ ಪ್ರತಿಯನ್ನು ಕಳುಹಿಸಿದರು. ಬೇಡಿಕೆ ನೋಡಿದನೋ ಇಲ್ಲವೋ ಅಸ್ತಿಸೀ ದೇವತೆಗಳಂತೆ 'ತಥಾಸ್ತು' ಎಂದ.

§ § § § § §

ಅಶ್ವಿನೀ ದೇವತೆಯು 'ತಥಾಸ್ತು'ವ ದುರಸ್ತಿಯೇ ನಡೆಯಿತು ಒಂದು ಬರಾಕಿನವರು ಇನ್ನೊಂದು ಬರಾಕಿಗೆ ಹೋಗಿ ಬರುವುದಕ್ಕೆ ಪ್ರತಿಬಂಧವಿಲ್ಲ. ಆದರೆ ಸಿಸ್ತು ಸಂಘಟನೆಗಾಗಿ, ಕೈದಿಗಳ ಹಿತಕ್ಕಾಗಿ ಜೇಲರನ ಅಪ್ಪಣೆಪಡೆದೇ ಹೋಗತಕ್ಕದ್ದು. ಕೈದಿಗಳ ಪ್ರಕೃತಿ ಕೆಡುತ್ತಲಿದೆ, ಆದುದರಿಂದ, ಈಜಲು ಕೆರೆಗೆ ಹೋಗತಕ್ಕದ್ದಲ್ಲ. ಬರಾಕಿನ ಸುತ್ತಲೂ ಇರುವ ಬೈಲಿನಲ್ಲಿ ಆಟವಾಡಬಹುದು. ದುರಸ್ತಿ ಪತ್ರಹೊರಬೀಳಲಿಲ್ಲ. ವೃತ್ತಪತ್ರದಲ್ಲಿ ಪ್ರಕಟವಾಗಲಿಲ್ಲ. ನಿತ್ಯದ ಜೀವನದಲ್ಲಿ ಮಾರ್ಪಾಡುಗಳಾದವು. ಜೇಲರನು ಹೊಸಬ ಬಂದುದು ನಿಜ ಕ್ರೂರನಲ್ಲ ಕೈದಿಗಳನ್ನು ಮಾತಿನಿಂದ ಮೆತ್ತಗೆ ಮಾಡುತ್ತಲಿದ್ದ. ಬಿರುನುಡಿಇಲ್ಲ ಬೆದರಿಕೆ ಇಲ್ಲ. ಕೈದಿಗಳು ಸರ್ಕಸ್ ಸಿಂಹಗಳೆನಿಸಿಕೊಂಡರು. ಜೇಲರ ರಿಂಗ ಮಾಸ್ಟರನಾದ.

೧೧ಳತಿ ಒಂದು ಮೂಲೆಯ ಚಾಪೆಯಲ್ಲಿ ಕುಳಿತಿರುವ ಮಲುಗುವ. ಎಲ್ಲರೂ ನಿದ್ರಿಸಿದರೆಂಬುದು ತಿಳಿದಾಗ, ಆ ತುದಿಯಿಂದ, ಈ ತುದಿಯವರೆಗೆ, ಕೈಕಟ್ಟಿಕೊಂಡು ತಿರುಗುವನು. ಮನೆಯವರ ಮೊದಲು 'ರತ್ನಾ' ವಿರಹ ಮಧ್ಯೆ, ಒದೆತ ತಿಂದುದನ್ನೂ ಕೊನೆಗಿರಿಸಿ ಎಲ್ಲವನ್ನೂ ಕಾಣುವನು. ಬಾಗಿಲಲ್ಲಿ ನಿಂತು, ಚಂದ್ರನನ್ನು ಕಂಡು ಮನಕ್ಕೆ ತಣ್ಣನ್ನು ಸಲ್ಲಿಸುವನು. ಎಲ್ಲರಿಗೂ ಮೊದಲು ಸ್ನಾನ ತೀರಿಸುವ. ಯಾರೊಡನೆಯೂ ಮಾತು ಬೇಡದೆ ಏಕಾಂತದಲ್ಲಿ ಕುಕ್ಕಿರುವ. ಗಂಜಿ ಪ್ರಾಶನವನ್ನು, ರಸಾಯನ ಸ್ನಾನದ ದಿನವೇ ಬಿಟ್ಟಿದ್ದ. ಒಪ್ಪತ್ತು ಎರಡು ರೊಟ್ಟಿಯಾದರೆ ಸಾಕು ಅವನಿಗೆ. ವಿಕ್ರಮನನ್ನು ಕಾಣಲು ಯಾರೂ ಬರುತ್ತಲಿರಲಿಲ್ಲ. ಕೈದಿಗಳು ನೂಲುವರು. ಹತ್ತಿ ಹಿಂಜುವರು, ಹಂಜಿ ಮಾಡಿಕೊಳ್ಳುವರು. ಅಭ್ಯಾಸದಲ್ಲಿ ಕೆಲವರು. 'ಜೋಗ'ನ ಶಿಷ್ಯರೇ ಬಹುಸಂಖ್ಯಾಂಕರು ಜೇಲಿನಲ್ಲಿ. ೧೧ಳತಿ ಚಾಪೆಯ ಮೇಲೆ! ಜೋಗನು ಮಾತನಾಡಿಸಲು ಯತ್ನಿಸಿ ವಿಫಲನಾದ. ಹುಂಬಣ್ಣನವರು ಸೋತರು. ಸಾಹಜಿ ಶಾಮರು 'ಏನಿದೆಯೋ ಏನೋ' ಎಂದರು. 'ಮನೆಯ ಚಿಂತೆ ಬಲವಾಗಿದೆ' ಎಂದವರು ಕೆಲ

ವಿದು. ಜೋಗನು ಬಹುವಿಧದಿಂದ ಪ್ರಯತ್ನಿಸಿದ ಕುಮಾರ ವ್ಯಾಸ-ನನ್ನು ಸ್ಮರಿಸಿದ ವಿಕ್ರಮನು ಗಿಡಪಡಿಯನ್ನು, ಚಾಪಿಯನ್ನು ಬಿಡಲಿಲ್ಲ.

ಅಚ್ಚುಕಟ್ಟಿಲ್ಲದ ಭಜನೆ ಮುಗಿದಿತ್ತು. ಕೈದಿಗಳು ನಿದ್ರಿಸುತ್ತಿದ್ದರು. ಕಾವಲರು ಕೂಗುತ್ತಿದ್ದರು ಬರಾಕಿನ ಕಂದೀಲುಗಳು ಮಂದ ಬೆಳಕನ್ನು ಬಿಡುತ್ತಿದ್ದವು ವಿಕ್ರಮನು ಬೆಳೆದಗಡ್ಡ ತೀಡುತ್ತ ಟೆಂಗಿನಚಾಪಿಯ ಮೇಲೆ ಕುಳಿತಿದ್ದ. ಲಂಗೋಟಿಯು ಹೊರತು ಬೇರೆ ಒಟ್ಟೆಗಳು ಮೈಮೇಲಿ ರಲಿಲ್ಲ 'ಹುಚ್ಚು ಹಿಡಿಯಬಹುದೇ' ಎಂದು ಜನನುಡಿಯುವಂತೆ ಇದ್ದ. ಬೆಳೆದ ತಲೆ ತುರಿಸುವ. ಅಂಗಾತ ಮಲಗಿ ಉಸಿರ್ಗರೆಯುವ. ಭರ್ರನೇ ಹೋಗಿ ನೀರ್ಕುಡಿದು ಅಲ್ಲಿಯೇ ಕುಳಿತುಕೊಳ್ಳುವ. ಓಡಿಬಂದ ತಂಬಾಕ ದಲ್ಲಿ ಸುಣ್ಣಬೆರಿಸಿ ಬಾಯಿಗೆ ಹಾಕಿ ಕೂಡ್ರುವ. ವಿಕ್ರಮನು ಬಾಗಿ-ಲಲ್ಲಿ ನಿಂತು ಕರಾಳ ರಾತ್ರಿಯನ್ನು ಕಂಡ ವೇಗವಾಗಿ ಬಂದು, ನಾಲ್ಕು ಕಂದೀಲುಗಳನ್ನೂ ಒಂದೆಡೆಗಿರಿಸಿದ. ದೀಪಗಳಿಗೆ ಮೋಕ್ಷವದ ಪ್ರಾಪ್ತ ಮಾಡಿಸಿದ. ಕಂದೀಲಗಳಲ್ಲಿದ್ದ ಎಣ್ಣೆಯನ್ನು ಜೇಲಿನ ಒಟ್ಟೆಯೊಂದರ ಮೇಲೆ ಸುರಿದ! ಮೊದಲಿದ್ದ ಸ್ಥಳಗಳಲ್ಲಿ ಕಂದೀಲುಗಳು ತೂಗಾಡಿದವು. ಬೆದರಿ ಸುತ್ತಲೂ ನೋಡುತ್ತಲಿದ್ದ. ಅತ್ಯವಸರವಾಗಿ ಹೋಗಿ ಚಾಪಿಯ ಮೇಲೆ ಮಲಗಿದ. ಮಲಗಿದವರು ವಿಕ್ರಮನ ಆಟ, ಸ್ವರೂಪ ನೋಡಿ-ದ್ದರೆ ಬೆದರದೇ ಇರುತ್ತಿರಲಿಲ್ಲ. ಕೆಲವರ ಕಲ್ಪನೆ ಹೀಗೂ ಆಗಬಹುದು. 'ಜೇಲಿನ ಜೀವನಕ್ಕೆ ಬೇಸತ್ತು ಆತ್ಮಹತ್ಯೆಮಾಡಿಕೊಂಡ ಕೈದಿಯೇ, ಭೂತ ರೂಪದಿಂದ, ರಾತ್ರಿ ಎಲ್ಲ ಜೇಲಿನಲ್ಲಿ ತಿರುಗುತ್ತದೆ' ಎಂದು-ಮಕ್ಕಳುಮಾತ್ರ ಪ್ರಾಣೋತ್ಕ್ರಮಣಮಾಡಲೇಬೇಕು ಅಸ್ತವ್ಯಸ್ತ ತಲೆಕೂದಲು ಒಣಗಿ ಬತ್ತಿದ ಮುಖದ ಮೇಲಿನ ವಿಕಾರಗಡ್ಡ ಮೀಸೆಗಳು. ಲಂಗೋ-ಟಿಯ ಚುಂಗನ್ನು ನೆಲಕ್ಕೆ ಅಲೆಯಿಸುತ್ತ ತಿರುಗುವುದನ್ನುಕಂಡು, ಭೂತ ಪಿಶಾಚಿ ಎನ್ನದಿರರೇ? ಕೃಷ್ಣವರ್ಣ! ಗುಣಿಬಿದ್ದಗಲ್ಲ! ಬೆದರಿಕೆಯದೃಷ್ಟಿ!

ಮಲಗಿದಲ್ಲಿಯೇ ಕೆಮ್ಮಿದ ಎದ್ದುಕುಳಿತು ಮತ್ತೆಕೆಮ್ಮಿದ. ಕೆಮ್ಮಿನ ಟನೆಯಂತಿತ್ತು. ಕಾವಲಿನವರು ಕಂದೀಲನ್ನು ಹಿಡಿದು ತಿರುಗುತ್ತಿದ್ದರು.

ಎರಡು ಬಡಿದುಕೊಂಡಿತು ಗಂಟೆ. ವಿಕ್ರಮನು ಎದ್ದ ಹಾಸಿಗೆ ತೊರೆದು, ಎಣ್ಣೆ ತೊಯಿದ ಬಟ್ಟೆಯನ್ನು ಎತ್ತಿ ತಂದು, ಮಗ್ಗುಲಲ್ಲಿಯೇ ಇರಿಸಿ ಮಲಗಿದ ಬರಾಕಿನ ತಗಡಿನ ಮೇಲೆ ಹರಳು ಉರುಳಿದ ಸಪ್ಪಳಾಯಿತು ಎಣ್ಣೆ ಅರಿವೆಗಳನ್ನು ಕೈಯಲ್ಲ ತೆಗೆದುಕೊಂಡ. ೧೧೪೨ ಹೀಗೇಕೆ ಮಾಡು ವನು ? ಮೈ ಸುಟ್ಟುಕೊಳ್ಳುವನೇ ? ಜೇಲಿನ ಜೀವನವೇ ಸಾಕೆಂದು ಸಾವಿಗೆ ಸಿದ್ಧನಾದನೇ ?? ಕತ್ತಲಲ್ಲಿ ಕುಳಿತು, ಕೈಯೂರಿ ನಡೆವ ಆಚೆಯ ಬದಿಗೆ. ಕೈಯಲ್ಲಿ ಎಣ್ಣೆಮಯ ಚಿಂದಿ ಇದೆ. ಹಿಂದಿನ ಗೋಡೆಯ ಬದಿ ನಿಂತ. ಮಾಡನಾಡಲು ತೊಡಗಿದ. ಅವನ ಮಾತುಗಳನ್ನು ಕೇಳಲು ಸಾಧ್ಯವಾಗದ್ದಕ್ಕೆ, ಲಾಡಸ್ಪೀಕರ ತಂದು, ಅಕ್ರಮ ಬೇಚಾಳಿಸನ, ಬಾಯಿಗಿಡಬೇಕನ್ನುತ್ತಿ ವಲಾಯನ ಗೃಹ ವಾಯುದೇವ !

" ಸಾ .... .... "

" ಹೂಂ .... "

" ಸಿದ್ಧವೇ ? "

" ಹುಂ .... "

" ಸರತಿ ಬದಲಾಗುವ .... ಸಮಯಕ್ಕೆ "

" ಅನುಕೂಲವಿದೆ "

" ಹೆದರಬೇಡ "

" ಕಲಿತೇ ಇಲ್ಲ "

" ತೆಗೆದುಕೊಂಡೆಯಾ ? "

" ಹೂಂ "

" ಮಲಗಲಿಯಾ ? "

" ಹೂಂ .... "

" ಮತ್ತೇನು ? "

" " ನೀವು .... "

" ನನ್ನ ವಿಚಾರ ಬೇಡ "

**ವಂದೇ ಮಾತರಂ "**

ಭೂತವೇ ಆದ ಅಕಾ,ಸೆ ಬೇಚಾಳೀಸ, ಹಾಸಿಗೆಯ ಮೇಲೆ ಹೊರ ಳಿತು. ಕಾವಲು ಸೀಪಾಯಿಯನ್ನು ಕೂಗಿ ಕರೆದಿತು.

" ಮಲ್ಲಪ್ಪ .... "

" ಇನ್ನೂ ಮಲಗಿಲ್ಲವೇ ? "

" ಈಗ ಎಚ್ಚರಾಯಿತು. ನಿಮ್ಮ ಸ್ವರ ಕೇಳಿದೆ. ತಂಬಾಕಕ್ಕೇ...."

" ತೆಗೆದುಕೊಳ್ಳಿ. ಇದೇನು ರಾಯರೇ ? ವಿಶ್ವರೂಪ ದರ್ಶನ ಮಾಡಿಸುವಿರಿ ? "

ನಕ್ಕು, ತಂಬಾಕು ಕೊಂಡಪ್ಪನೇ ಹಾಸಿಗೆಗೆ ನಡೆದ. ಕಾವಲು ಸೀಪಾಯಿ Allwell ' ಆಲ್ ವೆಲ್ ' ಎನ್ನುತ್ತ ಹೆಜ್ಜೆ ಹಾಕಿದ. ವಿಕ್ರ ಮನು ಜೇಲಿನ ಕಂಬಳಿಯನ್ನು ಎಳೆದು, ತಲೆಬ ಹೊದೆದು ನಿದ್ರಿಸಿರ ಬಹುದು. ಮಿಸುಗುತ್ತಲಿಲ್ಲ ಹೊರಳುತ್ತಿರಲಿಲ್ಲ. ಕಾವಲಿನವರು ಕಲೆತು ಮಾತನಾಡುವಾಗಲೇ ಚಕಮುಕಿ ಕಟೆದು, ತಂಬಾಕು ತುಂಬಿದ ಮುಸಿಗೆ ಬೆಂಕಿಯನ್ನಿರಿಸಿದರು. ಜೇಲರನು ಅಹಮ್ಮದನಗರ ಸಿವ್ಹಿಲ್ ಆಸ್ಪತ್ರಿ ಯಲ್ಲಿ, ಗುಣವಡೆಯುತ್ತಲಿರುವುದನ್ನು ಒಬ್ಬ ಹೇಳಿದ. ಚಳವಳಿಯ ಆರ್ಭಟವನ್ನು ಒಬ್ಬ, ಹೊಸ ಜೇಲರನು, ತಮ್ಮನ್ನು, ಕೈದಿಗಳನ್ನು ಕಾಣುವ ರೀತಿಯನ್ನು ಬೇರೊಬ್ಬ. ಕುಳಿತಲ್ಲಿಯೇ ಅಚೆಯ ಕೂಗಿದವನಿಗೆ ಉತ್ತರವೆಂದು ಕೂಗುತ್ತಿದ್ದರು.

ಬೆರಗಾಗಿ ಆಕಾಶದ ಕಡೆಗೆ ನೋಡಿದರು. ಅತ್ತ-ಇತ್ತ ನೋಡಿ ದರು. ' ಭಯಂಕರ ಬೆಂಕಿ ! ಉರಿ ಹತ್ತಿದೆ' ಎಂದವನೇ ಸೀಟಿ ಊದಿದ. ಎಲ್ಲ ಸೀಪಾಯಿಗಳ ಸೀಟಿ ಊದಿಕೊಳ್ಳುತ್ತಲಿದ್ದವು. ಆಫೀಸಿನ ಬದಿ ಯಲ್ಲಿಯ ವಸ್ತ್ರಸಂಗ್ರಹಾಲಯದೆಡೆಗೆ ಧಾವಿಸಿದರು. ಕೈದಿಗಳೆಲ್ಲ ಎಚ್ಚ ತ್ತರು. ಬರಾಕುಗಳು ಬೆಳಗುತ್ತಿದ್ದವು, ಅಗ್ನಿನಾರಾಯಣ ಪ್ರಭಾವದಿಂದ. ಕೈದಿಗಳು ಕೈತಟ್ಟಿ ನಕ್ಕು ನಲಿಯುತ್ತಿದ್ದರು. ಜೇಲರನು ತ್ಯೋಡತಿ ಬೇಡ ವೆನ್ನುತ್ತಿದ್ದರೂ ಓಡಿ ಬಂದ. ಸುಪ್ರಂಟೆಂಡೆಂಟರು ದೀಪಿಯ ಪ್ರಸಾದ

ದಲ್ಲಿ ಮಗ್ನರಾದುದರಿಂದ ಹೊರಬರಲಿಲ್ಲ ಏನಾಗುವದೋ? ಯಾಕೆ ಈ ರೀತೀ ಗದ್ದಲವೋ! ಎಂದರು ಕೈದಿಗಳ ಅರಿವೆಗಳು ಉರಿಯುತ್ತವೆ. ಉರಿಯು ಆಟೋಪಕ್ಕ ಒರಲೊಲ್ಲದಂದರೆ ನಾನು ಒಂದು ಮಾಡುವದೇನು ? ಉರಿಯಲಿ. ಸುಡುವುದನ್ನು ನಾನೇಕೆ ನೋಡಬೇಕು ? ಸುಟ್ಟು ಬೂದಿಯಾದಾಗ ಶೀತಗಾಗುತ್ತದೆ. ಬಂದು ನೋಡುವೆ, ಎಂದು ಹೇಳಲು ಬಂದವನ ಮುಖದ ಮೇಲೆ ಉಗುಳಿದ್ದನು. ಅಗ್ನಿನಾರಾಯಣನು ಸಪ್ತಜಿಹ್ವೆಗಳನ್ನು ಚಾಚಿ, ಕೈದಿಗಳ ವಸ್ತ್ರಗಳನ್ನು ಆಹುತಿಕೊಳ್ಳುತ್ತಿದ್ದ. ಜ್ವಾಲೆಗಳು ವಾಯುವಿನ ಬೆಂಬಲದಿಂದ, ಪ್ರಜ್ವಲಿತವಾಗುತ್ತಿದ್ದವು. ಹೊತ್ತಿಂದು ಸಿಡಿದು ಹೊಯ್ಯಲು ರಕ್ಷಿಸಿರಿ ಗೂಂಡೆ ಕಡಬಿರಿ ಎಂದು ಕೂಗಿದರು. ಅಗ್ನಿನಾರಾಯಣನು, ತನ್ನ ಭಾಗ ಕಸಿಯುಕೊಳ್ಳುವ ರಾಕ್ಷಸರನ್ನು ನಸಿಹಕ್ಕೊಬಾರದಂತ ಜ್ವಾಲೆಯ ನಾಲಿಗೆ ಮುಂದೊಡುತ್ತಿದ್ದ. ಬೆಂಕಿಯನ್ನು ನೊಂದಿಸುವುದು ಸಾಧ್ಯವಿಲ್ಲವೆಂದು, ಕಲಿತವರೆಲ್ಲ ಪ್ರೇಕ್ಷಕರಾದರು. ಕೈದಿಗಳು ಕೂಗಿ-ಕೇಚಿ ಶಾಂತರಾದರು. ವಿಕ್ರಮನು

‘ ಅಗ್ನಯೇ ಸ್ವಾಹಾ ಽ ಽ ಽ . . ” ಎಂದ
“ ಆಹ್ವಾನ ಮಾಡಿ ಆಹುತಿ ಕೊಡಿ ”

“ ತಾನೇ ಪ್ರತ್ಯಕ್ಷನಾಗಿರುವಾಗ ಕರೆಯುವುದೇಕೆ? ಕೆರೆಯ ನೀರು ಕೆರೆಗೆ. ಸಂಕಾರದ ವಸ್ತ್ರ ! ಪ್ರಜರು ಅಗ್ನಿಗೆ ಆಹುತಿ ಕೊಡುವರು. ಹೂಂ ಎಲ್ಲರೂ ನುಡಿಯಿರಿ **ಅಗ್ನಯೇಸ್ವಾಹಾ ಽ ಽ** ಅಗ್ನಯ ಇದಂನಮಮ ಽ

# ಪ್ರಾರ್ಥನೆ.

ಬೆಳಗಿನ ಗಂಜಿ ಒಡಲಲ್ಲಿ ಇಳಿದಿತ್ತು. ಬೆಂಕಿ ಹೇಗೆ ಹತ್ತಿತು? ಯಾರು ಹಚ್ಚಿದರು.? ಒಳ್ಳೆಯದೇ ಆಯಿತು! ಸರಕಾರಕ್ಕೆ ಹಾನಿ ಆದಷ್ಟು ಆನಂದ! ದೇಶದಲ್ಲಿ ಅರಿವೆಗಳ ಕೊರತೆ ಇರುವಾಗ ಸುಟ್ಟದುದು ತಪ್ಪು. ನಮ್ಮ ಉಪಯೋಗದ ವಸ್ತುಗಳನ್ನೇ ಹಾಳು ಮಾಡಿಕೊಳ್ಳು ವುದು ಒಳ್ಳೆಯದಲ್ಲ. ಸರಕಾರಕ್ಕೇನು? ಮತ್ತೆ ಬಟ್ಟೆ ತರುತ್ತಾರೆ! ಆಡಳಿ ತಕ್ಕೆ ವಿಘ್ನಗಳು ಉಪಸ್ಥಿತವಾಗಿರಬೇಕು. ಅಂತಹ ಹಾನಿಗಳಾದರೆ.... ಬ್ರಿಜ್ಜು ಉರುಳಿಸಲಿ. ರೇಲ್ವೆ ಹಳಿ ಕಿತ್ತಲಿ. ತಾರಿನ ಖಂಬ ಕೀಳಲಿ. ಸರಕಾರಕ್ಕೆ ಬಿಸಿ ಹತ್ತೀತು? ಬೇರೆ ಬೇರೆ ವಿಧವಾಗಿ ವಾತನಾಡಿ ಕೊಳ್ಳುತ್ತಲಿದ್ದರು. ಜೇಲಿನ ವಸ್ತ್ರಸಂಗ್ರಹಾಲಯದ ಉರಿ ಣ್ಣಾಗಾಗಿ ಬೆಂಕಿ ಬೂದಿಯ ರೂಪ ಧಾರಣ ಮಾಡಿತ್ತು. ವಿಕ್ರಮನು ಚಾಪಿಯ ಚೇರ್ಮನ್ನನೇ ಆಗಿದ್ದ. ಸಾವಜೀ ಬಂದವನೇ

"ನಮಸ್ತೇ ಅಕ್ರಾನೆ ಬೇಚಾ ೀಸಜೀ"

"ಸಾ - ವ - ಜೀ !!"

"ಅಹುದು ಗುರೂಜೀ"

"ಹೇಗೆ ಬಂದೆ!"

"ಹೇಗೆ ಹೋಗಿದ್ದೆನೋ ಹಾಗೆ?"

"ತಂತಿಯೊಳಗಿಂದ?"

"ಹೂಂ"

"ಅನಂತ ಧನ್ಯವಾದಗಳು"

"ತಮಗೆ ಸಲ್ಲತಕ್ಕದ್ದು"

"ನಿನ್ನ ಧೈರ್ಯಕ್ಕೆ ಸಾವಜೀ"

"ಅನುಕೂಲವಾದಿರಿ. ಕಲಿಸಿದಿರಿ. ಎಣ್ಣೆ ಅರಿವೆ ಸಿದ್ಧವಾದ ಮೇಲೆ ನನ್ನದೇನು!"

" ಯಾರೂ ನೋಡಲಿಲ್ಲವೇ ? "

" ಭಾರತ ಮಾತೆ, ಎಲ್ಲರಿಗೂ ಮಂತ್ರ ಹಾಕಿದ್ದಾಳೆ. ಮಂಕು ಬೂದಿ ಎರಚಿದ್ದಾಳೆ, ಎಂದು ನೀವು ಹೇಳಿದಂತೆಯೇ ಆಯಿತು. "

" ಏನು ಮಾಡಿದೆ ? "

"ಎಣ್ಣೆ ಬಟ್ಟೆ ಕೊಂಡವನು ಸರಿಯುತ್ತ-ಸರಿಯುತ್ತ ಸಾಗಿದೆ. ಮುಳ್ಳು ತಂತಿಗಳ ದಾರಿಗಳನ್ನು ನೀವು ಮೊದಲೇ ಎಚ್ಚರಕೊಟ್ಟಂತೆ ಸಿದ್ಧಗೊಳಿಸಿದ್ದೆ. ಮೆಲ್ಲನೇ ಜಾರುತ್ತಿದ್ದೆ. ಕಾವಲನು ತೂಕಡಿಸುತ್ತಿದ್ದ. ಎದೆಬಡಿದುಕೊಂಡಿತು. ಬೇಡಾ ತಿರುಗಿ ಹೋಗೋ ಎಂದು ಮನಸ್ಸು ಹೇಳಿತು. ನಿಮ್ಮಿಂದ ಆಜ್ಞೆ ಪಡೆದು ಬಂದಿದ್ದೆ. ಕೆಲಸ ಮಾಡಿದಾಗ ಸಿಕ್ಕರೆ, ಮತ್ತೆ ಮೂರು ವರ್ಷಗಳಾದಾವು. ಹೆಜ್ಜೆ ಹಿಂದಕ್ಕಿರಿಸಬೇಡವೆಂದು ಕಿವಿಹಿಂಡಿದೆ. ಕಾವಲನು ಕುಳಿತ ದಾರಿಯನ್ನೇ ಬಿಟ್ಟೆ. ಕೆರೆಯ ದಾರಿಗೆ ಸಾಗಿದೆ. ಅಲ್ಲಿಂದ, ವಸ್ತ್ರದ ಬರಾಕಿನ ಹಿಂದೆಯೇ ಬಂದೆ. ಚಕಮುಕಿ ಕಟೆದರೆ ಸಪ್ಪಳು ಆಗುವುದೆಂದು ಭೀತಿ ! ತೂಕಡಿಸುವ ಸೀಪಾಯಿಯು ಕಟ್ಟೆಯ ಕೆಳಗಿರಿಸಿದ, ಕಂದೀಲನ್ನು ಮೆಲ್ಲನೇ ಎತ್ತಿದೆ. ತುಣುಕಿಗೆ ಹಚ್ಚಿ-ಒಳಕ್ಕೆ ತೂರಿದೆ. ಮೆಲ್ಲನೇ ಬರಾಕಿಗೇ ಬಂದೆ "

" ಕೆರೆ ಈಜಿಹೋಗುವೆನೆಂದಿದ್ದಿ ? "

" ಬರಾಕಿನಲ್ಲಿಗೆ ತಿರುಗಿ ಬರುವುದೇ ಯೋಗ್ಯವೆನ್ನಿಸಿತು. ಎಲ್ಲ-ರಂತೆ ಮಲಗಿಕೊಂಡೆ "

" ಧೈರ್ಯಶಾಲಿ ಸಾವಜಿ. ಕರ್ನಾಟಕದ ಕೀರ್ತಿ ತರುವಿ ನೀನು"

ಕೈದಿಗಳು, ಕೈದಿಗಳ ಸ್ವಾಗತಾರ್ಥವಾಗಿ ಜಯಕಾರ ಗೈದರು. ನೂರು ಕೈದಿಗಳು ಬರುತ್ತಲಿರುವುದನ್ನು ಕಂಡು, ವಿಕ್ರಮ ಸಾವಜೀಯರ ಸಂವಾದವು ತಟಸ್ಥವಾಯಿತು. ವಿಕ್ರಮನಂತೆ ಸಾವಜೀ ಹೊರ ಬಂದು ಹೊಸ ಕೈದಿಗಳ ಬರುವಿಕೆ ನಿರೀಕ್ಷಿಸುತ್ತ ನಿಂತ. ಪರಿಚಿತರನ್ನು ಕಂಡು ಕೂಗಿ ಸಂತಸವ್ಯಕ್ತಪಡಿಸುತ್ತಲಿದ್ದರು. ಕೈದಿಗಳು ಬರಾಕಿನಲ್ಲಿ ಹೊಕ್ಕರು. ವಿಕ್ರಮನ ಬರಾಕಿನಲ್ಲಿಯೂ ಇಪ್ಪತ್ತು ಕೈದಿಗಳಿಗೆ ಪ್ರವೇಶದೊರೆಯಿತು.

ತನ್ನ ಪರಿಚಿತರಿರುವರೇನೋ ಎಂದು ನೋಡುತ್ತಲಿದ್ದ. ಅಪರಿಚಿತ ಮುಖಗಳಾದರೂ ಕನ್ನಡಿಗರೆಂದು ತಿಳಿದ. ಸ್ವಾಗತಿಸುವ ನಿಯಮಕ್ಕೆ ತಲೆಬಾಗಿ, ಸ್ವಾಗತ ಕೋರಿದ. ಕೆಲವರು ಕುಲಗೊತ್ರವಿಚಾರಣೆ ಪ್ರಾರಂಭಿಸಿದರು. ಎಲ್ಲಿಂದ ? ಏತಕ್ಕೆ? ಯಾವ ಊರು ? ಹೆಂಡರು ಮಕ್ಕಳು ? ದಣಿದು ಬಂದಿರುವರ ಬದ ಕಡೆಗೆ ಗಮನ ಕೊಡದೇ ಕೇಳಿದರು. ವಿಕ್ರಮನು ಚಾಪ್ಯಾಸನಾರೋಹಣ ಮಾಡಿದ.

ಅಕ್ರಾಸೇ ಬೇಚಾಳಿಸನನ್ನು, ಎವೆ ಇಕ್ಕದೇ ಬಡಕ ವ್ಯಕ್ತಿ ಒಂದು ನೋಡತೊಡಗಿತು. ನೋಡಿದವನು ಹೊಸಬನೇ! ವಿಕ್ರಮನನ್ನು ಅದೇಕೆ ಈ ರೀತಿ ನೋಡುವನು? ಪರಿಚಿತನಿರಬಹುದೆಂದು ಕೂಂಡರು ಇಕ್ಕೆಲ-ದವರು. ವಿಕ್ರಮನು ಅಂಗಾತ ಮಲಗಿ, ತಗಡಿನ ತೂತಿನೊಳಗಿಂದ ತೂರಿಬರುವ ಸೂರ್ಯ ಬಿಂಬ ನೋಡುತ್ತಲಿದ್ದ. ಹೊಸಕೈದಿ ಮೆಲ್ಲನೇ ಎದ್ದು ಬಂದು ನೋಡಿದ. ‘ ಇರಬಹುದೇ? ’ ಎಂದು ಕೊಂಡ. ತಾನೇ ನೋಡಿದ, ಉಣಿಸಿದ, ತಿನಿಸಿದ, ಗೆಳೆಯನಲ್ಲ’ ಎನ್ನಿಸಿರಬಹುದು. ತನ್ನ ಸ್ಥಳದಲ್ಲಿ ಕುಳಿತ. ಸಂಶಯ ನಿವಾರಣೆ ಆಗಲಿಲ್ಲ. ಅನುಮಾನವು ಮತ್ತೆ ಇಣಿಕಿನೋಡಿಸುತ್ತಲಿದ್ದಿತು. ಕೈದಿಗಳ ಊಟ ಬಂದಿತು. ಒಡಲಲ್ಲಿ ಇಳಿದಿತು. ಅಕ್ರಾಸೇ ಬೇಚಾಳೀಸ ರೊಟ್ಟಿಯನ್ನು ಕೂಂಡು, ತಂತಿಗೆ ಅಂಟಿಸಿ, ರಸಾಯನವನ್ನು ಬೇಡಿದವನಿಗೆ ನೀಡಿ, ಬಿಂಬೋಪಾಸನೆಯಲ್ಲಿ ಮಗ್ನನಾದ. ಹೊಸಬನ ಪರಿಚಯ ಮಾಡಿಕೊಳ್ಳುವುದರಲ್ಲಿ, ಜೋಗನು ತತ್ಪರನಾಗಿದ್ದ. ಹೊಸಬನು ತನ್ನ ಹಟ ಬಿಡದಲೇ ನೋಡುತ್ತಿದ್ದ. ಅಕ್ರಾಸೆ ಬೇಚಾಳೀಸ ಎದ್ದು, ತನ್ನೆಡೆಗೇ ಬರುತ್ತಿರುವಂತೆ ಕಂಡಿತು ಅವನಿಗೆ. ವಿಕ್ರಮನು ನೂರಪ ತಿರುಗುವ ವಿಚಾರದಿಂದ, ನಡೆದಿದ್ದ. ಆಡುವ ಮಾತು ಕೇಳದ ಕಿವುಡನಂತ, ಗದ್ದಲ ನೋಡದ ಕುರುಡನಂತೆ ಸಾಗಿದ. ಹೊಸಬನು ಕುಳಿತ ಕ್ಷಣದವರೆಗೂ ನಡೆದ. ಎತ್ತೋ ನೋಡಿದವನು ಹೊಸಬನನ್ನು ನೋಡಿ—

“ ಅಕ್ಬರ ಸಾಹೇಬ ! ಅಕ್ಬರಸಾಹೇಬ ! !

“ ವಿಕ್ರಮ ! ವಿಕ್ರಮ !! ” ವಿಕ್ರಮನು ಅಕ್ಬರ ಸಾಹೇಬನನ್ನು ಸಾವರಿಡು ಆಲಂಗಿಸಿದ. ಒಬ್ಬರನ್ನೊಬ್ಬರು ನೋಡಿ ಮತ್ತೆ ಆಲಂಗಿಸಿದರು. ‘ಸಾಹೇಬ-ಸಾಹೇಬ ’ ಎನ್ನುತ್ತ ಸಗದ್ಗತಿತಕಂಠನಾದನು. ಸಾಹೇಬರ ನುಡಿಯೇ ನಿಂತಿತು ಆನಂದದ ಉದ್ರೇಕವಾದುದರದ್ಯೋತಕವಾಗಿ ನಾಲ್ಕು ಕಣ್ಣುಗಳು ನೀರನ್ನು ಇಳಿಸಿದವು. ಕೈದಿಗಳೆಲ್ಲ ಗೆಳೆಯರ ಮಿಲನ ಕಂಡು ಹರ್ಷಿತರಾದರು ವಿಕ್ರಮನೇ ಕೈಕುಲುಕಿ—

“ ಸಾಹೇಬ ಚಮತ್ಕಾರಿಕ ಮಿಲನ !! ”
“ ಅಲ್ಲಾನ ಸಂಕಲ್ಪ ! ಸಂಕಲ್ಪ !! ”
“ ಅಲ್ಲಾನಿಗೆ ಋಣಿಯಾಗಿರುವೆ ”
“ ನೀನಿಲ್ಲಿಗೇ ಬಂದೆ ! ಆನಂದ ನನಗೆ !! ”
“ ಬನ್ನಿ ಕೂಡ್ರುವಾ ಬನ್ನಿ ”

ವಿಕ್ರಮ ಅಕ್ಬರಸಾಹೇಬರನ್ನು ಎಳೆದ. ಸಾಬರು ಎಳೆದಂತೆ, ನಡೆದರು. ಗೆಳೆಯರಿರ್ವರೂ ಚಾಪೆಯ ಮೇಲೆ ಕುಳಿತರು. ಇಬ್ಬರೂ ಗಡ್ಡ ತೀಡಿದರು. ಮೊದಲಿದ್ದ ಕೈದಿಗಳಿಗೆಲ್ಲ ಅಚ್ಚರಿಯ ಪರಮಾವಧಿ ! ವಿಕ್ರಮನ ಮೌನವ್ರತ ಮುರಿಸಿದ ಇವನಾರು ? ? ಹುಚ್ಚನಂತೆ ಬಿದ್ದು, ಯಾರೊಡನೆಯೂ ಮಾತನಾಡದ ವಿಕ್ರಮನನ್ನು ಕಂಡಿದ್ದರೂ, ಈಗ ಕುಣಿಯೋಣವೇ ಎನ್ನಿಸಿತು. ಕೈದಿಗಳೆಲ್ಲ ಗೆಳೆಯರು ಮಾತನಾಡಿಕೊಳ್ಳಲಿ ಎಂದು ದೂರ ಸರಿದರು. ವಿಕ್ರಮನು ಗದ್ದಲವೇ ಬೇಡವೆಂದು ಸಂಕೇಶ್ವರ ಗಿಡದಡಿಯಲ್ಲಿ ಕರದೊಯ್ದು ಕುಳಿತ.

“ ಸಾಹೇಬ, ಪೈಶಾಲಿ ನಾನು ”
“ ನಿಜವ ”
“ ತಂದೆಯೇ ಮಗನಿರುವಲ್ಲಿ ಬಂದ ! ”
“ ನಿಮ್ಮ ಅಂತಃಕರುಣ ಎಳೆತಂದಿತು ”
“ ಕೇಳಿದರೆ ಕೋಪವಿಲ್ಲವಷ್ಟೇ ? ”
“ ಏನು ಮಾತು ನಿಮ್ಮದು ”

" ಕೇಳುವ ಕುತೂಹಲ ನನಗೆ "

" ಕೇಳಿ. ನೀವು ಕೇಳಿದಷ್ಟು ಆನಂದ. ಏನು ? "

" ನಿಮ್ಮನ್ನು ಬಂಧಿಸಿದುದು ಏಕೆ ? "

" ವಿಕ್ರಮರಾವ. ಅಪ್ಜಲನ ಪ್ರೇರಣೆಯೇ ಕಾರಣವೆಂದು ನಾನು ತಿಳಿದಿದ್ದೇನೆ ಬಂಧಿಸಿ, ನಿರ್ಬಂಧಿಸಿ, ಸೆರೆಮನೆಗೆ ಅಟ್ಟಿದರೆಂದು ಕ್ರೋಧವಿಲ್ಲ. ಸಂತೋಷವಿದೆ. " ಗೆಳೆಯರು ಸಂತೋಷಿತರಾಗಿ ಒಬ್ಬರನ್ನೊಬ್ಬರು ಅಪ್ಪಿದರು. ಗಡ್ಡಗಳು ತಿಕ್ಕಾಡಿದವು. ಪ್ರಕೃತಿ ದೇವಿಯೂ ಲಾಸ್ಯ ವಾಡಿದಳು. ಪ್ರಫುಲ್ಲ ನಯನೆಯಾಗಿ, ಸಂಕೇಶ್ವರ ಪುಷ್ಪಗಳನ್ನು ಕಂದರ ಮೇಲೆ ಸುರಿದಳು. ಗಾಳಿಗೆ ತೂರಿ ಸಂಕೇಶ್ವರ ಹೂವುಗಳು ಪಟಪಟ ಉದುರಿದವು.

" ಅಕ್ಬರಸಾಹೇಬ ನಡೆದುದನ್ನೆಲ್ಲ ಹೇಳಲೇಬೇಕು. "

" ನೀವು ಶೀಕ್ಷೆ ಹೊತ್ತು ಬಂದಿರಿ. ಮರುದಿನವೇ ಅರಣ್ಯಸಂಚಾರಕ್ಕೆ ಅಪ್ಪಣೆ ಆಯಿತು ಹತ್ತಿಂಟು ತಾಲೂಕಿನ ಹಪ್ತೆ ಲೂಟಿ ಮಾಡಿದವರು ಅರಣ್ಯದಲ್ಲಿ ವಾಸಿಸಿದ್ದಾರೆಂದು ಸಂಶಯ ಸರಕಾರಕ್ಕೆ. ಅಡವಿಯನ್ನು ದಿನಾಲೂ ಸುತ್ತುವುದೇ ಕೆಲಸ. ಒಬ್ಬರೂ ಸೆರೆ ಸಿಕ್ಕಲಿಲ್ಲ. ನಮ್ಮ ಐವತ್ತೂ ಜನ ಜೀಸತ್ತರು ಸಮಯಕ್ಕೆ ಊಟವಿಲ್ಲ. ಉರಿಬಿಸಿಲಲ್ಲಿ ತಿರುಗುವುದು. ನೀರು ಕೂಡಾ ದೊರೆಯದ ಕಾಡು. ಕಾರಣವಿಲ್ಲದೇ ಗುಂಡು ಹಾರಿಸಲು ಡಿ. ಎಸ್. ಪಿ. ಯ, ಹುಕುಮು ಕಾಲಕಾಲಕ್ಕೆ! "

" ಎಷ್ಟು ದಿನ? "

"ತಿಂಗಳು ಕಳೆದಿತು. ಒಬ್ಬನೂ ಕೈಗೆ ಸಿಕ್ಕಲಿಲ್ಲ. ಬೆಳಗಾಗುತ್ತಲೇ ' ಹಪ್ತೆ ಲೂಟಾಯಿತು. ಟಪಾಲ ಕಸಿದರು. ಸ್ಟೇಶನ್ನ ಸುಟ್ಟರು. ದಪ್ತರ ಭಸ್ಮವಾದವು. ಗೌಡನ ಬಂದೂಕನ್ನೇ ಒಯ್ದರು ' ಸುದ್ದಿಗಳು ಬರುತ್ತಿದ್ದವು. "

" ನೀವೇಕೆ ಸೆರೆಮನೆಗೆ ಬಂದಿರೀ ? ಅದನ್ನು ಹೇಳಿರಿ. "

" ಒಂದು ದಿನ ರಾತ್ರಿ ಗಿಡಪಡಿಯಲ್ಲಿ ಮಲಗಿದ್ದೆವು. ಒಬ್ಬಿಬ್ಬರು ಎಚ್ಚರವಾಗಿದ್ದರು. ನಾನೂ ಎಚ್ಚರಿದ್ದೆ. ಗುಂಡಿನ ಸಪ್ಪಳು ಕೇಳಿತು. ಎಲ್ಲರೂ ಹುಡುಕಲು ಕತ್ತಲಲ್ಲಿ ನಾಗಿದೆವು. ಒಬ್ಬನೇ ಕೈಸೆರೆಯಾದ. ಡಿ. ಎಸ್. ಪಿ. ಯವರು ಗಿಡಕ್ಕೆ ಬಿಗಿಸಿದರು ಅವನನ್ನು. ಗುಂಪಿನ ವಿಷಯ ತಿಳಿಯಲು ಪರಿ-ಪರಿಯಾಗಿ ಒಂಸಿಳಿದರು. ಅವನು ಬಾಯಿ ಬಿಡಲಿಲ್ಲ. ರಾಷ್ಟ್ರೀಯ ಪಥಕದವನೆಂದೇ ಹೇಳಿದ. ನಾಯಕನ, ಸದಸ್ಯರ ಹೆಸರು ಕೇಳಿದರು. ಎಲ್ಲವೂ ತಾನೇ ಎಂದ. ಡಿ. ಎಸ್. ಪಿ. ಯವರು ಕೋಪಗೊಂಡರು. ಕಣ್ಣು ಕೀಳಿಸುವೆ ಎಂದರು. ಚರ್ಮ ಸುಲಿಸುವೆ ಎಂದರು, ಕೊನೆಗೆ ಗುಂಡಿಕ್ಕಿ ಕೊಲ್ಲಿಸುವೆ ಎಂದರು. ಕೊಲ್ಲು ಎಂದು ಎದೆ ಉಬ್ಬಿಸಿದ. ಗುಂಡಿಕ್ಕಲು ಆಜ್ಞೆ ಮಾಡಿದರು. "

" ಯಾರಿಗೆ ! "

" ನನಗೇ ! ಬಂದೂಕನ್ನು ಎತ್ತಿ ಗುರಿ ಇರಿಸಿ ನಿಂತೆ. ಡಿ. ಎಸ್. ಪಿ. ಯವರು, ಈಗಲಾದರೂ ಹೇಳೆಂದರು. ' ಎದೆ ಉಬ್ಬಿಸಿ ನಿಂತಿರುವೆ. ಹೊಡಿ, ಎಂದು ಹುಮ್ಮಸಗೊಂಡು ನುಡಿದ. ಗುಂಡಿಕ್ಕಲು ಕಠೋರರಾಗಿ ನನಗೆ ತಿಳಿಸಿದರು. ನನ್ನ ಮೈ ನಡುಗಿತು. ದೇಶ ಪ್ರೇಮಿಯನ್ನು ಹೊಟ್ಟೆಗಾಗಿ ಕೊಲ್ಲಲಿಯೋ ? ಎನ್ನಿಸಿತು ಕೈ ಕಂಪಿಸಿತು. ಬಂದೂಕನ್ನು ಬೀಸಿ ಒಗೆದು ನಾನು ಹೊಡೆಯುವದಿಲ್ಲವೆಂದೆ. ಅವಿಧೇಯನೆಂದು ನನ್ನ ಕೈಗಳಿಗೆ ಬೇಡಿಗಳು ಬಂದವು.

" ಅವನದೇನಾಯಿತು ? "

" ನನ್ನಂತೆ ಅವನನ್ನೂ ಲಾಕಪ್ಪಿನಲ್ಲಿರಿಸಿದರು. ಮೂರು ವರ್ಷ ಕಠಿಣ ಶಿಕ್ಷೆ ಹೊರಿಸಿದರು. "

ಕೈಯಲ್ಲಿ ' ಸಂಯುಕ್ತ ಕರ್ನಾಟಕ ' ವೃತ್ತಪತ್ರ ಹಿಡಿದು ಕೂಗುತ್ತ, ಒಂದು ಗುಂಪು, ಮಹಾರಾಷ್ಟ್ರೀಯರು ಮರಾಠಿ ಪತ್ರ ಹಿಡಿದು ಕೂಗುತ್ತ ಹಿಂದಿ, ಇಂಗ್ಲೀಷ ಪತ್ರಿಕೆ ಎತ್ತಿ ತೋರುತ್ತ ಬಂದರು. ವಿಕ್ರಮನು ಎದ್ದು ಬರಮಾಡಿಕೊಂಡ ಎಲ್ಲರನ್ನು. ಗಿಡದಡಿಯಲ್ಲಿ ಪ್ರಮುಖರು

ಕುಳಿತರು. ಜೋಗನೇ ವೃತ್ತಪತ್ರಗಳನ್ನೆಲ್ಲ ತೋರುತ್ತಿದ್ದ. ಹುಂಬಣ್ಣನು 'ಏನಾಗುವದೋ ಆಗಲಿ. ಯಾರ ಮಾತು ಕೇಳುವುದೂ ಬೇಡ. ಒಂದು ಕೈ ತೋರಿಸಿ ಬಿಡೋಣ' ಎಂದು ಅಬ್ಬರಿಸಿದ. ಸಾವಜ-ಶಾಮುರ ಬೆಂಬಲವಂತೂ ಬೆಂಬತ್ತಿತ್ತು.

"ಏನು ? ವಿಷಯ ತಿಳಿಸಿರಿ"

"ಎಲ್ಲ ವೃತ್ತಪತ್ರಗಳ ಕುತ್ತಿಗೆ ಕೊಯ್ದಿದ್ದಾರೆ. ಕೊಯ್ಯಕೂಡದೆಂದು ಕರಾರಿತ್ತು"

"ಏನು ಮಾಡಬೇಕೆನ್ನುವಿರಿ ?"

"ಸುಪ್ರಿಂಟೆಂಡೆಂಟನ ಮುಖದ ಮೇಲೆ ಒಗೆಯೋಣ. ಮೆತ್ತಗೆ ಕಂಡರೆ ಮೊಳಕ್ಕೈ ತಿವಿತ !"

"ಸುಮ್ಮನೇ ಗದ್ದಲ ಮಾಡದಿರಿ. ಕೇಳಲು ಹೋಗುವುದು ಸರಿ. ನಾಲ್ಕು ಜನ ಸಾಕು. ಹೋಗಿ ಕೇಳೋಣ."

"ಅವರ ಅಪ್ಪನ ಮನೆ ಆಳಲ್ಲ, ಹೋಗಿ ಕೇಳುವುದಕ್ಕೆ. ಮಹತ್ವದ ಸುದ್ದಿ ಇರಲೇಬೇಕು. ಬೇಕೆಂದೇ ಬ್ಲೇಡಿನಿಂದ ಕತ್ತರಿಸಿ ಕೊಟ್ಟಿದ್ದಾರೆ." ಗದ್ದಲದಲ್ಲಿ ಒಬ್ಬನು ಅಪ್ಪಳಿಸಿದ.

"ಕತ್ತರಿಸಿದ ಸುದ್ದಿಯನ್ನು ಹೇಳದೇ ಇದ್ದರೆ ಮೊದಲಿನಂತೆ ಮಾಡಲೇಬೇಕು. ಕುರಿಗಳೆಂದು ತಿಳಿದಿದ್ದಾರೆ."

"ಮಾತನಾಡುತ್ತ ವೇಳೆ ಕಳೆಯಬೇಡಿ. ಬೇಗನೇ ನಿರ್ಧಾರ ಮಾಡಿರಿ" ಬೇರೊಬ್ಬ ನುಡಿದ.

"ಎಲ್ಲರಿಗೂ ಸಂಬಂಧಿಸಿದ ವಿಷಯು ಇದು. ಬರಾಕಿನ ಎಲ್ಲರನ್ನೂ ವಿಚಾರಿಸೋಣ" ವಿಕ್ರಮನೆಂದ.

"ಕೇಳುವುದು ಬೇಡ. ಗದ್ದಲು ಮಾಡಿದರೆ ತಾನೇ ತಿಳಿಯುತ್ತದೆ, ಕೂಡಿದ ಜನ. ತಲೆಗೊಂದು ಮಾತಾಡುವರು."

"ಪ್ರಸಂಗವೇ ಪ್ರಕ್ಷುಬ್ಧವಾದರೆ ಕಟುಫಲವನ್ನು ಎಲ್ಲರೂ ತಿನ್ನಬೇಕಾಗುವದು."

"ಕೇಳಲೇಬೇಕು ಎಲ್ಲರನ್ನು ಕೇಳಬೇಕು"

ಎಲ್ಲರೂ ಏಕಕಂಠದಿಂದ ಕೂಗಿದರು. ವಿಕ್ರಮನೇ ಧುರೀಣನೆಂದು ಒಪ್ಪಿದರು. ಜೇಲರನ ಸಂಮತಿ ಪಡೆದೇ ಗೆಳೆಯರನ್ನು ಕಂಡ. ಮುಖಂಡರ ಮರಣವಾರ್ತೆ ಇರಬಹುದೆಂದರು. ಕೈದಿಗಳು ಯರವಡಾ ಜೇಲಿನಿಂದ ಪಾರಾದ ಸಂಗತಿ ಮುದ್ರಿತವಾಗಿರಬಹುದು. ಹೋರಾಟವು ಹೆಚ್ಚಿರಬಹುದು. ಅನೇಕ ರೀತಿಯಾಗಿ ತರ್ಕವಿತರ್ಕಗಳು ನಡೆದವು. ಜೇಲರನನ್ನೇ ಕಾಣಲು ವಿಕ್ರಮನ ನೇತೃತ್ವದಲ್ಲಿ, ಹತ್ತು ಜನ ಹೊರಟರು. ಜೇಲರನು ಎದುರಾಗಿ ಬಂದು ಕೇಳಿದ

"ಏನು ಬೇಕು ?"

"ವೃತ್ತಪತ್ರದ ಮಹತ್ವದ ಸುದ್ದಿ"

"ಗೆಳೆಯರೇ, ಸುಮ್ಮನೇ ಪ್ರಯತ್ನಿಸಬೇಡಿ"

"ಹೇಳುವುದಿಲ್ಲವೇ ?"

"ತಿಳಿಸಕೂಡದಾಗಿ ಆಜ್ಞೆ ಆಗಿದೆ"

"ನೀವು ನಿಮ್ಮ ಆಜ್ಞೆ ಪಾಲಿಸಿರಿ ನಮ್ಮ ಧುರೀಣರ ಆಜ್ಞೆ ನಾವು ಪಾಲಿಸುತ್ತೇವೆ."

"ಏನು ಮಾಡುವಿರಿ ?"

"ನೀವು ತಿಳಿಸುವುದಿಲ್ಲವಷ್ಟೆ ?"

"ಇಲ್ಲ, ಶಕ್ಯವಿಲ್ಲ"

ಹತ್ತು ಜನರೂ ಬರಾಕಿನ ಕಡಗೆ ನಡೆದರು ಎಲ್ಲರೂ ಮೌನವ್ರತ ಬದ್ಧರು. ಮುಖ ನೆಲಕ್ಕಿರಿಸಿ 'ಮುಂದೇನು ಮಾಡುವುದೂ....' ಎಂದು ವಿಚಾರ ಮಗ್ನರಾಗಿದ್ದರು.

“ ಗೆಳೆಯರೆ, **ಮಹಾತ್ಮರು ಮರಣಾಂತಿಕ ಉಪವಾಸ ಪ್ರಾರಂಭಿಸಿದ್ದಾರೆ ಆಗಾಖಾನರ ಅರಮನೆಯಲ್ಲಿ. ಬ್ರಿಟಿಷರ ದಬ್ಬಾಳಿಕೆಯ ನಿಷೇಧಾರ್ಥ ಮರಣಾಂತಿಕ ಉಪವಾಸ!** ”

ಉಚ್ಚ ಧ್ವನಿಯಿಂದ ಕೂಗಿದುದು ಕೇಳಿತು. ವಿಕ್ರಮನು ಜೊತೆಗಾರರೊಡನೆ ಹಿಂತಿರುಗಿ ನೋಡಿದ. ಆಕಾಶವಾಣಿ ಆಯಿತೆ ? ಕೂಗಿ ಸಂದೇಶ ಬೀರಿದವರು ಯಾರು ? ಜೇಲರನೂ ಕೂಗಿದವರನ್ನು ಶೋಧಿಸುತ್ತಿದ್ದ. ವಿಕ್ರಮನು ಕಣ್ಣು ಅರಳಿಸಿ ನೋಡಿದ. ಚಣ್ಣ ಲಂಡ ಅಂಗಿ, ಜೇಲ ನಂಬರಿನ ಮುದ್ರೆಯ ಕೈದಿಗಳೇ ಕಂಡರು. ಮಹಾತ್ಮರ ಉಪವಾಸದ ವಾರ್ತೆ ತಿಳುಹಿದವರು ದೇವತೆಗಳೇ ? ಮೊದಲು ಕೂಗಿದವರೆ ಸಂಶಯ ನಿವಾರಣೆಗಾಗಿ ಕೂಗುತ್ತಲೇ ಮುಂದೆ ಬಂದರು. ಗೆಳೆಯರೇ; **ಮಹಾತ್ಮರು ಉಪವಾಸ ಪ್ರಾರಂಭಿಸಿದ್ದಾರೆ. ಬ್ರಿಟಿಷರ ನಿಷೇಧಾರ್ಥವಾಗಿ.**

ಕೂಗಿದವರ ಪರಿಚಯ ವಿರಲೇ ಬೇಕು. ಸಂತಸದಿಂದ ಓಡಿದ. ಹತ್ತು ಜನರೂ ಓಡಿದರು. ಕೂಗಿದವರು ಅದೇ ಜೇಲಿನಲ್ಲಿ ಕಾಲಿರಿಸಿದವರಿರಬೇಕು. ನಂಬರು ಹೊಸ, ಬಟ್ಟೆ ಹೊಸ! ಚಾಪಿಯ ಸುರಳಿ ಕೈಯಲ್ಲಿದ್ದಿತು. ಸಾಗರಬಿದ್ದು ಹೊಸಬರ ಪಾದಕ್ಕೆ ವಿಕ್ರಮನಂತೆ ಕೈದಿಗಳೆಲ್ಲ ಹಣೆ ತಟ್ಟಿಸಿ ನಮಸ್ಕರಿಸಿದರು. ‘ಮಾಸ್ತರ! ಮಾಸ್ತರ!! ಎಂದು ಕುಣಿದಾಡಿದರು. ಮಾಸ್ತರರ ಸುರಳಿಯನ್ನು ಒಬ್ಬ, ಥಾಲಿಪಾಟುಗಳನ್ನು ಒಬ್ಬ, ತೆಗೆದುಕೊಂಡು ಸೇವಕರಂತೆ ನಡೆದರು. ಬರಾಕಿನವರಿಗೆಲ್ಲ ಮಾಸ್ತರರು ಬಂದರೆಂಬುದನ್ನು ತಿಳಿಸಿದರು. ಮಹಾತ್ಮರ ವಾರ್ತೆಯನ್ನು ಮುಟ್ಟಿಸಿದರು.

‘ಮಾಸ್ತರ’ ಎಂದರೆ ಕನ್ನಡ ನಾಡಿಗರೆದುರು, ಅವರ ಚಿತ್ರನಿಲ್ಲುತ್ತದೆ. ಪ್ರಶಾಂತ ಮುಖಮುದ್ರೆ. ತುಂಬಿದ ಕೆಂಪನೆಯಮೈ. ತೇಜತೆವೆತ್ತ ದೃಷ್ಟಿ ಸತತವೂ ಕಿರುನಗೆಯ ಮೊಗ. ಅವರು ಶರ್ಟು, ಚಣ್ಣ ಹಾಕಿದುದನ್ನು ಕಂಡುದು ಜೇಲಿನಲ್ಲಿಯೇ. ಒಂದು ಸಂಜೆ ಉಡುವುದು

ಕೈಯಲ್ಲಿ ಒಂದು ಚೀಲ ಅಗಲದೇ ಇರುವುದು. ಮಾಸ್ತರರೆಂದರೆ ತಂದೆ, ತಾಯಿ, ಬಂಧುಬಳಗ ಜನಕ್ಕೆ. ನಯ-ನುಡಿಯಿಂದ, ಸೇವೆಯಿಂದ, ನಾಡಿಗೇ ಪ್ರಿಯರಾದವರು. ಮೂರನೆಯ ವರ್ಷದ ಟ್ರೆ, ಕಾ. ಮಾಸ್ತರ ರಿದ್ದರಂತೆ. ಅಸಹಕಾರದ ಆಂದೋಲನೆಯಲ್ಲಿ ಶಿಕ್ಷಕ ವೃತ್ತಿಗೆ ಶರಣು ಹೊಡೆದು ರಾಷ್ಟ್ರದೇವಿಗೆ ತಮ್ಮ ಜೀವನವನ್ನೇ ಮುಡುಪಿಟ್ಟಿದ್ದಾರೆ. ಮಾಸ್ತರ ವೃತ್ತಿಯಿಂದ ದೂರವಾದರೂ 'ಮಾಸ್ತರ' ಎಂದು ಕರೆಯುವ-ದಕ್ಕೆ ಇನ್ನೂ ಒಂದು ಕಾರಣವಿದೆಯಂತೆ. ಧಾರವಾಡದಲ್ಲಿಯ ರಾಷ್ಟ್ರೀಯ ಶಾಲೆಗೆ ಅಧ್ಯಾಪಕರಾದುದು. ಮಾಸ್ತರರು, ಹುಡುಗರಿಗೆ ಹುಡುಗರು, ಹಿರಿಯರಿಗೆ ಹಿರಿಯರು, ಕಿರಿಯರಿಗೆ ಕಿರಿಯರಾಗಿ ನಡೆಯುವುದು ಅವರ ಜೀವನ ವೈಶಿಷ್ಟ್ಯ. ಕಾಂಗ್ರೆಸ್ಸಿನ ಪ್ರತಿಸಭೆಯಲ್ಲಿ ಚೀಲದೊಡನೆ ಮಾಸ್ತ ರರು ಇದ್ದೇ ಇರುವರು. ಕನ್ನಡ ನಾಡಿನ ಪಟ್ಟಣ-ಹಳ್ಳಿಪಳ್ಳಿಗಳಲ್ಲಿ, ಮಾಸ್ತರರ ಕಾಂಗ್ರೆಸ ಪ್ರಚಾರಕ ಭಾಷಣ ಕೇಳದವರೇ ಇಲ್ಲ. ಮಾಸ್ತ ರರು ನುಡಿದಂತೆ ನಡೆಯುವದಿಲ್ಲವೆಂಬ ಅಪಶ್ರುತಿಯೂ ಇದೆ ಕಾಂಗ್ರೆ ಸ್ಸಿನ ತತ್ವದ ವಿರುದ್ಧ ವರ್ತಿಸುವರೆಂಬ ಅಪವಾದದ ಪೆಂಡಿಯೂ ಅವರ ಹೊಳಪು ತಲೆಯಮೇಲಿದೆ. ಹರಿಜನ ಕೇರಿಗೆ ಬಂದು, ಕಸಗುಡಿಸುವರು. ಹರಿಜನೊದ್ಧಾರವಾಗಲೇಬೇಕೆಂದು ಆವೇಶ ಭಾಷಣಬೇರೆ, ಊಟಕ್ಕೆ ಕರೆದರೆ, ಕರಸನ್ನೆ ಬೇರೆ, ಪಲಾಯನ ಹೇಳುವರೆಂದು, ಹರಿಜನರೇ ಆಡಿ ಕೊಳ್ಳುವರು ಹರಿಜನಕೇರಿಯನ್ನು ನೋಡಿದ್ದಕ್ಕೆ ಒಮ್ಮೆ, ಕೇರಿ-ಯಲ್ಲಿ ಕಾಲಿರಿಸಿದುದಕ್ಕೆ ಒಮ್ಮೆ, ಕಸಗೂಡಿಸಿದುದಕ್ಕೂ ಒಮ್ಮೆ, ಮುಟ್ಟಿ ದುದಕ್ಕೂಒಮ್ಮೆ, ಇಪ್ಪತ್ತುಸಲ ಸ್ನಾನಮಾಡಿ, ಯಜ್ಞೋಪವೀತ ಬದಲಿಸಿ, ನಾಲ್ಕುನಾಲ್ಕುಸಲ ಪಂಚಗವ್ಯಕುಡಿದು, ಪ್ರಾಯಃಶ್ಚಿತ್ತವೆಂದು ಸಾವಿರ ಗಾಯತ್ರೀ ಜಪಮಾಡಿ, ತುತ್ತು ಬಾಯಿಗಿಡುವರೆಂದು ಅವರ ಸಹ ಕಾರ್ಯ ಕರ್ತರೇ ನುಡಿಯುವರು. ಸಟೆಯೋ ದಿಟವೋ ಜನನುಡಿಯುವುದು ಹೀಗೆ. ಮಾಸ್ತರರು ದೇಶಭಕ್ತರು ಕರ್ನಾಟಕ ಸೇವಾದಲ ಕಾರ್ಯಕರ್ತರು, ಧುರೀಣರು. ಹುಟ್ಟಾ ಸ್ವಯಂಸೇವಕರು. ಕರ್ನಾಟಕ ಏಕೀಕರಣ ಧುರೀಣರು, ಶಿಕ್ಷಣ ಪ್ರೇಮಿಗಳು ಪುರಸ್ಕರ್ತರು. ಸಾಹಿತಿಗಳು ಸಾಹಿ

ತ್ಯಾಭಿಮಾನಿಗಳು; ವೇದಾಂತಿಗಳು, ಅಸ್ಪೃಶ್ಯೋದ್ಧಾರಕರೂ ಅಹುದು, ಕರ್ಮಠರೂ ಅಹುದು. ಇಂಥ ಹೋರಾಟಗಲ್ಲಿ ಪ್ರಮುಖಪಾತ್ರವಹಿಸಿ ವಿಧ್ವಂಸಕರೆಂದು ಸರಕಾರದಿಂದ ಪ್ರಶಸ್ತಿಪಡೆದವರು ಐದು ಸಾವಿರ ರೂಪಾಯಿಗಳನ್ನು ಪಡೆದವರು. ಇವರನ್ನು ಕೊಲ್ಹಾಪುರದ ಸಂದಿಯ ಮನೆಯಲ್ಲಿ ಬಂಧಿಸಿದ ಸೀಮೆಯಿ !

ಮಾಸ್ತರರು ತಮ್ಮ ಬರಾಕಿಗೇ ಬರಬೇಕೆಂದು ಎಲ್ಲರ ಆಗ್ರಹವಾಯಿತು ಕೇಳಿದರು, ಬೇಡಿದರು, ಕೊನೆಗೆ ಕಣ್ಣೀರಿನಿಂದ ವಿನಂತಿಯನ್ನು ಮಂಡಿಸಿದರು. ನೂರು ಜನಕ್ಕೆ ಒಂದು ಬರಾಕಿನಲ್ಲಿರುವುದು. ಮತ್ತೆ ಬೇರೆ ಬರಾಕಿವಲ್ಲಿ ಎಂದು ಹೇಳಿ ಸಮಾಧಾನಗೊಳಿಸಿದರು. ಮಾಸ್ತರರಿಗೆ ಬಿಡುವಿಲ್ಲ. ಕೈದಿಗಳೆಲ್ಲರ ಪರಿಯಿಂದ ಜೇಲರನನ್ನು ಕಂಡು ಬಂದರು. ಕೆರೆಯ ದಂಡೆಯ ವಿಶಾಲ ಜೈಲಿನಲ್ಲಿ, ಮಹಾತ್ಮರ ಉಪವಾಸದ ನಿಮಿತ್ತ ಸಭೆ ಕೂಡ್ರಿಸುವುದಕ್ಕೆ ಸಮ್ಮತಿಪತ್ರ ಪಡೆದು ಬಂದರು. ಮಾಸ್ತರರ ಹೇಳಿಕೆಯೇ ತಡ, ಸಂಭ್ರಮದಿಂದ ಗಲಭೆ, ಶಿಸ್ತು ಭಂಗ ಶಕ್ಯವೇ ಇಲ್ಲ. ಬರಾಕಿನಲ್ಲಿಯೇ ಸಾಲಾಗಿ, ಶಾಲಾ ಬಾಲಕರಂತೆ ಕೆರೆಯ ಜೈಲಿಗೆ ಕೈದಿಗಳು ಬಂದರು. ಸಹಸ್ರಾರು ಕೈದಿಗಳು ಮಹಾತ್ಮರ ಶ್ರೇಯಃ ಪ್ರಾರ್ಥನೆಯ ಉತ್ಸುಕತೆಯಿಂದ ಕುಳಿತರು ಮಾಸ್ತರರು ಜನಸ್ತೋಮದ ಮಧ್ಯದಲ್ಲಿ ನಿಂತು ಮಾತನಾಡತೊಡಗಿದರು. ಜೇಲರನು ಮಾಸ್ತರರ ನಿಲುವಿಕೆಯಲ್ಲಿ ಕಣ್ಣನ್ನು ಇರಿಸಿದ್ದ. ಶ್ರೋತೃಗಳು ಔತ್ಸುಕ್ಯತೆಯಿಂದ ಕೇಳುತ್ತಲಿದ್ದರು. ವಿಶ್ವಧರ್ಮ ಪ್ರತಿಪಾದಕ ಮಹಾತ್ಮನ ಜೀವನದ ಧ್ಯೇಯಗಳನ್ನು ನಿರೂಪಿಸಿದರು ಭಾರತೀಯರ ಸಂತರಾಡಿಗಳಲ್ಲಿ ರಾಷ್ಟ್ರಪ್ರೇಮವನ್ನು ಆಧ್ಯಾತ್ಮಿಕ ತೇಜದಿಂದ ತುಂಬಿದ ಮಹತ್ಪ್ರಸಂಗಗಳನ್ನು, ಶ್ರೋತೃಗಳು ಉದ್ಗಾರ ಹೊರಡಿಸುವಂತೆ ಮಾತನಾಡಿದರು. ಮಹಾತ್ಮರು ತಮ್ಮ ಜೀವಮಾನದಲ್ಲಿ ಎಷ್ಟುಸಲ ಯಾವ ಯಾವ ಕಾರಣಕ್ಕಾಗಿ ಉಪವಾಸ ವ್ರತಮಾಡಿ, ಧ್ಯೇಯಸಿದ್ಧಿ ಪಡೆದರೆಂಬುದನ್ನು ಹೇಳಿ ‘ ಮಹಾತ್ಮರು ಸಕಲಜಾತಿ, ಮತ, ಪಂಥದವರಿಗೂ ಪ್ರಿಯರು. ಬ್ರಿಟಿಷರ ಆಳ್ವಿಕೆಯನ್ನು ಖಂಡಿಸುವರೇ ಹೊರತು, ಬ್ರಿಟಿಷರನ್ನಲ್ಲ, **ಎರಡನೆಯ ಕ್ರಿಸ್ತ**

ನೆಂದೂ ಮಹಾತ್ಮನನ್ನು ಬ್ರಿಟಿಷರೇ ಅಭಿಮಾನದಿಂದ ಕರೆಯುತ್ತಾರೆ. ತಾನೊಬ್ಬನೇ ಪರಮಾತ್ಮನ ಸಾಕ್ಷಾತ್ಕಾರ ಮಾಡಿಕೊಂಡು, ಮೋಕ್ಷಪದ ಪಡೆಯಬಹುದಾಗಿದ್ದಿತು. ವಶಿಷ್ಠ-ವಿಶ್ವಾಮಿತ್ರರ ಮಾಲಿಕೆಯಲ್ಲಿ ಮಹಾತ್ಮನ ಹೆಸರೂ ಸಮಾವೇಶವಾಗಿ, ಋಷಿಶ್ರೇಷ್ಠನೆಂದು ಕರೆಯಿಸಿಕೊಳ್ಳಬಹುದಾಗಿದ್ದಿತು. ಗಡ್ಡೆ-ಗೆಣಸನ್ನು ತಿಂದು, ಅರಣ್ಯವಾಸಿಯಾಗಿ ತಪವೆಸಗುವುದಕ್ಕಿಂತಲೂ, ದೀನ ದಲಿತರ ಸೇವೆಯೇ ಶ್ರೇಷ್ಠ ಧರ್ಮವೆಂದು, ಸಾರಿದ್ದಮಹಾವಿಭೂತಿ ಇವನು ಭಾರತೀಯರ, ದಾರಿದ್ರ್ಯ-ದುಃಖಮಿಶ್ರಿತ ಸಂಸಾರ ಕಂಡು ಮರುಗಿದ್ದಾನೆ. ಕೊರಗಿದ್ದಾನೆ. ಬಡವರ ಗುಡಿಸಿಲಲ್ಲಿದ್ದು ಅವಸೇವೆಗೈದರೆ ಪರಮಾತ್ಮನು ಪ್ರೀತನಾಗುವನೆಂದು ಸಾರಿ-ಸಾರಿ ಜಗತ್ತಿಗೆ ಹೇಳುತ್ತಾನೆ. ಇಂದು ಆ ಮಹಾವಿಭೂತಿಯನ್ನು, ಜಗದ್ವಂದ್ಯ ಮಹಾತ್ಮನನ್ನು, ನಮ್ಮೆಲ್ಲರ ತಂದೆಯನ್ನು, ಆಳರಸರು, ಆಗಾಖಾನ ಅರಮನೆಯಲ್ಲಿ ಬಂಧಿಸಿ ಇಟ್ಟಿದ್ದಾರೆ. ವಿಶ್ವಬಾಂಧವ್ಯವೇ ತನ್ನ ಧ್ಯೇಯವೆಂದು ಸಾರುವ, ಶಾಂತಿ-ತ್ಯಾಗ, ಸತ್ಯಗಳೇ ಚಿರವಿನೂತನ ಧರ್ಮವೆಂದು ಘೋಷಿಸುವ ಪೂಜ್ಯಮಹಾತ್ಮನನ್ನು, ಆಳರಸರು ಬಂಡುಖೋರನೆಂದು ಬಗೆದು, ನಿರ್ಬಂಧಿಸಿದ್ದಾರೆ. ನೆನಪಿಡಿರಿ. ನಾವು ಪುಣ್ಯವಂತರು. ಅವನ ಕಾಲದಲ್ಲಿ ಜನ್ಮಿಸಿದ್ದೇವೆ. ಪ್ರಶಾಂತ ಮೂರ್ತಿಯನ್ನು ಇದೇ ಕಣ್ಣಿಂದ ಕಾಣುತ್ತಿದ್ದೇವೆ. ಅವನ ಅಮೃತಮಯ ಸಂದೇಶ ಕೇಳಿದ್ದೇವೆ. ಮಹಾತ್ಮರು ಇಂದು ಆಗಾಖಾನರ ಅರಮನೆಯಲ್ಲಿ ಇರಿಸಿದ್ದಕ್ಕಾಗಿ ಉಪವಾಸಮಾಡಿಲ್ಲ. ಭಾರತದಲ್ಲಿ ಬ್ರಿಟಿಷರು ನಿರ್ದಯತನದಿಂದ ವರ್ತಿಸಿದ್ದಕ್ಕಾಗಿ, ರಾಷ್ಟ್ರಧ್ವಜದ ಮೆರವಣಿಗೆಯ ಮೇಲೆ ಅಮಾನುಷ ರೀತಿಯಿಂದ ಟಿಯರ್‌ಗ್ಯಾಸ ಬಿಟ್ಟಿದ್ದಕ್ಕೆ! ಗುಂಡು ಹಾಕಿದ್ದಕ್ಕೆ!! ಬಾಂಬುಗಳನ್ನೇ ಸುರಿಸಿದ್ದಕ್ಕೆ!!! ಗುಂಡಿಗೆ ಆಹುತಿಯಾಗಿ, ಸಹಸ್ರಾರು ತರುಣರು ಪ್ರಾಣಾರ್ಪಣೆ ಮಾಡಿದುದನ್ನು ಅವರು ಮರೆತಿಲ್ಲ. ಧ್ವಜದಡಿಯಲ್ಲಿ ರಕ್ತಸುರಿಸಿ ಸತ್ತವರನ್ನು ಅವರು ಕಡೆಗಣಿಸಿಲ್ಲ. ಅವರ ಕರುಣಾಜನಕ ಮರಣಕ್ಕೆ ನೊಂದಿದ್ದಾರೆ. ನಿರಪರಾಧಿಗಳಾದ ನಾಗರಿಕರ ಮರಣದಿಂದ ಮಹಾತ್ಮರು ಖಿನ್ನರಾಗಿದ್ದಾರೆ. ಇದುವೇ ಅವರ ಉಪವಾಸದ ಕಾರಣ. ಮುಖಂಡರ ಬಂಧನದಿಂದ,

ಮಾರ್ಗದರ್ಶಕರಿಲ್ಲದೇ ತರುಣ ತರುಣಿಯರು, ವೃದ್ಧರು ಬಾಲಕರೇ ಮೊದಲಾಗಿ ರಾಷ್ಟ್ರ ಕಾರ್ಯದಲ್ಲಿ ಧುಮುಕಿದರು. ತಮಗೆ ಸರಿತೋರಿದ ರೀತಿಯಲ್ಲಿ ಸರಕಾರಕ್ಕೆ ವಿಘ್ನವಾಗುವಂತೆ ಪ್ರಯತ್ನಿಸಿ ಮಡಿದರು. ರಾಷ್ಟ್ರ ಸ್ವಾತಂತ್ರ್ಯಕ್ಕಾಗಿ, ತರುಣರು ಸ್ಫೂರ್ತಿಯಿಂದ ತ್ಯಾಗಮಾಡಿದುದು ಅಪರಾಧವೇ ? ಎಂದು ಕೇಳುತ್ತಿದ್ದಾರೆ ಮಹಾತ್ಮರು. ದೇಶದಾದ್ಯಂತವೂ ಬ್ರಿಟಿಷರು ಎಸಗಿದ ಅಮಾನುಷ ಅತ್ಯಾಮಾನುಷ ಕೃತಿಯನ್ನು ಖಂಡಿಸಿ ಉಪವಾಸ ಪ್ರಾರಂಭಿಸಿದ್ದಾರೆ. ಮಹಾತ್ಮನ ಉಪವಾಸದಿಂದ ಸಮಸ್ತ ಭೂಮಂಡಲವೇ ನಡುಗುತ್ತಿದೆ. ಜನತ್ತಿನ ಜನ ಸಮೂಹವು ಮಹಾ ವಿಭೂತಿಯ ಕಡೆಗೆ ನೋಡತೊಡಗಿದೆ. -ಮಹಾತ್ಮನ ಉಪವಾಸದ ಪ್ರಶ್ನೆ ಸಾಮಾನ್ಯವಲ್ಲ. ಭೂಮಂಡಲವೇ ಪರಿಣಾಮನ್ನು ಕುತೂಹಲ-ದಿಂದ ನಿರೀಕ್ಷಿಸುತ್ತಿದೆ ಅವರ ಉಪವಾಸದಿಂದ ಬ್ರಿಟಿಷರು ಥರಥರ ನಡುಗುತ್ತಿದ್ದಾರೆ. ತಮ್ಮನ್ನು ಮುಕ್ತಮಾಡಲೇಬೇಕೆಂದು, ಅವರ ಆಗ್ರಹವಿದೆ. ಭರತಖಂಡಕ್ಕೆ ಮಾರ್ಗದರ್ಶಕರೇ ಇಲ್ಲದಂತಾಗಿದೆ ' ಎಂದು ಆವೇಶದಿಂದ ಮಾತನಾಡಿ, ಕೈದಿಗಳು ಯಾವ ರೀತಿಯಿಂದ ಜೇಲಿನಲ್ಲಿ ವರ್ತಿಸಬೇಕೆಂಬುದನ್ನು, ವಿವರಿಸಿದರು. ಶಕ್ಯವಿದ್ದಷ್ಟುದಿನ, ಆತ್ಮಬಲವುಳ್ಳವರು ಉಪವಾಸಮಾಡಲು, ಹಗಲು ರಾತ್ರಿ ಏಕಪ್ರಕಾರವಾಗಿ ನೂಲಲು, ಈಶ ಪ್ರಾರ್ಥನೆಯಲ್ಲಿ ಮಗ್ನರಾಗಿರಲು, ವಿನಂತಿಮಾಡಿಕೊಂಡು, ತಮ್ಮ ಮಾತನ್ನು ಮುದುವರೆಸಿದರು.

" ಗೆಳೆಯರೇ, ಎಲ್ಲರೂ ಶಾಂತತನದಿಂದ ಎದ್ದುನಿಂತು, ವಿಕ್ರಮರು ಹೇಳುವ ಪ್ರಾರ್ಥನೆಯನ್ನುಪಠಿಸಿರಿ. ಮಹಾತ್ಮನಿಗೆ ಆಯುರಾರೋಗ್ಯ-ಗಳನ್ನು ದಯಪಾಲಿಸಲು ಈಶ್ವರನಲ್ಲಿ ಬೇಡಿಕೊಳ್ಳಿರಿ. " 'ಮಾಸ್ತರ'ರು ಕುಳಿತು, ಕೂಡಲೇ ಎದ್ದುನಿಂತರು. ಕುಳಿತ ಕೈದಿಗಳೆಲ್ಲ ಕೈಮುಗಿದು ಆಕಾಶದೆಡೆಗೆ ನೋಡುತ್ತ ನಿಂತರು. ಜೇಲರನೂ ಎದ್ದ. ಸಿಪಾಯಿಗಳೂ ಎದ್ದರು. ವಿಕ್ರಮನು ಎತ್ತರಸ್ಥಳದ ಮೇಲೆ ನಿಂತು ಪ್ರಾರ್ಥನೆ ಹೇಳತೊಡಗಿದ.

ಮಹಾತ್ಮಾಗಾಂಧೀಗೆ। ಪರಮಸುಖ ಆರೋಗ್ಯವಿಯೋ ಸತ್ಯಾತ್ಮರ್ಗ್ಗೇ ಕಿಂಚಿತ್ ಶರಿರಬುದ್ಧಿಃ ಕ್ಲೇಶವಿರದೇ ಜಗತ್‌ಶಾಂತಿಃ ಪ್ರಸ್ಥಾಪನಪಟು ಗಣ್ಯರ್‌ಕಾಣೆ ಭೂವಿಯೋಳ್। ಮಹಾತ್ಮರ್ಗ್ಗಾಯುಷ್ಯಂ ಕೃತಫಲಮಧಿಕಾ ನೀಡುನಿರುತಾ ॥

ಒಂದೊಂದೇ ಚರಣವನ್ನು ವಿಕ್ರಮನು ಹೇಳಿದ. ಕೈದಿಗಳೆಲ್ಲ ಭಕ್ತಿ ಭಾವನೆಯಿಂದ ನುಡಿದರು. ನಿಂತವರೆಲ್ಲರೂ ಆತ್ಮವಿಶ್ವಾಸದಿಂದ ನುಡಿದರು. ದೇವನೇ ಮುಗಿಲಲ್ಲಿ ನಿಂತು, ತಮ್ಮ ಪ್ರಾರ್ಥನೆ ಕೇಳುತ್ತಲಿರುವನೆಂಬ ದೃಢವಿಶ್ವಾಸ, ಕೈದಿಗಳಲ್ಲಿ ತುಂಬಿತ್ತು. ದೇವನು ಅಭಯಹಸ್ತ ತೋರಿ ಆಶೀರ್ವದಿಸುವನೆಂದು ನಂಬಿ, ತಲ್ಲೀನರಾಗಿ ಆಕಾಶವೆಡೆಗೆ ನೋಡುತ್ತಲಿದ್ದರು. ಪ್ರಾರ್ಥನೆ ಸಮಾಪ್ತವಾಯಿತು

---

## ಹೂರಣ ಹೊರಬಿತ್ತು !!

ಕೈದಿಗಳ ಸಂತಸದ ಕಡಲು ಭೋರ್ಗರೆಯುತ್ತಲಿತ್ತು. ಜೇಲಿಲ್ಲಿಯ ರೊಟ್ಟಿ ರಸಾಯನಗಳು ರುಚಿಸದಾದವು. 'ಒಂದೆರಡು ದಿನ ಕಳೆದರಾಯಿತು, ಬೇಕಾದ ವಸ್ತು ದೊರೆಯುವುದು. ಎರಡು ದಿನ ಉಪವಾಸಕ್ಕೆ ಸಾಯಲಾರೆವು' ಎನ್ನುತ್ತಲಿದ್ದರು. ಮಹಾತ್ಮರು ಉಪವಾಸ ಪ್ರಾರಂಭಿಸಿದ್ದು ತಮಗಾಗಿ ಅಲ್ಲ. ಅವರ ಬಿಡುಗಡೆಯ ಮರುದಿನವೇ ತಮ್ಮನ್ನು ಬಿಡುವರೆಂದು ಉತ್ಸಾಹ. ಹೊರಡುವ ಸಿದ್ಧತೆಯಲ್ಲಿಯೇ ಕೆಲವರು ತೊಡಗಿದ್ದಾರೆ. 'ಈ ದಿನ ಸಂಜೆಗೇ ಬಿಡುಗಡೆ ಆವರೆ .... ನಾಳಿನ ದಿನ ಬೆಳಗಿನಲ್ಲಿ ಮುಕ್ತ ಮಾಡಿದರೆ....' ಊರಿಗೆ ಹೊರಡುವ ಕಾರ್ಯಕ್ರಮ ಬರೆಯುತ್ತಲಿದ್ದರು. 'ಇಸಾಪೂರ ಸ್ಟೇಶನ್ನು ಚಿಕ್ಕದು. ಆದರೂ ಚಿಂತೆಯಿಲ್ಲ. ಸಿಕ್ಕಷ್ಟೇ ಚೂಡಾ-ಚಹಾ .... ಥೊಂಡ- ದೊಡ್ಡದು. ಎರಡು ರೂಪಾಯಿ ಬೇಡಿದರೂ ಸರಿ ಹೊಟ್ಟೆ ಹರಿಯುವಂತೆ ಊಟ. ಮುಂದೆ ! .... ಮೊದಲು ಊರಿಗೇ ಬೇಡ. ಆ ಮೋಲಿ ತಾಯಿಯ

ಭೆಟ್ಟಿ! ತಂದೆ ತಾಯಿಗಳಿಗೇನು! ದಾರಿ ಕಾಯುತ್ತ ತನ್ನ ತಂದೆಯ ಮನೆಯಲ್ಲಿದ್ದಾಳೆ! ಅವಳು ಮನೆಯಲ್ಲಿಯೇ ಇದ್ದರೆ .... ಮಾವನ ಕರಿ ಮುಖ ನೋಡುವುದೇ! ಎಲ್ಲಿರಬಹುದು? ಈಗೇಕೆ? ಬಿಡುಗಡೆಯಾಗಲಿ. ದಾರಿಯಲ್ಲಿ ನಮ್ಮೂರವರೇ ಕಾಣಬಹುದು ಕೇಳಿ-ಅವಳಿದ್ದಲ್ಲಿಗೇ ಹೋಗುವದು' ಒಬ್ಬನು ಚಿಂತಿಸುತ್ತಲಿದ್ದ. ಬೇರೊಬ್ಬನು 'ಭಗವಂತಾ ನಿನ್ನ ಮಗನ ಅಪರಾಧಗಳನ್ನು ಕ್ಷಮಿಸು ತಿಳಿಯದೇ ಚಳವಳಿಯಲ್ಲಿ ಕಾಲಿಟ್ಟೆ. ಕಷ್ಟಬಟ್ಟೆ. ಹೆಂಡತಿಯನ್ನು ಅಗಲಿರಬೇಕಾದ ಪ್ರಸಂಗ ಬಂತು. ನಿನ್ನ ಪಾದಸಾಕ್ಷಿ- ದೇಶಪ್ರೇಮದಿಂದ ಬಂದಿಲ್ಲ. ಹೆಸರಾಗಬೇಕೆಂದು ಬಂದೆ. ಜೇಲಿನಲ್ಲಿ ಇಷ್ಟು ಕಷ್ಟಪಡಬೇಕಾಗುವುದೆಂಬುದು ಮೊದಲೇ ತಿಳಿದಿದ್ದರೆ- ಹೆಸರು ಬೇಡವೆಂದು ಮನೆಯಲ್ಲಿ ಅವಳೊಡನೆ ಕೂಡ್ರುತ್ತಿದ್ದೆ. ದೇವಾ, ನಿನ್ನೆದುರಲ್ಲವೇ ಇನ್ನಾರಲ್ಲಿ ಸಂಕಟ ಹೇಳಿಕೊಳ್ಳಲಿ ದೇಶದ ಮುಖಂಡರ ಮಾತಿಗೆ ಬಲಿ ಬಿದ್ದೆ. ಇದ್ದುದನ್ನೆಲ್ಲ ಹಾಳು ಮಾಡಿಕೊಂಡೆ ಸರಕಾರದವರು ಇದೇ ಸಲ '**ರಾವಬಹಾದ್ದೂರ**' ಪದವಿಯ ದಯ ಪಾಲಿಸುವವರಿದ್ದರು ನಾನು ಸರಕಾರಕ್ಕೆ ರೀಕ್ರೂಟ ಕೊಟ್ಟೆ. ವಾರ ಫಂಡ, ವಾರಲೋನ ಕೂಟ್ಟೆ, ಕೊಂಡೆ ಸೀನಪ್ಪನೇ ನನ್ನನ್ನು ಅಡ್ಡದಾರಿಗೆ ಎಳೆದ. ಅವನ ಮಾತಿಗೆ ಮರುಳಾದೆ. ಭಾವೀ ಸರಕಾರದ ಪ್ರಶಸ್ತಿ ಪಡೆಯಬೇಕೆಂದು ಕಾಂಗ್ರೆಸ್ಸಿನ ಗುಪ್ತ ಕೆಲಸಕ್ಕೆ ಹಣ ಕೊಟ್ಟೆ. ಕೆಲಸ ಮಾಡಿದೆ. ಮೂರೇ ತಿಂಗಳಲ್ಲಿ ಚಳವಳಿ ಮುಗಿಯುವದೆಂದರು. ಮುಖಂಡರೇ ಅಡ್ಡದಾರಿ ಹಿಡಿಸಿದರು. ಗಾಂಧಿಯ ಉಪವಾಸದಿಂದ ಬಿಡುವರೆಂದು ನನಗೆ ಧೈರ್ಯವಿಲ್ಲ. ಗಾಂಧಿಯನ್ನು ಬಿಟ್ಟರೂ ನನ್ನನ್ನು ಬಿಡದಿದ್ದರೆ .... ಗಾಂಧಿ ಸತ್ತರೂ ನನಗೆ ದುಃಖವಿಲ್ಲ. ಸ್ವತಂತ್ರ ಸಿಕ್ಕಲಿ ಬಿಡಲಿ. ನನ್ನನ್ನು ಬಿಟ್ಟರಾಯಿತು. ಎಲ್ಲರ ಮನಸ್ಸಿನಲ್ಲಿ ಹೀಗೇ ಇದೆ ಮೇಲೆ, ದೇಶಭಕ್ತಿಯ ಸೋಗಿನ ಮಾತಾಡುತ್ತಾರೆ. ಏನು ಮಾಡುವುದು. ಗುಪ್ತವಾಗಿ ಸರಕಾರಕ್ಕೆ, ಕಲೆಕ್ಟರನಿಗೆ ಅರ್ಜಿ ಮಾಡಿದ ಕ್ಷಮೆ ಬೇಡಿದೆ. ಹೆಂಡತಿಯ ಜೊತೆ ಇದ್ದರೇ ನಾನು ಬದುಕುವೆ. ನಿಮಗೆ ಇನ್ನೂ ರಿಕ್ರೂಟ ಕೊಡುವೆ, ವಾರಫಂಡ ಕೊಡುವೆ, ನನ್ನನ್ನು ಮನೆಗೆ ಕಳಿಸಿರಿ. ಊರ

ಲ್ಲಿಲ್ಲ ಮನೆ ಬಿಟ್ಟು ಎಲ್ಲಿಗೂ ಹೋಗುವಂತಿಲ್ಲ ಕಾಯಲು ಸಿಪಾಯಿ ಗಳನ್ನಿಡಿರಿ. ಅವರ ವೆಚ್ಚ ಕೊಡುತ್ತೇನೆ ಹೆಂಡತಿ ಇಲ್ಲದ್ದರಿಂದ ಹುಚ್ಚು ಹಿಡಿಯುವಂತಲ್ಲಿದೆ. ನನ್ನನ್ನು ಬಿಡಬೇಕೆಂದು ಬೇಡಿಕೊಂಡೆ. ಮಹಾನು ಭಾವರಿಗೆ ಏನನ್ನಬೇಕು. ಮನುಷ್ಯತ್ವವೇ ಅವರಲ್ಲಿಲ್ಲ. ಅವರಿಗೆ ಹೆಂಡ ತಿಯೇ ಇರಲಿಕ್ಕಿಲ್ಲ! **ಸೆಪರೇಟ**ನೆಲ್ಲರಿನಬೇಕೆ? ಎಲ್ಲರ ಕೂಡ ಮಾತ ನಾಡಿ ಸಮಾಧಾನ ಮಾಡಿಕೊಳ್ಳುತ್ತಿದ್ದ. ಹೊಲೆಯನಂತೆ ದೂರ ಇರಿ ಸಿದರು. ಮಾಸ್ತರ ಬಂದು ಜಾತಿಯಲ್ಲಿ ಕೂಡಿಸಿದ. ಗಾಂಧಿ! ಏನೇ ಆಗಲಿ.... ಬಿಡುಗಡೆ .... ಆದರೆ.. ಇಲ್ಲೇ ಸಾಯುವೆನೋ ಏನೊ...." ಅಳುತ್ತಿದ್ದ. ಗಳಿಯರೆಂದು ತಿಳಿದು, ಹೇಳಿಕೊಂಡರೆ ಹಾಸ್ಯಮಾಡಿದವರೇ ಹೆಚ್ಚು. ಅವನಿಗೆ ಕೇಳುವಂತೆಯೇ ಅವನಾಟದ ಮಾತುಗಳನ್ನು ಅಭಿನ ಯಿಸುವರು. ಅರೆ ಹುಚ್ಚನೇ ಆಗಿದ್ದ. ಮಾಸ್ತರರು ಬಾರದಿದ್ದಲ್ಲಿ ಹುಚ್ಚರ-ಆಸ್ಪತ್ರಿಗೆ ಸೇರಿಸಲೇಬೇಕಾಗುತ್ತಿತ್ತು

ಇನ್ನೇನು ಈಗಲೇ ಇನ್ನೊಂದು ಗಳಿಗೆಗೇ ಜೇಲರನು ಬರುವ. ನಿಮ್ಮೆಲ್ಲರನ್ನು ಬಿಡುಗಡೆ ಮಾಡಲು ಹುಕುಂ ಬಂದಿದೆ' ಎಂದು ಹೇಳುವ. ಎಂದು ಕುಣಿದಾಡಿದರು. "ಏಳು ಕೈದಿಯೆ ಏಳು;' ಎಂದರು.

• ಮಾಸ್ತರರ ಆಜ್ಞೆಯಂತೆ ಸೂತ್ರಯಜ್ಞ ಜೇಲಿನಲ್ಲಿ ನಡೆದಿದೆ. ಪೆಟ್ಟಿಗೆ ಚರಕಗಳಿಂದ, ತಕಲಿಗಳಿಂದ ನೂಲು ತೆಗೆಯುತ್ತಲಿರುವರು. ಒಂದು ಬರಾಕು ಕೇವಲ ನೂಲುವುದಕ್ಕೆ. ಇನ್ನೊಂದು ಬರಾಕಿನಲ್ಲಿ ಈಶ ಪ್ರಾರ್ಥನೆ ನೂರಾರು ಕೈದಿಗಳಿಂದ. ಬೇರೊಂದರಲ್ಲಿ 'ರಾಧಾಕೃಷ್ಣ ಜೈ ಕುಂಜಬಿಹಾರಿ, ಮುರಲೀಧರ ಗೋವರ್ಧನಧಾರಿ' ಸತತ ಪರಮೇಶ್ವರನ ಭಜನೆ. ಯಾರಿಗೂ ವಿಶ್ರಾಂತಿ ಇಲ್ಲ. ಎಲ್ಲರೂ ಮಹಾತ್ಮನ ಉದ್ದಿಶ್ಯ ವಾಗಿ ದೇವರನ್ನು ಪ್ರಾರ್ಥಿಸುತ್ತಲಿರುವರು ಕರಿ ಕಂಬಳಿಯನ್ನು ಗೋಡೆಗೆ ತೂಗು ಬಿಟ್ಟು, ಹಂಜಿಯ ಗಾಂಧಿಯನ್ನು ಕಂಬಳಿಯ ಮೇಲೆ ಚಿತ್ರಿಸಿ ದ್ದರು. ಚರಕವನ್ನು ನೂಲುವ ಗಾಂಧಿಯು, ಒಂದು ಕಂಬಳಿಯ ಮೇಲೆ, ಕ್ರಿಪ್ಸನೊಡನೆ ಮಾತನಾಡುತ್ತಲಿರುವ ಗಾಂಧಿ, ಯರವಡಾ ತುರಂಗದಲ್ಲಿ **ಕುಳಿತ ಗಾಂಧಿ!** ಮಹಾತ್ಮನು ನೂರಾರು ಕಂಬಳಿಗಳ ಮೇಲೆ ಹಂಜಿ

ಯಿಂದ ರೂಪುಗೊಂಡಿದ್ದ. ವಿಕ್ರಮನು ನಿರ್ಮಿಸಿದವರ ಕಲಾಕೌಶಲ್ಯತೆಗೆ ಬೆರಗುಗೊಂಡ. ಅದೇ ಮುಖ. ಅದೇ ಭಾವಭಂಗಿ. ಎಂತಹ ನೈಪುಣ್ಯತೆ! ಚಿತ್ರಿಸಿದ ಗಾಂಧಿಯ ಕೂಡ ಮಾತನಾಡಲೇ ಎನ್ನಿಸಿತು ವಿಕ್ರಮನಿಗೆ. ಸಜೀವತೆ ತುಂಬಿ ತುಳುಕುತ್ತಿದ್ದಿತು ಚಿತ್ರಗಳಲ್ಲಿ. ಚಿತ್ರಕಾರ ದೀಕ್ಷಿತರನ್ನು ಸಹಸ್ರಾರು ಸಲ ಅಭಿವಂದಿಸಿದ ವಿಕ್ರಮ.

ಸಹಸ್ರಾರು ಕೈದಿಗಳಲ್ಲಿ, ನಾಲ್ವರೇ ಉಪವಾಸಕ್ಕೆ ಬದ್ಧರಾಗಿ ಉಳಿದವರು. ಮಹಾತ್ಮರು ಬಿಡುಗಡೆಯಾಗಿ ಪಾರಣೆ ಮಾಡಿದ ನಂತರ ತಾವು ಉಪವಾಸ ಬಿಡುವುದೆಂದು ದೃಢಸಂಕಲ್ಪಿತರಾಗಿದ್ದರು. ಮಾಸ್ತ-ರರು, ಗಣಪತಲಾಲ, ಜೋಗ, ಥೋರಾತ, ವಿಕ್ರಮ! ಜೋಗನು ನಾಲ್ಕನೆಯ ದಿನ ಗಂಜಿಗೆ ಶರಣು ಹೊಡೆದ. ಉಳಿದವರು ನಿಷ್ಠೆಯಿಂದ ಉಪವಾಸ ವ್ರತ ಪ್ರಾರಂಭಿಸಿ ಸಾಗಿಸುತ್ತಲೇ ಇದ್ದರು. ಮಾಸ್ತರರು ಜಾತ್ಯಾಕರ್ಮಠರು. ಸ್ನಾನಸಂಧ್ಯಾ ಧ್ಯಾನ ಜಪ ತಪ ತೀರಿಸಿ, ಚರಕಾ-ದೆದುರು ಕುಳಿತರೆ ಸಮಾಧಿಸ್ಥರಾದಂತೆ. ಗಣಪತಲಾಲ ಅದೊಂದು ಮಹಾ ವ್ಯಕ್ತಿ. ಮಹಾತ್ಮನೇ ದೇವರು. ದೇವರೇ ಅವತಾರ ಮಾಡಿರುವನೆಂದು ಮನಸಾನಂಬಿದವ. ಮಹಾತ್ಮಾ ಗಾಂಧಿಯ ಭಜನೆಯೇ ಅವನ ನಾಲಿಗೆಯಲ್ಲಿ. ಜೀವ ಬಿಟ್ಟಾನು ಚರಕಾ ಬಿಟ್ಟಪ್ಪನಲ್ಲ. ಇನ್ನು 'ಥೋರಾತ' ಮುಪ್ಪಿನ ಮುದುಕ. ಎತ್ತರ ಆಳು. ಪರಿಪುಷ್ಟದೇಹ. ಬೆಳ್ಳಿಯ ಗಡ್ಡ ಮೀಸೆ. ತುಕಾರಾಮರ ಅಭಂಗಗಳನ್ನು ಪಂಚಮಸ್ವರದಿಂದ ನುಡಿಯುತ್ತಲೇ ಇರುವ. ಕೈದಿಗಳೆಲ್ಲ 'ಆಜ ಏಕಾದ್ಯಶೀ-ಥೊರಾತಾಚೀ ಆಜ ಏಕಾದಶೀ' ಎಂದು ಹಾಡಿ ಗಡ್ಡ ಹಿಡಿದು ಜಗ್ಗುತ್ತಿದ್ದರು. ಕೊಂಚವೂ ಕೋಪವೆಂಬುದಿಲ್ಲ. ಒಲ್ಲೆನೆಂದವರಿಗೂ 'ತುಕಾಮ್ಹಣೇ ಐಸಾ' ಎಂದು ಪ್ರಾರಂಭಿಸುವ. ಪ್ರಚಂಡ ಮುಖಂಡ ಶಿಖಾಮಣಿ ಅಕ್ರಾಸೆ ಬೇಚಾಳೀಸನ ಉಪವಾಸದ ವೈಖರಿ ವರ್ಣನಾತೀತ. ಶತಸಹಸ್ರ ನಾಲಿಗೆ ಕೊಡಲೇ ಬೇಕೆಂದು ಆದಿಶೇಷನು ವಿಷ್ಣುವಿನೊಡನೆ ಸತ್ಯಾಗ್ರಹವನ್ನೇ ಹೂಡಿರುವ. ವಿಕ್ರಮನ ಉಪವಾಸದ ವರ್ಣನೆ ಮಾಡಿ ಮಾಡಿ, ಸಾವಿರ ನಾಲಿಗೆಗಳು ಕೊಳೆತು ಕಳಚಿ ಬಿದ್ದವು. ವರ್ಣನೆಯ ಸ್ಫೂರ್ತಿ ಇನ್ನೂ ಪುಟಿಯುತ್ತಲೇ

ಇರುವುದರಿಂದ ಶತಸಹಸ್ರ ಜಿಹ್ವೆಯ ಭಿಕ್ಷೆಗೆ ಪ್ರಯಾಣ ಮಾಡಬೇಕಾಯಿತು ಆದಿಶೇಷ !

ಹುಂಬಣ್ಣನು ಬೇಡವೆಂದ. ಶಾಮುಸಾವಜಿಗಳೂ ಹುಂಬಣ್ಣನ ಸೂಚನೆಗೆ ಬೆಂಬಲ ಕೊಟ್ಟರು. ಮಾಸ್ತರರೂ ಹೇಳಿಕೊಂಡರು. ಮಹಾತ್ಮರ ತತ್ತ್ವೋಪದೇಶ ಮಾಡಿದರೆ ಉಪವಾಸ ಮಾಡಿದುದಕ್ಕಿಂತ ಶ್ರೇಷ್ಠವೆಂದು ಪ್ರತಿಪಾದಿಸಿದರು. ಪರಿಣಾಮವಾಗಲೇ ಇಲ್ಲ. ಉಪವಾಸದಿಂದ ಆತ್ಮಸಂಯಮನವಾಗುವದು. ಅರಿಷಡ್ವರ್ಗಗಳು ಶರಣಾಗತವಾಗುವವು ಬೇನೆಗಳು ಭಸ್ಮವಾಗುವವು. ಸ್ಥಿತಪ್ರಜ್ಞತೆಯ ಪ್ರಥಮ ಮೆಟ್ಟಿಲು ಉಪವಾಸವೇ ಎಂದು ವಾದಿಸಿದ ವಿಕ್ರಮ. ವಿಕ್ರಮನ ಮಾತಿನಲ್ಲಿ ವಿಶ್ವಾಸ ಉಳಿಯ ತೊಡಗಿದೆ. ಮೂವರ ಮುಖವು ಬಾಡಿದೆ. ತೇಜಸ್ಸಿದೆ. ಅಶಕ್ತರಾಗುತ್ತಿದ್ದಾರೆ. ವಿಕ್ರಮನೇ ಎಲ್ಲರಿಗಿಂತ ಗಟ್ಟಿಗನೆನಬೇಕಾಗಿದೆ. ಅವನು ಅಶಕ್ತನಾಗಿಲ್ಲ ಸೊರಗಿಲ್ಲ. ಮುಖಬಾಡಿಲ್ಲ. ಶಕ್ತಿ ಕಿಂಚಿತ್ ಕುಂಠಿತವಾಗಿಲ್ಲ. ಮೊದಲಿನಂತೆ ಮಾತನಾಡುವ, ಮಾಸ್ತರರು ನೆಲ ಹಿಡಿದರು. ಥೋರಾತನ ಅಭಂಗಗಳು ಗಂಟಲಲ್ಲಿಯೇ ಇಳಿಯುತ್ತಿವೆ. ಗಣಪತಲಾಲನ, ಚಾಕಾ ತೂಕಡಿಸುತ್ತದೆ. ಒಂದು ವಾರ ಕಳೆಯಿತು. ವಿಕ್ರಮನು ವಿಕ್ರಮನಾಗಿಯೇ ಇದ್ದ. ವಕ್ರನಾಗಿರಲಿಲ್ಲ ಶುಕ್ರನಾಗಿರಲಿಲ್ಲ.

ಒಂದು ದಿನ ರಾತ್ರಿ ಮಲಗಿದ ವಿಕ್ರಮನು ಎದ್ದು ಕುಳಿತ. 'ಥೋರಾತ' ನರಳುತ್ತಿದ್ದ. ಕೈದಿಗಳು ಸುಖನಿದ್ರೆಯಲ್ಲಿದ್ದರು. ಎದ್ದು, ಹರವಿಯಲ್ಲಿಯ ನೀರನ್ನು ಥಾಲೀಪಾಟನಲ್ಲಿ ತುಂಬಿ ತಂದ. ಬಿಸ್ಕೂಟು ಗಳನ್ನು ನೀರಲ್ಲಿ ನೆನೆಸಿದ. ಯಾರೂ ಎಚ್ಚರಿಲ್ಲವೆಂದುದನ್ನು ಮನವರಿಕೆ ಮಾಡಿಕೊಂಡ ಬಿಸ್ಕೂಟನ ಮುದ್ದೆಮಾಡಿ, ಉಪ್ಪು ಹಾಕಿ ಮಿದ್ದಿದ. ಕಂಬಳಿಯಲ್ಲಿ ಅಡಗಿಸಿ ಮುದ್ದಿಯನ್ನು ಇರಿಸಿದ. ಶತಪಥದ ನೆವನೆನಪು ಮಾಡಿಕೊಂಡು ಎದ್ದು ತಿರುಗಿದ. ಯಾರೂ ತನ್ನ ಕೃತಿ ನೋಡಲು ಎಚ್ಚರಿಲ್ಲವೆಂಬುದನ್ನು ಕಂಡುಬಂದೇ ಚಾಪಿಯ ಮೇಲೆ ಉರುಳಿದ. ಮುಸುಕಿನಲ್ಲಿಯೇ ಮುದ್ದಿಯನ್ನು ಎಳೆದ, ತುಂಬ ಹೊದೆದು ಮುದ್ದಿಯನ್ನು ಮುದ್ದಿಸಿ, ಬಾಯಿಯೊಳಕ್ಕೆ ತುರುಕಿದ. ಅವಸರದಿಂದ

ವೇಗವಾಗಿ, ಜಾಗೃತೆಯಾಗಿ, ಲಗುಬಗೆಯಿಂದ, ಸಪ್ಪಳಾಗದಂತೆ ನುರಿಸ ತೊಡಗಿದ. ಒಂದು ತುಣುಕು ಮುದ್ದಿ ಸ್ವಾಹಾಕಾರವಾದುದೇ ತಡ, ಮೆಲ್ಲನೇ ಮುಸುಕೆಳೆದು, ಯಾರಾದರೂ ಎದ್ದಿರುವರೋ ಎಂದು ನಿರೀಕ್ಷಿಸುವ ಮುಸುಕಿನಲ್ಲಿಯ ಮುದ್ದೆ ಕರಗುತ್ತಲಿತ್ತು. ಕೊನೆಯದೆಂದು ದೊಡ್ಡ ತುತ್ತನ್ನು ಬಾಯಿಗಿಟ್ಟ. ಲಗುಬಗೆಯಿಂದ ಕಳಿಸಲು ಪ್ರಯತ್ನಿಸಿದ ಯಾರೋ ಹೊದ್ದ ಕಂಬಳಿಯನ್ನೇ ಕಸಿದರು. ಉಬ್ಬಿದ ಕೆನ್ನೆ ತೋರುತ್ತ ನಿದ್ರೆಯ ನಟನೆ ತೋರಿದ. ತನ್ನ ಉಪವಾಸದ ಹೂರಣವೇ ಹೊರಬಿತ್ತು! ಎಂಬ ದಿಗಿಲು ಅವನಿಗೆ. ಕಂಬಳಿ ಎಳೆದ ಹುಂಬಣ್ಣನು ಅಷ್ಟಕ್ಕೇ ಬಿಡುವನೇ? ಹೆಸರುಗೊಂಡು ಮೆಲ್ಲನೇ ಕೂಗಿದ. ‘ವಿಕ್ರಮಾ’ ಎಂದ. ‘ಶಾಸ್ತ್ರೀಜೀ’ ಎಂದ ಸಾಹಿತ್ಯಾಚಾರ್ಯ- ಅಕ್ರಾನೆ ಬೇಚಾಳಿಸ ಎಲ್ಲ ಹೆಸರುಗಳನ್ನು ತಿರುವಿದ. ‘ಗಲ್ಲ ಬಾತಿವೆಯಲ್ಲೋ. ಬೆಳಗಾಗುವುದರಲ್ಲಿ ಸಾಯುತ್ತೀ’ ಎಂದ. ‘ಬಾತರೆ ಬದುಕಿಲ್ಲ. ಸೀತರೆ ಸಾವಿಲ್ಲ’ ಅಯ್ಯೋ, ನಮ್ಮ ಉಪವಾಸದ ‘ಮುಖಂಡ’ ಸಾಯುತ್ತಾನೆ. ಎಂದು ಅತ್ತಂತೆ ಮಾಡಿದ. ವಿಕ್ರಮನು ಚಟ್ಟನೇ ಎದ್ದು ನುಂಗಿಯೇ ಬಿಟ್ಟ.

“ನೀರು ಬೇಕೇನು ವಿಕ್ರಮಾ? ಗಂಟಲಲ್ಲಿ ಸಿಕ್ಕು ಸತ್ತೀ ಮಾರಾಯಾ?”

“ಕೈಮುಗಿಯುತ್ತೇನೆ ಸುಮ್ಮನಿರು.

“ನಾನೂ ನಿನ್ನಂತೆ ಉಪವಾಸ! ನಾಳಿನಿಂದ”

“ಕೈಮುಗಿವೆ ಭೀಮಣ್ಣಾ.”

“ಹಾಗಾದರೆ ನರಳು. ನಡೆಯಲು ಪ್ರಾಣವಿಲ್ಲದಂತೆ ನಟಿಸು.”

“ಭೀಮಣ್ಣ ಮೆಲ್ಲನೆ.... ...”

“ದೆವ್ವಗಳು ಕುಣಿಯುವ ಹೊತ್ತು. ಯಾರೂ ಕೇಳುವದಿಲ್ಲ. ಗಾಬರಿಯಾಗಬೇಡ”

“ಸುಮ್ಮನಿರು ಭೀಮಣ್ಣ”

“ನೀನು ಎಲ್ಲರೂ ಕೇಳುವಂತೆ ನರಳು. ನಾನು ಆರೈಕೆ ಮಾಡುತ್ತೇನೆ.”

ವಿಕ್ರಮನು ನರಳಲೇಬೇಕಾಗಿದ್ದಿತು. ವಿಕ್ರಮನ ಕೀರ್ತಿಯ ಜುಟ್ಟಿಗಳು ಭೀಮಣ್ಣನ ಮುಷ್ಟಿಯಲ್ಲಿ. ಹುಂಬಣ್ಣನು ವಿಕ್ರಮನ ಆರೈಕೆಗೆಂದೇ ಜೇಲರನಿಗೆ ಹೇಳಿಕೊಂಡು ವಿಕ್ರಮನ ಬರಾಕಿಗೆ ಬಂದಿದ್ದ ನನಗಾಗಿ ಶ್ರಮಪಡಿಸುವುದೇಕೆ ? ಕಾಯುವವನು ಪರಮಾತ್ಮನಿದ್ದಾನೆ. ನನ್ನಿಂದ ಇತರರಿಗೆ ತೊಂದರೆ ಬೇಡವೆಂದು ವೇದಾಂತವನ್ನೇ ಸಾರಿದ್ದ. ಉಪವಾಸ ಮರ್ಮದ ಸಂಶೋಧನೆಗಾಗಿಯೇ — ಹುಂಬಣ್ಣನು, ಆಲ್ಪೊರೆದು, ಅಂಡಲೆದು, ಕೈಮುಗಿದು, ಕಾಲ್ಬಿದ್ದು ವಿಕ್ರಮನ ಬರಾಕಿಗೆ ಧುಮುಕಿದ್ದ.

ಗಂಜಿಯಕ್ಕಿ ತೊಳೆಯುವ ಹೊತ್ತು. ಮಾಸ್ತರರು ಧ್ಯಾನಮಗ್ನರಾಗಿದ್ದರು. ಪ್ರಾತಃ ನಳದ ಬುಡಕ್ಕೆ ಕುಳಿತು ಸ್ನಾನ ಮಾಡುತ್ತಿದ್ದರು. ಅವರು ಉಪವಾಸಮಾಡುತ್ತಿದ್ದರೂ ಗಂಜಿಯನ್ನು ತೊಳೆದ ತಿಳಿ ನೈವೇದ್ಯ ಜಾರುತ್ತಿತ್ತು ಎಲ್ಲರ ನೀರನ್ನು ಗಡ್ಡಕ್ಕೆ, ಡುಬ್ಬಕ್ಕೆ ಉಗ್ಗಿ ಥಾಲೀ ಪಾಟುಗಳನ್ನು ತೊಳೆದುಕೊಂಡು, ಬರಾಕಿನೊಳಗೆ ನಡೆದಿದ್ದರು. ಗಣಪತಲಾಲ ಗೋಕರ್ಣದ ಸಂದೇಶನೇ ಆಗಿದ್ದ. ವಿಕ್ರಮ!! ಅವನಂತಹ ಆತ್ಮಸಂಯಮಿಗಳೇ ಜೇಲಿನಲ್ಲಿಲ್ಲವೆಂದು ಡಂಗುರವನ್ನೇ ಹೊಯ್ಸಿಸಿದ್ದರು. ನರಳಿಕೆ- ಅಶಕ್ತತ ಇಂದೇ ಬಂದಿವೆ ಮುಂದಾಗಿ. ಬರಾಕಿನವರೆಲ್ಲರಿಗೂ ವಿಕ್ರಮನ ಸ್ಥಿತಿ ಸರಿಯಾಗಿಲ್ಲವೆಂದು ತಿಳಿಸಿದವನೇ ಭೀಮಣ್ಣ. ನಿಜವಾಗಿ ವಿಕ್ರಮನು ಹೊರಳಾಡುತ್ತಿದ್ದ. 'ಉಪವಾಸ ಸಾಕು, ಪಾರಣೆಮಾಡಿರಿ' ಎಂದು ಹೇಳಿಕೊಂಡರು ಹೊರಳಾಟದ ವಾರ್ತೆ ಹೊರಕ್ಕೂ ಹರಡಿತು. ಸಿಪಾಯಿಗಳು ಬಂದರು, ಹೋದರು. ವಾರ್ಡರರ ಸರತಿಯೂ ಆಯಿತು. ಬಹುಮಾನವೂ ಹಾಗೇ ಮಾಡಿದ. ಜೇಲರನು ವೇಗದಿಂದ ಆಫೀಸಿನಿಂದ ಹೊರಬಿದ್ದು ವಿಕ್ರಮನಿರುವ ಬರಾಕಿನೆದುರು ನಿಂತು—

" ಮಾಸ್ತರ.... ವಿಕ್ರಮ.... ಮಾಸ್ತರ " ಎಂದು ಕೂಗಿ ಕರೆದ. ವಿಕ್ರಮನು ಹುಂಬಣ್ಣನ ತೊಗಲ್ಹಿಡಿದು ಬಂದ, ಮಾಸ್ತರು ' ಏನ್ಸಾಹೇಬ' ಎನ್ನುತ್ತ ಬಂದರು

“ಮಹಾತ್ಮರ ಬಿಡುಗಡೆ ಆಯಿತು !! ಸಂತಸದಿಂದ ಹೇಳಿದ ಜೇಲರ. ಬದಿಯಲ್ಲಿಯೇ ನಿಂತು ಕೇಳಿದ ರಾಜಕೀಯ ಕೈದಿಯೂ ಒತ್ತರ ದಿಂದ ಓಡಿ ತನ್ನ ಬರಾಕಿನವರಿಗೆ ಹೇಳಿದ ‘ಬಿಡುಗಡೆ ಆಯಿತಂತೆ ! ಜೇಲರನೇ ಹೇಳಿದ ‘ಏಳಿತೇಳಿರೀ ಸಾಲುಗೊಳ್ಳಿರೀ ಸಾವಕಾಶ ಜೇಲು ಬಿಟ್ಟು ಹೊರಗೆ ನಡೆಯಿರೀ’ ಎಂದು ಹೇಳಿದ ಹಾಡಿನ ಸ್ವರದಲ್ಲಿ. ‘ಬಿಡುಗಡೆ ಆಯಿತೇ? ಎಲ್ಲೆಲ್ಲಿಯೂ ಬಿಡುಗಡೆಯ ಸುದ್ದಿ! ಮೂಲೆಯಲ್ಲಿ ಕುಳಿತಿತು ಮಹಾತ್ಮನ ಬಿಡುಗಡೆಯ ವಾರ್ತೆ!!

---

## ಹೋಗಿಬಾ ಗೆಳೆಯಾ !

ಎಂಟು ಒಂಭತ್ತನೆಯ ಬರಾಕಿನ ನಡುವಿನ ವಿಶಾಲ ಬೈಲಿನಲ್ಲಿ, ನೃತ್ಯ—ಹಾಸ್ಯ—ಸಂಗೀತ ರಂಜನಾ ಕಾರ್ಯಕ್ರಮಕ್ಕಾಗಿ, ರಂಗಸ್ಥಳದ ಏರ್ಪಾಡು. ಕೈದಿಗಳು ಎಲ್ಲವನ್ನೂ ಮರೆತು, ನೋಟದಲ್ಲಿ ಲೀನ ರಾಗಿ ಕುಳಿತಿದ್ದರು. ಅರ್ಜುನನು ದ್ರುಪದ ರಾಜನ ಸಭೆಯಿಂದ ಎದ್ದ. ಮತ್ಸ್ಯಭೇದಕ್ಕೆ ಸಜ್ಜಾದ. ಗುರುಹಿರಿಯರಿಗೆ ವಂದಿಸಿ, ಸಿಂಜಿನಿಯ ಸ್ವರ ಕೇಳಿಸಿ ಮತ್ಸ್ಯಭೇದ ಮಾಡಿದ. ಪಾಂಚಾಲಿಯು ಇನಿಯನ ಕೊರಳಿಗೆ ಮಾಲೆ ತೊಡಕಿಸಿದಳು. ಎಲ್ಲವನ್ನೂ ನೃತ್ಯರೂಪದಿಂದ ಪ್ರದರ್ಶಿಸಿದರು. ಬಾವಿಯ ದಂಡೆಗೆ ಕೊಡವಿರಿಸಿ ‘ನೀರು ನೀರು’ ಎಂದು ಹಲುಬುವ ಹೊಲತಿಗೆ ಹಾರುವನು ಕಲ್ಲೊಗೆದ. ಹೊಲತಿ ಮೂರ್ಛಿತಳಾಗಿ ಕೆಸರಲ್ಲಿ ಬಿದ್ದಳು. ಹಾರುವನ ಹೆಂಡತಿ ಹೆಂಗರುಳಿಂದ ಓಡಿ, ಹೊಲತಿಯನ್ನು, ತೊಡೆಯಲ್ಲಿರಿಸಿ ಸಂತೈಸಿದಳು. ನಟರ ನಿರ್ಗಮನವಾಯಿತು. ಚಿಕ್ಕ ಪ್ರಹಸನಗಳಾದುವು. ಪದಪದ್ಯ ಕೇಳಿಸಿದರು. ಜೀಜೀ ಲಾವಣಿ ಗೀಗೀ ಪದಗಳು ಎಲ್ಲರ ಹೃದಯವನ್ನು ಸೆಳೆದುವು. ರಾಷ್ಟ್ರಗೀತೆಗಳು ಕುಳಿತವ ರನ್ನು ಚೇತರಿಸತೊಡಗಿದವು. ಗುಜರಾಥಿಯ ಗೆಳೆಯರೀರ್ವರು ರಾಷ್ಟ್ರ ಗೀತೆಯ ಗಾಯನಗೈದು ಕೇಳಿದವರ ಮನವನ್ನೇ ಆಕರ್ಷಿಸಿದರು. ಮಹಾ ರಾಷ್ಟ್ರೀಯ ಬಂಧುಗಳು ವೀರಶ್ರೀಯ ಸಂಚಾರ ಮಾಡಿಸಿ, ರಾಷ್ಟ್ರಗೀತೆ

ಯಿಂದ ರಾಷ್ಟ್ರಪ್ರೇಮವನ್ನೇ ಅಭಿವೃದ್ಧಿಗೊಳಿಸಿದರು. ಕಾರ್ಯಕ್ರಮ-ಗಳನ್ನು ಸುವ್ಯವಸ್ಥಿತವಾಗಿ ಸಾಂಗವಾಗಿರಿಸುವ ಭಾರವು ಮಾಸ್ತರರ ತಲೆಯ ಮೇಲಿದ್ದಿತು. ಯಾರಿಗೂ, ಯಾವ ಭಾಷೆಯವರಿಗೂ ಅನಾದರ ತೋರದೇ ಕ್ರಮಪತ್ರಿಕೆ ಮೊದಲೇ ಸಿದ್ಧಗೊಳಿಸಿದ್ದರು. ಕೊಂಕಣಿ ಭಾಷೆಯೂ ತನ್ನ ಸೇವೆಸಲ್ಲಿಸಿತು. ವಿಕ್ರಮನ ಹೆಸರೆತ್ತಿ ಮಾಸ್ತರರು ಕರೆದರು. ಅವನ ಪರಿಚಯವನ್ನು ಮಿತವಾಗಿ ನೀಡಿದರು. ವಿಕ್ರಮನು ಗಂಟಲು ಸರಿಪಡಿಸಿಕೊಂಡ. ಮಾಲಕಂಸರಾಗದ ಆರೋಹ ಅವರೋಹ ಸ್ವರಗಳನ್ನು ಗುಂಯ್‌ಗುಟ್ಟಿದ, ಕಲೆತ ಸಹಸ್ರಾರು ಕಿವಿಗಳಿಗೂ ಕೇಳು-ವಂತೆ ಹಾಡಿದ.

ನೋಡು ನೋಡೀ ರಾಷ್ಟ್ರಧ್ವಜತೇಜದಾವೇಶ
ನಾಡಗಲಿಗಳು ಕಲೆತು ಕಣ್ಣೀರ ಸುರಿಸಿಹಾ ॥ ಪ ॥

ಭಾವನಾಪರವಶನಾಗಿ ವಿಕ್ರಮನು ಹಾಡಿದ. ಕುಳಿತ ಮರಾಠಿಗರೂ ಅನುಕರಣಕ್ಕೆ ತೊಡಗಿದ್ದರು. ಕನ್ನಡಿಗರು ಅತಿಮೆಲ್ಲನೇ ಗುಣಗುಟ್ಟಿದರು. ವಿಕ್ರಮನ ಮೊದಲನೆಯ ಪದ್ಯಮುಗಿದೊಡನೆ, ಪ್ರಚಂಡ ಜನಸಮೂ-ಹವು ಮೆಚ್ಚಿಕೆ ಕರತಾಡನೆಯಿಂದ ನೀಡಿತು. ಹುಮ್ಮಸಗೊಂಡ ವಿಕ್ರ-ಮನು '**ಬಾ, ಭಾರತೀಯಾ, ಸ್ವಾತಂತ್ರ್ಯ ದೇವಿಯನು ಅರ್ಚಿಸಲು ಬಾ, ಬಾ ಭಾರತೀಯ !** ಆ ದೇವಿ ಅಡಿಯಡಿಯಲ್ಲಿ ಬಿದ್ದಹರು ಆರೆಂದಿ ? ವೈನೆತ್ತರದಿ ಅಭಿಷೇಕದರ್ಚನೆಯ ಗೈದ, ಗತವೀರಬಾಂಧವರು.' ಎಂಬುದನ್ನು ಹೃದಯಂಗಮವಾಗಿ ಚಿತ್ರಿಸಿದ. ವಿಕ್ರಮನ ಪದ್ಯಗಳನ್ನು ಕೇಳುವ ಕುತೂಹಲವು ಅಭಿವೃದ್ಧಿಪಡೆದಿದ್ದಿತು. ಮತ್ತೆ-ಮತ್ತೆ ಹಾಡಲು ವಿನಂತಿಯ ಕೂಗುಗಳು ಎದ್ದವು. ಪ್ರೇಕ್ಷಕರ ವಿನಂತಿಗೆ ಮಾನ್ಯತೆ ನೀಡಿ 'ಏರಿಸಿ ಹಾರಿಸಿ ರಾಷ್ಟ್ರಧ್ವಜವಾ ಬೀರಿರಿ ಶಾಂತಿತ್ಯಾಗದ ಬಲವಾ' ಎಂಬುದನ್ನು ಹಾಡಿ ಶ್ರೋತೃಗಳಿಗೆ ವಂದನೆ ಸಮರ್ಪಿಸಿ ಕುಳಿತ.

ರಾಷ್ಟ್ರಭಾಷೆಯ ಆಧ್ಯಾತ್ಮಿಕ ಪದ್ಯಗಳು ಪ್ರಾರಂಭವಾದವು. ತುಕಾರಾಮ, ನಾಮದೇವ, ಏಕನಾಥರ ಅಭಂಗಗಳ ಅಮೃತವಾಣಿಯ ಪ್ರವಾ

ಹವು ಅಂತರಂಗದಲ್ಲಿ ಪ್ರವಹಿಸಿತು. ಪುರಂದರ, ಕನಕ, ವಿಜಯವಿಠ್ಠಲ, ಜಗನ್ನಾಥ, ಪ್ರಸನ್ನ ವಿಠ್ಠಲರ ಕಸ್ತೂರಿ ಕನ್ನಡ ನುಡಿಯ ಪರಿಮಳದಿಂದ ಮೋಹಿತರಾದರು. ಬಸವೇಶ್ವರರ ವಚನಗಳನ್ನು ಕೇಳಿ ಶ್ರೋತೃಗಳು ತಲೆದೂಗಿ ತಮ್ಮನ್ನು ತಾವು ಮರೆತರು. **'ಈಳೆನಿಂಬೆ ಮಾವು ಮಾದಲಕ್ಕೆ ಹುಳಿ ನೀರನೆರೆದರಾರಯ್ಯಾ! ಕಳವೆ ಶಾಲೆಗೆ ಓಗರದ ಉದಕವನೆರೆದರಾರಯ್ಯಾ'** ಎಂದು ಭೈರವಿರಾಗದಲ್ಲಿ ಮಂಜುಲಕಂಠದಿಂದ ಹಾಡಿದಾಗ, ಕುಳಿತವರಿಗೆ ಪ್ರಜ್ಞೆಯೇ ಇರಲಿಲ್ಲ. ಅಕ್ಕಮಹಾದೇವಿಯ ದಿವ್ಯ ಚರಿತೆ ಕೇಳಿದಾಗಂತೂ ಕಣ್ಣೀರನ್ನೇ ಕರೆದರು.

"ಇದಕ್ಕೆ ಜೇಲೆನ್ನುವರೆ?" ಕುಳಿತವರಿಬ್ಬರು ಮೆಲ್ಲನೇ ಮಾತನಾಡಿಕೊಳ್ಳುತ್ತಿದ್ದರು

"ಊಟಕ್ಕೆ ಜೇಲು!"

"ಗಾಂಧಿಯವರ ಬಿಡುಗಡೆಯ ಪುಣ್ಯದಿಂದ, ಮೃಷ್ಟಾನ್ನ ಭೋಜನ ಊಟ ದೊರೆಯಿತು"

"ಹೌದಪ್ಪ- ಸಿರ, ಪುರಿ-ಅನ್ನ-ಭಜಿ. ತಿಂದೆಷ್ಟು?"

"ಉತ್ತರಾದಿ ಸ್ವಾಮಿಗಳ ಮಠದ ಕಳೆ, ಜೇಲಿಗೆ ಈದಿನ ಬಂದಿದೆ ನೋಡು."

"ಕೇವಲ ಊಟ ದೊರೆತಿಲ್ಲ. ಈ ಸಾಹಿತ್ಯ ಭೋಜನ ದೊರೆಯಬಹುದೇ?"

"ಪುಣ್ಯವಂತರಪ್ಪಾ ನಾವು"

"ನೂರು ಸಲ ನುಡಿ."

ಹಾಸ್ಯಕಾರ್ಯಕ್ರಮ ಮುಕ್ತಾಯದ ನಂತರ ಮಾಸ್ತರರೇ 'ಋಣಿ' ಭಾಷಣಕ್ಕೆ ಎದ್ದರು. ಜೇಲರ ಮೊದಲಾಗಿ, ಇನಾಪುರದ ಜೇಲಾಧಿಕಾರಿ, ಸಿಪಾಯಿಗಳು ಸಹಾಯ ಸಹಕಾರ ನೀಡಿದ್ದಕ್ಕೆ ಕೃತಜ್ಞಪೂರ್ವಕ ವಂದಿಸಿದರು, ಕೈದಿಗಳೊಡನೆ, ಕೈದಿಗಳ ಥಾಲೀವಾಟುಗಳಲ್ಲಿ ಊಟ ಮಾಡಿದ, ಜೇಲರರ ವರ್ಣನೆ, ಕರತಾಡನೆಯಲ್ಲಿ ಸ್ವೀಕೃತವಾಯಿತು.

ತಮ್ಮ ನಿವೃತ್ತಿಯ ಪ್ರತಿಭೆಯಿಂದ, ನೃತ್ಯನೈಪುಣ್ಯತೆಯಿಂದ, ಸಟನಾ ವೈಖರಿಯಿಂದ, ಮಂಜುಲ ಕಂಠದಿಂದ, ಪ್ರೇಕ್ಷಕ ವೃಂದಕ್ಕೆ ಶಾಂತಿ-ಪುಷ್ಟಿ ತುಷ್ಟಿಗಳನ್ನು ದಯಪಾಲಿಸಿದ ನಟ ವರ್ಗಕ್ಕೆ ಚಿರಋಣಿಯಾಗಿರುವೆ, ಎಂದು ನಾರಿದರು ಪ್ರೇಕ್ಷಕರ ನಗೆ ತರಂಗ-ತರಂಗವಾಗಿ ಉದ್ಭವಿಸಿದ ಕಾರಣವೇ ಮಾಸ್ತರರ ಮಾತು! 'ಶಾಂತರಾಗಿ ಕುಳಿತು ಕೇಳಿದುದಕ್ಕೆ ಪ್ರೇಕ್ಷಕರಿಗೂ ಋಣಿಯಾಗಿದ್ದೇವೆ' ಎನ್ನಬೇಕೆ? ಮಾನವ ಕುಲದ ಮೂಲವೇ ಮಂಗ! ಕುಲದ ಹಿರಿಯರನ್ನು ಸ್ಮರಿಸದೇ ಶಾಂತತನದಿಂದ ನಿಮ್ಮ-ನಿಮ್ಮ ಬರಾಕುಗಳಿಗೆ ತೆರಳಬೇಕು

§ § § § §

ಚಕ್ರವರ್ತಿ ಕಾರ್ಯಕ್ರಮಗಳು ಮುಗ್ಗರಿಸುತ್ತ ನಡೆದವು. ಹೊಸ ಕೈದಿಗಳು ತಂಡ ತಂಡವಾಗಿ ಇನಾಕ್ಷರ ತುರುನುಂದಿಗೆ ಬರುತ್ತಲಿದ್ದರು. ಮಾಸ್ತರರ ಕುಲಕೋಟಿಯೇ ಉದ್ಧಾರವಾಗಲೀ ಎಂದು ಆಶೀರ್ವನಿಸಿದ ವನು ವಿಕ್ರಮನೂ ಒಬ್ಬ. ಆಶೀರ್ವಾದಕ್ಕೆ ಮಹತ್ತರ ಕಾರಣವಿದ್ದಿತು. ನಿದ್ರೆಗೆ ಅವಕಾಶವನ್ನಿತ್ತಿದ್ದರು. ಭಜನೆಯಲ್ಲಿ ವ್ಯವಸ್ಥೆ ತಂದಿದ್ದರು. ಎಲ್ಲರೂ ಎದ್ದುನಿಂತು ಹದಿನೈದೇ ನಿಮಿಷಗಳಲ್ಲಿ ಪ್ರಾರ್ಥನೆ ಜರುಗಿಸ ಬೇಕೆಂದು ಮಾಸ್ತರರ ವಿನಂತಿಯೇ ಆಗಿದ್ದಿತು. ಬೆಳಗಿನಲ್ಲಿ, ಸಾಯಂ ಕಾಲ ಸುಶ್ರಾವ್ಯ ಪ್ರಾರ್ಥನೆ! ಮನವೇ ಸಂತಸಗೊಂಡಮೇಲೆ ಮನೋಭಿ ಮಾನ ದೇವತೆಗಳು ಪ್ರಾರ್ಥನೆಯಿಂದ ತೃಪ್ತರಾಗದೇ ಇರುವರೆ? ವಿಕ್ರಮನ ಚಾಪೆಯನ್ನು ಸುತ್ತಿಸಿ ಮೂಲೆಯಲ್ಲಿ ಇರಿಸಿದವರು ಮಾಸ್ತರರೆ. ವಿಕ್ರಮ ಭಾಷಣಕಾರನಾದರೆ ಮಾಸ್ತರರು ಅಧ್ಯಕ್ಷರು. ಮಾಸ್ತರರ ಭಾಷಣವಾದರೆ ವಿಕ್ರಮನು ಸಭಾಪತಿ! ಇತರರಿಗೆ? ಅಧ್ಯಕ್ಷಸ್ಥಾನದ ಬಯಕೆ ತಿನ್ನುವವ ರನ್ನು ಕಂಡು ಹಿಡಿಯಲು ಮಾಸ್ತರರು ಬಲು ಜಾಣಾಕ್ಷರು ಎಲ್ಲರನ್ನು ಗದ್ದುಗೆ ಏರಿಸಿ ಬಯಕೆ ಪೂರ್ಣ ಮಾಡುತ್ತಿದ್ದರು. ವಿಕ್ರಮನು ಪ್ರತಿ ಬರಾಕಿನಲ್ಲಿ **'ಸದ್ಯದ ಪರಿಸ್ಥಿತಿ' 'ಪಾಕಿಸ್ತಾನ' 'ಕನ್ನಡ ಸಂಸ್ಕೃತಿ' 'ಕಾಂಗ್ರೆಸಿನ ಧ್ಯೇಯ' 'ಪೌರ್ವಾತ್ಯ ಭಾರತ' 'ಕನ್ನಡ**

**ಸಾಹಿತ್ಯ**' ತನ್ನ ತಲೆ ಎತ್ತಲಾರದಂತಹ ಲಕ್ಷ್ಯ ವಿಷಯಗಳನ್ನೇ ಭಾಷಣಕ್ಕೆ ಆಯ್ದುಕೊಳ್ಳುತ್ತಿದ್ದ. ಜೋಗನ ಭಾಷಾಂತರದಿಂದ ಜೇಕುತ್ತ ಎಲ್ಲರಿಗೂ ಪ್ರಿಯನಾದೆನೆಂದು ಕೀಜ್ಞಯ' ಎಂದುಕೊಂಡ.

ಮಾಸ್ತರರ ಕಾರ್ಯವು ವೈಶಾಲ್ಯತೆ ಕಂಡಿತು. ಅರ್ಥಾತ್- ಟೊಂಗೆ, ರೆಂಬೆ, ಕೊಂಬೆ, ಕೋಡುಗಳೇ ಮೂಡಿದವು. '**ರಾಷ್ಟ್ರೀಯ ಶಿಕ್ಷಣ ಶಿಬಿರ**' ಪ್ರಾರಂಭಿಸಿದರು. ನಾಯಕ, ದಲನಾಯಕ, ಭಾಗನಾಯಕರುಗಳನ್ನು ತಾವೇ ಆಯ್ಕೆ ಮಾಡಿದರು. ಶಿಕ್ಷಣದ ವಿವಿಧ ವರ್ಗಗಳಾದವು. ಹುಂಬಣ್ಣನೂ ಭಾಗನಾಯಕರಲ್ಲಿ ಒಬ್ಬ. ಶ್ರೀ. ಪತ್ತಾರ. ಶ್ರೀ. ಜೋಗ, ಶ್ರೀ. ಗಣಪತಲಾಲ, ಶ್ರೀ. ಪಾಟೀಲ, ಶ್ರೀ. ಗಜೇಂದ್ರಗಡ ಜೋಶಿ ಪ್ರಭೃತಿಗಳೆಲ್ಲ ಶಿಬಿರದ ಅಧಿಪತ್ಯ ವಹಿಸಿದವರು. ಸಿಬಿರ ಪ್ರವೇಶಕ್ಕೆ ವಿನಂತಿಯ ಅರ್ಜಿಗಳು ನೂರಾರು ಬಂದವು. ಐವತ್ತಕ್ಕೆ ಮೀರಿಸಲಾರೆವೆಂದರು ಮಾಸ್ತರರು. ವಯೋವೃದ್ಧ **ಹೆಗಡೆಯವರ** ಅಧ್ಯಕ್ಷತೆಯಲ್ಲಿ '**ರಾಷ್ಟ್ರೀಯ ಶಿಕ್ಷಣ ಶಿಬಿರ**'ದ ಪ್ರಾರಂಭೋತ್ಸವವಾಯಿತು. ನೂಲುವುದು, ನೇಯುವದು. ತಿನ್ನುವುದು, ಉಣ್ಣುವುದು, ಇತಿಹಾಸ, ಭೂಗೋಲ, ಕೈಗಾರಿಕೆ, ವಕ್ತೃತ್ವ, ಸಂಗೀತ, ಸಾಹಿತ್ಯ, ಹಾಸ್ಯ, ವೀರ, ಕರುಣ, ಭಯಾನಕ- ಆ-ದ-ರೆ- ಶೃಂಗಾರ ಒಂದು ವಿಷಯವನ್ನು ವರ್ಜ್ಯ ಮಾಡಿ, ಎಲ್ಲ ವಿಷಯಗಳಲ್ಲಿ ಶಿಕ್ಷಣ ಕೊಡುವ ಏರ್ಪಾಡು ಮಾಡಲಾಗಿದ್ದಿತು. '**ಪ್ರಪಂಚದ ಮಹಾವಿಭೂತಿಗಳು, ಕಾಂಗ್ರೆಸ್ಸಿನ ಸಮಗ್ರ ಇತಿಹಾಸ**' ಈ ವಿಷಯಗಳಿಗೆ ಮಾಸ್ತರರೇ ಗಮನ ಕೊಡುತ್ತಿದ್ದರು. ವಿಕ್ರಮನು ಭಾಗನಾಯಕನೂ ಅಲ್ಲ- ಹೋಳುನಾಯಕನೂ ಅಲ್ಲ. ಶಿಕ್ಷಕನೂ ಅಲ್ಲಾ, ಶಿಷ್ಯನೂ ಅಲ್ಲ ಪ್ರಭುವೂ ಅಲ್ಲ, ಪ್ರಜೆಯೂ ಅಲ್ಲ ಶಿಕ್ಷಣ ಶಿಬಿರಕ್ಕೆ. ನಡೆಯುವುದೆಲ್ಲ ಅವನಿರುವ ಬರಾಕಿನಲ್ಲಿಯೆ! ಅವನು ಸಾಮಾನ್ಯನಲ್ಲ. ಬಾಗಿಲುಕೋಟೆಯ ಸೇವಾದಲ ಶಿಬಿರದಲ್ಲಿ ನುರಿತಹ. **ಸರದಾರ ಡಾ. ಹರ್ಡೀಕರರ** ಕೈಗುಣಿಯ ಬಡಿತಗಳನ್ನೇ ತಿಂದು, ನೀರ್ಕುಡಿದವನೆಂದಮೇಲೆ ಬೇರೆ ಹೇಳಬೇಕೆ? ಯಾವ ಕಾರಣದಿಂದ ವಿಕ್ರಮನ ಹೆಸರು ಶಿಬಿರದಲ್ಲಿಲ್ಲವೋ ತಿಳಿಯದು.

ನಾಲ್ಕನೆಯ ನಂಬರಿನ ಬರಾಕು '**ರಾಷ್ಟ್ರೀಯ ಶಿಕ್ಷಣ ಶಿಬಿರ**' ಎಂದಿದ್ದ ಫಲಕವನ್ನು ಹಣೆಗೆ ಬಡಿದುಕೊಂಡಿತ್ತು. ಸಿಬಿರವು ಉದಿತೋದಿತವಾಗಿ ನವ್ಯಸ್ಫೂರ್ತಿಯಿಂದ ವೃದ್ಧಿಂಗತವಾಗುತ್ತ ಸಾಗಿದ್ದಿತು. 'ನನಗೆ ಪ್ರವೇಶ ದೊರೆಯಲಿಲ್ಲ. ನಾನು ದುರ್ದೈವಿ. ಇಂತಹ ಪ್ರಸಂಗ ಜೀವಮಾನದಲ್ಲಿಯೇ ದೊರೆಯಲಾರದು' ಎಂದು ಮರುಗುತ್ತಲಿದ್ದರು ಕೈದಿಗಳು 'ಇಪ್ಪತ್ತೊಂದು ದಿನಗಳಾಗಲಿ ಮತ್ತೆ ಪ್ರಾರಂಭಿಸಲು ಮಾಸ್ತರರನ್ನೇ ಬೇಡಿಕೊಳ್ಳೋಣ' ಎಂದು ನುಡಿಯುತ್ತಲಿದ್ದರು. ಶಿಬಿರದ ಶಿಷ್ಯರು ಪಾಠ ಪ್ರವಚನಗಳನ್ನು ಆಸ್ಥೆಯಿಂದ ಕೇಳುತ್ತಲಿದ್ದರು ನಾಯಕರ ಆಜ್ಞಾಪಾಲನೆಯಲ್ಲಿ ನಿಷ್ಠರಾಗಿದ್ದರು. ಸ್ವತಃ ಮಾಸ್ತರರೇ ವಿದ್ಯಾರ್ಥಿಗಳೊಡನೆ ಖೋಖೋ ಹೂತೂತು ಆಟವಾಡುವರು ಅಭ್ಯಾಸಕ್ಕೆ ಬೇಸರಪಟ್ಟವರಿಲ್ಲ, ಸ್ವರಾಜ್ಯದ ಸಿಟ್ಟುಸಿರಿಲ್ಲ. ಮನೆಮಕ್ಕಳಿಗೆ ಗಮನ ಕೊಟ್ಟವರಿಲ್ಲ ಶಿಬಿರವು ಚಂಡುಮಲ್ಲಿಗೆ ಸೊಗ್ಗಿಯಾಗಿ, ಹೂವಾಗಿ ಜ್ಞಾನ ಮಕರಂದವನ್ನು ಹರಡುತ್ತ ಎಡೆಬಿಡದೇ ಸಾಗಿತ್ತು.

ವಿಕ್ರಮನು ಮೊದಲಿನಂತೆ ಆಲಸಿಯಾಗಿರಲಿಲ್ಲ. ಸ್ಫೂರ್ತಿದೇವತೆಯು ಬಡಿದುಕೊಂಡಿದ್ದಳು ಪ್ರಹಸನ ಪ್ರಪಿತಾಮಹನಿಗೆ ಪಂಪಾಸೇಡಿ ಬರೆಯಲು ಲೆಕ್ಕಣಿಕೆಹಿಡಿದಿದ್ದ. ಮಠಮಾನ್ಯಗಳು, ಶ್ರೀಮತ್ಪರಮಹಂಸರು, ತೆರೆಮರೆಯಲ್ಲಿಯ ಪರಮಹಂಸರವಿರಾಟ ಶೃಂಗಾರರೂಪಗಳನ್ನು ಪ್ರಹಸನದಲ್ಲಿ ತುಂಬುತ್ತಿದ್ದ. ಮಾಸ್ತರರು ಶಿಬಿರದ ಅಧಿಪತಿಗಳಾಗಿ ವಿಕ್ರಮನಬಳಿ ಕುಳಿತರು ಶಿಬಿರದ ಕಾರ್ಯಬಾಹುಲ್ಯತೆ ವಿರಾಮನೀಡದ್ದರಿಂದ, ಈರ್ವರೂ ಕುಳಿತು ಬಹುದಿನಗಳಿಂದ ಮಾತನಾಡಿದ್ದಿಲ್ಲ. ಬಂದಕಾರಣ ಕೇಳುವ ಶಿಷ್ಟಾಚಾರಕ್ಕೆ ತಲೆಬಾಗದೇ ತನ್ನ 'ಪ್ರಹಸನ ಪುರಾಣ ಬಿಚ್ಚಿದ. ತಾನು ಸೃಷ್ಟಿಸಿದ ಸಜೀವ ವ್ಯಕ್ತಿಗಳ ವರ್ಣನೆಮಾಡಿದ ಪ್ರತಿಪಾತ್ರಗಳ ರಸಪೋಷಣೆ ತಿಳಿಸಿದ. ಪರಮಹಂಸರೇ ಸಮಾಜಕ್ಕೆ, ರಾಷ್ಟ್ರದ ಏಳ್ಗೆಗೆ, ಮಠದ ಅಪಾರ ಸಂಪತ್ತನ್ನು ಟ್ರಸ್ಟಿಗಳಿಗೆ ಒಪ್ಪಿಸಿ, ಪ್ರಿಯಳೊಡನೆ ಕೂಡಿ, ಸನ್ಯಾಸ ತ್ಯಜಿಸಿ ರಾಷ್ಟ್ರಕಾರ್ಯಕ್ಕೆ ಪ್ರವೃತ್ತರಾದುದನ್ನು ಓದಿಯೇ ತೋರಿದ. ಪರಮಹಂಸರು, ಬಾಲ್ಯದಿಂದ ಯೌವ್ವನಾ

ವಸ್ಥೆಯುವರೆಗೂ ಸ್ಥಿರಸನ್ಯಾಸಿಗಳು. ಪಂಡಿತರು, ನ್ಯಾಯ, ತರ್ಕ, ವೇದಾಂತ ವಾಚಸ್ಪತಿಗಳು. ಚೆಲುವರು. ಭೀಮಬಲಉಳ್ಳವರು, ಅವರ ಮನವು ನಿಸರ್ಗನಿಯಮದಂತೆ ಶೃಂಗಾರಕ್ಕೆ ಸೋತರೆದೋಷವೇ? ಎಂದು ಮಾಸ್ತರರನ್ನೇ ಪ್ರಶ್ನಿಸಿದ. ಮಾಸ್ತರರಿಗೆ ತಲೆಶೂಲಿ ಎದ್ದಿರಬೇಕು ವಿಕ್ರಮನ ಹೇಳಿಕೆಯಿಂದ ವಿಕ್ರಮನಂತಹ ಬರಹಗಾರರ ದಾಳಿ ಎಲ್ಲಿದ್ದರೂ ತಪ್ಪಿದ್ದಲ್ಲ ಮಾಸ್ತರರಿಗೆ ಕೇಳಿದರು. ಹೂ ಎಂದರು. ಶಿಬಿರದ ಬಗ್ಗೆ ವಿಕ್ರಮನೇ ಶ್ಲಾಘನೀಯ ಉಪನ್ಯಾಸ ನೀಡಿದ. ಇದುವೇ ಶ್ರೇಷ್ಠ ಸಂದರ್ಭವೆಂದು ಮಾಸ್ತರರು

"ಒಂದು ವಿನಂತಿ ಇದೆ ವಿಕ್ರಮರಾವ"

"ಮಾಸ್ತರರೇ ಕೊಲ್ಲುವ ಕೆಲಸ ಎಂದಿನಿಂದ ಪ್ರಾರಂಭಿಸಿದಿರಿ ?"

"ಯಾರನ್ನು ಕೊಂದೆ ? "

"ನನ್ನನ್ನೇ ! 'ವಿಕ್ರಮರಾಯರೇ' ಎಂದು ಕೊಲ್ಲಬೇಡಿ ಮಾಸ್ತರರೇ! ನಿಮ್ಮಿಂದರು ಆಡಿದ ಕೂಸು ನಾನು ಹಾಗೆಲ್ಲಾ ಬಹುವಚನ, ಮರ್ಯಾದೆಕೊಟ್ಟರೆ ಕೊಂದಂತೆಯೇ ಸರಿ"

"ಬಿಟ್ಟುಬಿಡು. ಈಗ ನೋಡು, ನೀನು ಒಂದು ಮಾತಿಗೆ ಒಪ್ಪಿಕೊಳ್ಳಬೇಕು."

"ನಿಮ್ಮ ಮಾತನ್ನು ಕನ್ನಡನಾಡೇ ತಲೆಯಲ್ಲಿಟ್ಟು ಪೂಜಿಸುತ್ತಲಿರುವಾಗ, ನಾನು ಮೀರಿದೆನೂ ಎಂಬ ಅಪವಾದವನ್ನು ಎಂದೂ ತೆಗೆದುಕೊಳ್ಳಲಾರೆ"

"ಸರಿ, ನಿಮ್ಮವರಲ್ಲಿ ನಾನೂ ಒಬ್ಬ ಎನಿಸಿ ಮಾತಾಡಬೇಡ. ನಾಳಿನದಿನ, ಅರುಣೋದಯಕ್ಕೆ, ನಿನ್ನಹಸ್ತದಿಂದ, **ರಾಷ್ಟ್ರಧ್ವಜಾರೋಹಣ ಸಮಾರಂಭವನ್ನು, ರಾಷ್ಟ್ರೀಯ ಶಿಕ್ಷಣ ಶಿಬಿರ**ದವರು ಏರ್ಪಡಿಸಬೇಕೆಂದಿದ್ದಾರೆ."

"ನನ್ನಿಂದ ! ! "

"ಅಹುದು ನಿನ್ನಿಂದಲೇ ರಾಷ್ಟ್ರಧ್ವಜಾರೋಹಣ, ತದನಂತರ, ಶಿಬಿರದ ವಿದ್ಯಾರ್ಥಿಗಳ ಪರೀಕ್ಷೆ, ಅದೂ ನಿನ್ನಿಂದಲೇ, "

"**ಒಪ್ಪಿಕೊಳ್ಳಲೇಬೇಕೆ ?**"

“ ಒಪ್ಪಿಗೆ ದೊರೆತಿದೆ ಎಂದು ಶಿಬಿರದಲ್ಲಿ ಈಮೊದಲೇ ತಿಳಿಸಿರುವೆ”
“ ಅಪ್ಪಣೆ ಎಂದು ವಂದಿಸುವೆ ಮಾಸ್ತರ ”

† † † † †

ವಿಕ್ರಮನ ಹಸ್ತದಿಂದ ಧ್ವಜಾರೋಹಣವಾಯಿತು. ಸಹಸ್ರಾರು ತರುಣರು ಮಿಲಿತರಾಗಿದ್ದರು. ಶಿಬಿರದವರು, ನಾಯಕನ ಆಜ್ಞೆಯಂತೆ ಧ್ವಜವನ್ನು ದಿಟ್ಟಿಸುತ್ತಲಿದ್ದರು. ರಾಷ್ಟ್ರಧ್ವಜವು ಕೈದಿಗಳ ಹೃದಯ ಗಹ್ವರ ಹೊಕ್ಕು, ಮಹತಿಯನ್ನು ಹೇಳಿಕೊಳ್ಳುತ್ತಲಿದ್ದಿತು. ವಿಕ್ರಮನು ನಾಯಕನ ವಿನಂತಿಯಂತೆ ಧ್ವಜಸ್ತಂಭದ ಬುಡದಲ್ಲಿಯೇ ನಿಂತಿದ್ದ. ‘ **ಝುಂಡಾಊಂಚಾ ರಹೇಹಮಾರಾ** ’ ಎಲ್ಲರ ಕೊರಳ ಕೊಳಲಿನಲ್ಲಿ ಇಂಪಾಗಿ ಕೇಳುತ್ತಿದ್ದಿತು. ಗಾಳಿಯ ವೇಗಕ್ಕೆ ಹಾರುವ ಧ್ವಜದಲ್ಲಿ ಅಲೆಗಳೇಳುತ್ತಲಿದ್ದವು. ಅಲೆಗಳು ಉದಯಿಸುತ್ತದ್ದಂತೆ, ಅಡಿಯಲ್ಲಿ ವಂದನೆ ಸಮರ್ಪಿಸಲು ನಿಂತವರ ಹೃದಯಗಳೂ ಸಂತಸದ, ಭಕ್ತಿಯ, ಜಯಶ್ರೀ ಸಂಚಾರಕ ಅಲೆಗಳು ಉದಯಿಸುತ್ತಲಿದ್ದವು ವಿಕ್ರಮನು ತನ್ನ ರಾಷ್ಟ್ರದ ಧ್ವಜವನ್ನೇ ಕಣ್ಣಲ್ಲಿತುಂಬಿಕೊಳ್ಳುತ್ತಿದ್ದ. ಮಾಸ್ತರರು ಎಲ್ಲರಿಗೂ ಹಿಂದೆ ನಿಂತಿದ್ದರು. ಜೇಲರನು ಬಂದು ಮಾಸ್ತರರನ್ನು ಮಾತನಾಡಿಸಿದ. ಪದ್ಯ ಪಠನ ಮುಗಿದಾಗ ‘ ಏನು? ’ ಎಂದರು. ಕಿವಿಯಲ್ಲಿ ಹೇಳಿದರು. ಜೇಲರನು ಧ್ವಜ ವಂದನೆಗೆ ನಿಲ್ಲಲಿಲ್ಲ ಧ್ವಜವಂದನೆಯ ಕಾರ್ಯಕ್ರಮವು ಸೇವಾದಲದ ಪದ್ಧತಿಯಂತೆ ಮುಕ್ತಾಯವಾಯಿತು. ಎಲ್ಲ ಕೈದಿಗಳ ಕಿವಿಯಲ್ಲಿ ಏನನ್ನೋ ಹೇಳಿದರು. ಬರಾಕಿಗೆ ಓಡಿ ಹೋಗಿ ನೂಲಿನ ಮಾಲೆಯೊಡನೆ ಬರುತ್ತಲಿದ್ದರು. ಮಾಸ್ತರರು ನಿಂತಲ್ಲಿಂದಲೇ ಯಾರೂ ಸ್ಥಳ ಬಿಟ್ಟು ಕದಲಕೂಡದಾಗಿ ವಿನಂತಿಯನ್ನು ಮುಂದಿರಿಸಿದರು. ಕಾರಣ ಯಾರಿಗೂ ತಿಳಿಯಲಿಲ್ಲ. ಕೈದಿಗಳು, ಶಿಬಿರದವರು ಅಧಿಪತಿಗಳ ಆಜ್ಞೆ ಎಂದು ನಿಂತರು ಮಾಸ್ತರರು ಧ್ವಜದಡಿಗೆ ಬಂದು ಕೈಮುಗಿದು ನಿಂತರು. ‘ ಬಂಧುಗಳೇ ’ ಎಂದು ಗದ್ದರಿಸಿದರು. ಪಿಸು ಮಾತುಗಳೂ ಇಲ್ಲವಾದವು. ‘ ನಾವೆಲ್ಲರೂ ಕಲೆತು, ಇದೇ ಧ್ವಜದಡಿಯಲ್ಲಿ, ನಮ್ಮ ಸ್ನೇಹಿತರೊಬ್ಬರನ್ನು ಬೀಳ್ಕೊಡಬೇಕಾಗಿದೆ ಅವರನ್ನು ಈ ಕ್ಷಣವೇ ಬಿಡುಗಡೆ ಮಾಡ

ತಕ್ಕವರಿರುವೆವೆಂದು ಜೇಲರ ಇವರಿಗೆ ತಿಳಿಸಿದರು. ಕಾರಣ ತಾವೆಲ್ಲ ನಿಂತಲ್ಲಿಯೇ ಕುಳಿತು, ಮುಂದಿನ ಕಾರ್ಯಕ್ರಮದಲ್ಲಿ ಭಾಗವಹಿಸಬೇಕಾಗಿ ಪ್ರಾರ್ಥನೆ' ಎಂದರು. ಕೈದಿಗಳು 'ಯಾರ ಬಿಡುಗಡೆ? ತಿಳಿಸಲೇ ಇಲ್ಲವಲ್ಲ!' ಎಂಬ ಚಿಕಿತ್ಸಕ ವೃತ್ತಿಯವರಾಗುತ್ತ ಕುಳಿತರು. ಧ್ವಜದ ಬದಿಯಲ್ಲಿಯೇ ನಿಂತ ವಿಕ್ರಮನೂ 'ಯಾರ ಬಿಡುಗಡೆ?' ಎಂದು ಯೋಚಿಸುತ್ತಲೇ ಇದ್ದ! ಜೋಗರು ಮುಂಬಂದು, ಸಭಿಕರಿಗೆ ಕರ ಜೋಡಿಸಿ ಹೇಳಿದರು. "ಮಾನ್ಯರೇ ನಮ್ಮೆಲ್ಲರ ಅಚ್ಚುಮೆಚ್ಚಿನ ಗೆಳೆಯರು, ಈ ಜೇಲಿನಿಂದ ಬಿಡುಗಡೆಯಾಗಿ ವಿಶಾಲ ಜೇಲಿಗೆ ಹೋಗತಕ್ಕವರಿರುವರು. ವಿಕ್ರಮರಾಯರನ್ನು ಪರಿಚಯ ಮಾಡಿಕೊಳ್ಳದವರು ಜೇಲಿನಲ್ಲಿ ಒಬ್ಬರೂ ಇಲ್ಲ. ತಮ್ಮ ವಾಗ್ವೈಖರಿಯಿಂದ, ಮಂಜುಲ ಕಂಠದಿಂದ, ಪಾಂಡಿತ್ಯ ಪ್ರತಿಭೆಯಿಂದ, ಸದಯಾಂತಃಕರಣದಿಂದ, ನಮ್ಮೆಲ್ಲರ ಮನಸ್ಸನ್ನು ಆಕರ್ಷಿಸಿಕೊಂಡಿದ್ದಾರೆ. ಅವರನ್ನು ಆರು ತಿಂಗಳುಗಳಿಂದ ನಾನು ಬಲ್ಲೆ. ಅವರ ಇರುವಿಕೆಯಿಂದ ಜೇಲು ಜೀವನವೇ ಹಗುರಾಗಿತ್ತು. ಅವರ ಶಾಂತಗುಣಗಳು ನಮ್ಮೆಲ್ಲರಿಗೂ ಮಾರ್ಗದರ್ಶನ ಮಾಡುತ್ತಿದ್ದವು. ನಮ್ಮ ಪರಮ ಸ್ನೇಹಿತರು ಬಿಡುಗಡೆ ಹೊಂದುವುದನ್ನು ಕೇಳಿ, ಸುಖ ದುಃಖಗಳು ಏಕಕಾಲಕ್ಕೆ ಆಗುತ್ತಲಿವೆ. ಪರಮೇಶ್ವರನು ಅವರಿಗೆ ಆಯುರಾರೋಗ್ಯಗಳನ್ನು ದಯಪಾಲಿಸಿ, ರಾಷ್ಟ್ರ-ಕಾರ್ಯಕ್ಕೆ ಉತ್ಸಾಹ ನೀಡಲಿ ಎಂದು ಪ್ರಾರ್ಥಿಸುತ್ತೇನೆ" ಎಂದು ಹೇಳಿ ಕುಳಿತನು ಜೋಗ. ವಿಕ್ರಮನು ಕುಳಿತುಕೊಳ್ಳಲು ಕಂಬಳಿಗಳ ಗಾದಿಯೇ ಸಿದ್ಧವಾಗಿದ್ದಿತು. ವಿಕ್ರಮನಿಗೆ ಇದಾವುದೂ ಬೇಡವಾಗಿದ್ದಿತೇನೋ. ಅವನ ಮನವೆಲ್ಲವೂ ಓಡಿ ಸ್ಟೇಶನ್ನಿಗೆ ಹೊರಟಿತ್ತು. ಘೋಂಡದಲ್ಲಿ ತಿರುಗುತ್ತಿತ್ತು. ಮತ್ತೆ ಮಾತನಾಡಿದವರ ಮಾತನ್ನು ಕೇಳುತ್ತಿತ್ತು. 'ಅಂತೂ ಬಿಡುಗಡೆಯ ಭಾಗ್ಯ ಕಂಡೆನಪ್ಪಾ!' ಎಂಬ ಅಂತರಂಗ ಉದ್ಗಾರತೆಗೆದ ಗಣಪತಲಾಲನು 'ಏಂಥೆ. ಕೇಂಥ-ಭೇಭೇಭೇ' ಎನ್ನುತ್ತ ವಿಕ್ರಮನ ಗುಣಗಾನ ಗೈದನು. ನಾಮುಸಾಹೇಬರೂ ಹೊಗಳಿದರು. ಹುಂಬಣ್ಣನು ಒಂದೇ ವಾಕ್ಯದಲ್ಲಿ ತನ್ನ ಭಾಷಣ ಮುಗಿಸಿದ.

ಅನೇಕರು ತಮ್ಮ ಕೃತಜ್ಞತೆಗಳನ್ನು ವಿಕ್ರಮನಿಗೆ ಸಲ್ಲಿಸಿದರು. ವಿಕ್ರಮನ ಸ್ವಭಾವ, ವಿಕ್ರಮನ ಸಂಗೀತ, ವಿಕ್ರಮನ ಮಾತುಗಾರಿಕೆ, ಸಾಹಿತ್ಯ, ಕಥನ ಶೈಲಿ, ಕೊನೆಗೆ ಎಂದೂ ಮರೆಯದ ಸ್ನೇಹಿತ ಎಂಬುದನ್ನು ಹೊಗಳಿಯೇ ಹೇಳಿದರು ಮಾಸ್ತರರು ಬಿಡುಗಡೆ ಹೊಂದಿದ ರಾಷ್ಟ್ರಭಕ್ತನು ಮಾಡಬೇಕಾದ ಮಹತ್ವದ ಕೆಲಸಗಳು ಯಾವವು? ಎಷ್ಟು ಬಗೆಯಾಗಿವೆ? ಬಿಡುಗಡೆಯಾದವನ ಮೇಲೆ ಎಂತಹ ಜವಾಬ್ದಾರಿ ಇದೆ! ಎಂಬುದನ್ನು ಹೇಳಿ, ವಿಕ್ರಮರು ಕಾಂಗ್ರೆಸ್ಸಿನ ಏಕನಿಷ್ಠ ಭಕ್ತರು, ಕರ್ತವ್ಯದ ಪರಿಯನ್ನು ಬಲ್ಲವರು. ಭಾವೀ ಹೋರಾಟವು ಅವರಿಂದ ಸ್ಫೂರ್ತಿ ಪಡೆಯುವುದೆಂಬುದನ್ನು ನಂಬಿರುವೆ ' ಎಂದು ದೇವನಿಗೆ ಬೇಡಿಕೊಂಡು, ಶಿಬಿರದ ಪತಿಯಿಂದ ನೂಲಿನ ಮಾಲೆ ಕೊರಳಿಗೆ ಹಾಕಿದರು ಜೋಗನು ತಾನೇ ನೂತ ನೂಲಿನ ಮಾಲೆಯನ್ನು ಹಾಕಿ ' ಜೋಗಿ ಜಾ ಗೆಳೆಯಾ ' ಎಂದು ಆಲಿಂಗಿಸಿದ. ಹುಂಬಣ್ಣನ ಮಾಲೆ ಕೊರಳಿಗೆ ಬಿದ್ದು ತನ್ನದು ತನ್ನದೆಂದು ಕೈದಿಗಳೆಲ್ಲ ಮಾಲೆ ಹಾಕಿ ವಿಕ್ರಮನನ್ನು ಆಲಿಂಗಿಸಿ ವಂದನೆ ನೀಡಿದರು ಕಾರ್‍ಖಾನೆಯ ಗೆಳೆಯರು ... ಗಿನ ಚೂರಿನಿಂದ ಚೆಲುವಾಗಿ ನಿರ್ಮಿಸಿದ ಪದಕಹಾರವನ್ನು ಕೊರಳಿಗೆ ತೊಡಿಸಿದರು. ಎಲ್ಲ ಬರಾಕಿನ ಗೆಳೆಯರು ತಮ್ಮ ಕಿಂಚಿತ್ ಕಾಣಿಕೆ ಎನ್ನುತ್ತ ನೂಲಿನ ಮಾಲೆಯಿಂದ ಆಲಂಕರಿಸಿದರು. ವಿಕ್ರಮನು ಭಕ್ತಿಯಿಂದ ಸ್ವೀಕರಿಸುತ್ತಿದ್ದ. ಧ್ವಜವು ಪಟಪಟನೆ ಹಾರುತ್ತಲಿತ್ತು. ಗೆಳೆಯರೆಲ್ಲ ವಿಕ್ರಮನ ಕೊರಳು ಭಾರವಾಗುವಂತೆ ಮಾಲೆಯನ್ನು ಅರ್ಪಿಸಿದರು. ಸಂಕೇಶ್ವರ ಹೂವಿನ ಮಾಲೆಗಳೂ ಕೊರಳಲ್ಲಿದ್ದವು. ಹೂವಿನ ಗೊಂಚಲುಗಳು ಕೈಗಳನ್ನು ಭಾರವಾಗಿಸಿದ್ದವು. ಮಾಲೆಗಳನ್ನು ತೆಗೆದು ಬದಿಯಲ್ಲಿದ್ದ ... ಗೆಳೆಯನ ಕೈಗೆ ಕೊಡುತ್ತ “ಗುರುಹಿರಿಯರೇ, ಮತ್ತು ... ” ಎಂದು ಕೈಮುಗಿದು ಮಾತನಾಡಿದ. 'ಬಂಧುಗಳೇ- ... ಅಗಲಿ ಹೊರದ ನನ್ನೂರಿಗೆ ಹೊರಡಬೇಕಾದ ದುರ್ದೈವ ... ಒದಗಿದೆ **' ವಿಶ್ವಬಾಂಧವ ಸಮ್ಮೇಲನ '** ವನ್ನು ... ಗಾಂಧಿ ಮಹಾತ್ಮರ ಜನ್ಮರ್ವಾರ್ಷಿಕಲೇಯ ದಿನ, ಈ ಚಿರಸ್ಮರಣೀಯ ಸಂಮೇಲನದ ಉದ್ಘಾಟನೆ ಮಾಡಿದ ಅಳರಸರು

ಕುಟಿಲತೆಯಿಂದ ಸಂಮ್ಮೇಲನಕ್ಕೆ ಪ್ರತಿನಿಧಿಗಳನ್ನು ಆಯ್ಕೆ ಮಾಡಿ ಕಳುಹಿದರು ಇನ್ನೂ ಕಳುಹುತ್ತಲಿರುವರು. ಸರಕಾರಕ್ಕೆ ಎಷ್ಟು ಸಲ, ಆದೇಕೆ; ಅನಂತಾನಂತ ಧನ್ಯವಾದಗಳನ್ನು ಸಮರ್ಪಿಸಿದರೂ ಅಲ್ಪವೆಂದೇ ನನ್ನ ಅಭಿಮತವಿದೆ. ವಿಶ್ವಬಾಂಧವ ಸಮ್ಮೇಲನಕ್ಕೆ ಪ್ರತಿನಿಧಿಗಳನ್ನು ಆಯ್ಕೆ ಮಾಡುವಾಗ ಅವರಿಗೆ ಎಷ್ಟು ತೊಂದರೆ ಆಗಿದ್ದಿತು? ಸಮ್ಮೇಲನವು ಯಶಸ್ವೀ ರೀತಿಯಿಂದ ಸಾಂಗವಾಗುತ್ತಿರುವುದು, ಸರಕಾರದ ಚಾಣಾಕ್ಷತನದಿಂದ. ಪಂಡಿತರನ್ನು ವೆಚ್ಚಕೊಟ್ಟು ಕರಿಸಿದ್ದಾರೆ. ನಾಟ್ಯಗಳಿದ್ದಾರೆ. ಸಕಲ ಭಾಷಾ ವಿಶಾರದರು, ಸಾಹಿತ್ಯ ಸಂಗೀತಕಲಕೋವಿದರು, ಕವಿಗಳು, ಕಾದಂಬರಿಕಾರರು, ನಾಟಕಕಾರರು, ಪುರಾಣಿಕರು, ಜೋಯಿಸರು, ರಾಷ್ಟ್ರಪ್ರೇಮಿಗಳು, ಸಂಸಾರಿಗಳು, ಸನ್ಯಾಸಿಗಳು, ಕಲಾಕುಶಲರು, ಚಿತ್ರಕಾರರು, ಇಂತಹ ಮಹಾನ್-ಮಹಾನ್ ಮೇಧಾವಿಗಳನ್ನೆಲ್ಲ ಈ ವಿಶ್ವಭಾಂಧವ ಸಮ್ಮೇಲನವು ಆಮಂತ್ರಿಸಿದೆ. ಸಕಲ ಜಾತಿ ಬಾಂಧವರನ್ನೆಲ್ಲ ಆಕರ್ಷಿಸಿದೆ. ಸಮ್ಮೇಲನವು ನಿರ್ಗಳವಾಗಿ ನಾಗುತ್ತಲಿರುವಾಗ, ಇನ್ನೂ ಸಮಾರೋಪವಾಗುವ ಮೊದಲೇ ನನ್ನನ್ನು ದೂರ ಮಾಡಿತು. ಸಮ್ಮೇಲನದ ಸಭೆ, ಚರ್ಚಿತ ವಿಷಯಗಳನ್ನು, ಪ್ರತಿನಿಧಿಗಳನ್ನು ಜನ್ಮಾಂತರಕ್ಕೂ ಮರೆಯಲಾರೆ. ಈ ಸಮ್ಮೇಲನವು ಜೇಲಿನಲ್ಲಿ ನೆರವೇರಿದೆ ಎಂಬ ಭಾವನೆ ನನಗಿಲ್ಲ. ಪ್ರಕೃತಿದೇವಿಯ ಆಶ್ರಯದಲ್ಲಿ ಸಭೆಗಳು ನಡೆದಿದ್ದವು. ಶತಕೋಟಿ ಜನ್ಮದ ಪುಣ್ಯದ ಅಂಶವಿದ್ದವರಿಗಲ್ಲದೇ ಇನ್ನಾರಿಗೆ ಪ್ರತಿನಿಧಿತ್ವಪದ ದೊರೆಯುವುದು. ತುರಂಗಗಳೆಂದರೆ, ವಿಶ್ವವಿದ್ಯಾಲಗಳೆಂದು ಸಾರಿ ಹೇಳುವೆ ನಾನು. ಜ್ಞಾನಸತ್ರಗಳೆಂದು ಹೆಸರೇ ಜೇಲಿಗೆ ಇಡಬೇಕೆಂದು ನನ್ನ ನಮ್ರ ಸೂಚನೆ ಇದೆ. ನನ್ನ ಮಾತಿಗೆ ತಾವೆಲ್ಲ ಬೆಂಬಲಕೊಡುವಿರೆಂದೂ ನಂಬಿರುವೆ. ಗೆಳೆಯರೇ— ಇನ್ನೂ ಸಮ್ಮೆಲನವು ನಡೆದಿರುವಾಗ ಬಿಡುಗಡೆ ಬಂದುದಕ್ಕೆ ಅತೀವ [illegible]ಸಿದೆ. ಗೆಳೆಯರೇ ನಾವೆಲ್ಲರೂ ಹೋರಾಟದ ಭಕ್ತರು. ಈ ಸಮ್ಮೆಲನದ ಪ್ರತಿನಿಧಿಯಾಗಿ ಪುನಃ ನಾನು ಬಂದೇ ಬರುವೆನೆಂಬ ಆತ್ಮವಿಶ್ವಾಸ ನನಗಿದೆ. ಸ್ವರಾಜ್ಯದೊರೆಯುವುದಕ್ಕೆ ಇದೇ ಕೊನೆಯ ಹೋರಾಟವಾ

ದೂ, ರಕ್ಷಣೆಗಾಗಿ ನಾವೆಲ್ಲ ಹೋರಾಟ ಹೂಡಲೇಬೇಕಾಗುವುದು
ಪರಕಿದ್ದನ್ನು ಕಾಯ್ದುಕೊಳ್ಳುವುದು ಅಂತ್ಯತ ಕಠಿಣವಿದೆ. ಒಳಹೊರ
ಂಧವರೊಡನೆ ಯುದ್ಧ ಹೂಡುವ ಪ್ರಸಂಗಗಳು, ಸ್ವಾತಂತ್ರ ಪ್ರಾಪ್ತಿಯ
ತರವೂ ಒದಗಬಹುದು ಅಧಿಕಾರಾರೂಢಪಕ್ಷವು ಸ್ವಾರ್ಥಕ್ಕೆ ಬಲಿಬಿದ್ದು
ನಬಂದಂತೆ ಆಡಳಿತೆ ಸಾಗಿಸಬಹುದು ಅಂತಹ ಸಂದರ್ಭಗಳಲ್ಲಿ,
ರ್ದಾಕ್ಷಿಣ್ಯವಾಗಿ ಖಂಡಿಸುವ ಪ್ರಸಂಗಗಳು ಬರಬಹುದು. ಆಗ ಅಧಿ-
ರದಲ್ಲಿರುವವರು, ಪುನಃ ನಮ್ಮನ್ನು ತುರಂಗಗಳಿಗೆ ಅಟ್ಟಬಹುದು.
ಹಿತರೇ; ಪ್ರಪಂಚವು ವಾಯುವೇಗದಿಂದ ಪ್ರಗತಿಯಾಗುತ್ತಲಿದೆ.
ನನ್ನು ಲಕ್ಷಿಸಿ ನಾವು ಆಡಿ ಇಡಬೇಕು. ಕೇವಲ ಶಾಂತಿ ಅಹಿಂಸೆಗಳೇ
ರತದ ಮಂತ್ರಗಳು ಸ್ವಾತಂತ್ರಪ್ರಾಪ್ತಿಯ ನಂತರವೂ ನಮ್ಮ ಧ್ಯೇಯ-
ದರೆ, ಸಂಪಾದಿಸಿದ ಸ್ವಾತಂತ್ರ್ಯವನ್ನು ಕಾಲುಶತಮಾನ ಸಹಿತ, ಸಂರ
ಕೊಳ್ಳಲಾರೆವು. ಇಂದು ರಾಷ್ಟ್ರೀಯ ಶಿಕ್ಷಣ ಶಿಬಿರದಲ್ಲಿ, ಪ್ರಥಮ
ಗತಿಯ ಕವಾಯತ ಕಲಿಯುತ್ತಿರುವಿರಿ. ಲಾಠಿಗಳನ್ನು ಭರದಿಂದ ತಿರು
ತ್ತಿರುವಿರಿ. ಬಲಕ್ಕೆ, ಎಡಕ್ಕೆ ನಾಯಕನ ಆಜ್ಞೆಯಂತೆ ತಿರುಗುವಿರಿ.
ಲಾಗಿ ನಿಲ್ಲುವುದು ನಿಮಗೆ ಗೊತ್ತಿದೆ. ಆ-ದ-ರೆ— ನಿಮ್ಮ ಕವಾ-
ತ ಜ್ಞಾನವು ಭಾರತ ಸಂರಕ್ಷಣೆ ಮಾಡಿಸಲಾರದು ರಾಷ್ಟ್ರ ಸಂರಕ್ಷ-
ಯು ವಿಜ್ಞಾನದಿಂದ. ನಮ್ಮ ರಾಷ್ಟ್ರದಲ್ಲಿ ವಿಜ್ಞಾನಿಗಳನ್ನು ಸಿದ್ಧಗೊಳಿ
ವ ವಿಶ್ವವಿದ್ಯಾಲಯಗಳು ಊರೂರಿಗೆ ಆಗಬೇಕು. ಸೈನಿಕ ಶಿಕ್ಷಣ
ಂದ್ರಗಳು ಹಳ್ಳಿ-ಪಳ್ಳಿಗಳಲ್ಲಿ ತಲೆ ಎತ್ತಬೇಕು ಪ್ರತಿಯೊಬ್ಬ ಭಾರತೀ
ನು ಯೋಧನಾಗಲೇಬೇಕು ರಾಷ್ಟ್ರದ ಕರೆ ಬಂದಾಗ, ರಾಷ್ಟ್ರದೇವಿಯ
ವೆಗೆ ಸಿದ್ಧರಿರುವ ಬಲಿಷ್ಠ ಭಾರತೀಯರು ಅತ್ಯವಶ್ಯವಾಗಿ ನಮಗೆ
ಕು. ವೈಮಾನಿಕರು, ಹಡುಗುಪಡೆಯವರು, ಕಾಲ್ದಳದವರು,
ಕಾಳಗದಮಲ್ಲರು, ಶುಶ್ರೂಷಾಪಥಕದವರು, ಭಾರತ ರಾಷ್ಟ್ರಕ್ಕೆಬೇಕು.
ತಹ ಶಿಕ್ಷಣ ಶಾಲೆಗಳು ಅಸಂಖ್ಯಾತವಾಗಿ ಉದಯವಾಗಲಿ ಎಂದ
ರೈಸೋಣ.

**ಭಾರತೀಯ ಬಾಂಧವರೆ,**

ನೀವೆಲ್ಲ ನಿಮ್ಮ ತಮ್ಮನೆಂದು ತೋರಿದ ಪ್ರೀತ್ಯಾದರಗಳನ್ನು, ಮರೆಯಬಹುದೇ ನಾನು. ತಂದೆ-ತಾಯಿಗಳಂತೆ, ಅಣ್ಣ ತಮ್ಮಂದಿರಂತೆ ಮಮತೆಯಿಂದ ಸಲುಹಿದ್ದೀರಿ. ನಿಮ್ಮ ಸಹವಾಸವೆಂದರೆ ವಿಶ್ವವಿದ್ಯಾಲಯದಲ್ಲಿ ದೊರೆಯುವ ಶಿಕ್ಷಣಕ್ಕೂ ಮಿಗಿಲಾದುದು. ಎಲ್ಲಿದ್ದರೂ ನಾನು ನಿಮ್ಮ ತಮ್ಮನು. ನಿಮ್ಮ ಹೃದಯದಲ್ಲಿ ಸ್ಥಾನ ಕೊಟ್ಟಿದ್ದೀರಿ. ನಿಮ್ಮೆಲ್ಲರ ಉಪಕಾರವನ್ನು ಎಂದೂ ಮರೆಯಲಾರೆ' ಎಂದು ಕೈಮುಗಿದ. ಸರಲವಾಗಿ ವಿಚಾರಗಳು ಬಾರದ್ದರಿಂದ ಭಾಷಣದ ವಿಷಯ ಮುಕ್ತಾಯಿತು. ಮನೆಯೇ ಮನಸ್ಸನ್ನು ಎಳೆದುದು ಕಾರಣ. ಜೇಲರನು ಕರೆದೊಯ್ಯಲು ಸಿದ್ಧನಾಗಿಯೇ ನಿಂತಿದ್ದ. ಕೈದಿಗಳು ಬೆಂಬತ್ತಿದರು. ರಾಷ್ಟ್ರದೇವತೆಯ ಜಯಘೋಷವು ದೇದೀಪ್ಯಮಾನವಾಗಿ ಹೊರಹೊಮ್ಮುತ್ತಿದ್ದಿತು. ಕೈದಿಗಳು ವಿಕ್ರಮನ ಕೈಕುಲುಕಿ ' **ಹೋಗಿ ಬಾ ಗೆಳೆಯಾ** ' ಎಂದು ಆವರಿಸಿ ಆಲಂಗಿಸುತ್ತಿದ್ದರು. ಪಾಪ ಹಾಕದೇ ಸುರಿತವರ ಹೂಮಾಲೆಗಳು ಕೊರಳಲ್ಲಿ ಕುಳಿತವು. ವಿಕ್ರಮನು ಸಹಸ್ರಾರು ಗೆಳೆಯರಿಗೆ ಸಾಮೂಹಿಕ ವಂದನೆ ತಲ್ಪಿಸಿದ. ಗೆಳೆಯರು ಆಫೀಸದ ವರೆಗೂ ವಿಕ್ರಮನನ್ನು ಕಳುಹಿ ಹಿಂತಿರುಗಿದರು. ವಿಕ್ರಮನು ಅಕ್ರಾಸೆ ಬೇಚಾಳೀನ ನಂಬರಿನ ಬಟ್ಟೆಗಳನ್ನು ಕಳೆದೊಗೆದ. ತನ್ನ ಬಟ್ಟೆಗಳನ್ನು ಧರಿಸಿ ತನ್ನನ್ನು ತಾನೇ ನೋಡಿಕೊಂಡ. ಹಾಸಿಗೆಯ ಸುರುಳಿಯನ್ನು ಬಗಲಲ್ಲಿರಿಸಿ ನಿಂತ. ಬಿಡುಗಡೆಯ ಕಾಗದದೊರೆಯಿತು. ದಾರಿಯ ವೆಚ್ಚಕ್ಕೆಂದು ಎಂಟಾಣೆಗಳೂ ಜೇಬಿನಲ್ಲಿ ಬಿದ್ದವು. ಜೇಲರನೂ ವಂದನೆ ನೀಡಿದ. ವಿಕ್ರಮನಿಗೆ ಧೈರ್ಯವೇ ಇರಲಿಲ್ಲ. ಪುನಃ ಒಳಗೆಲ್ಲಿ ಕೂಡ್ರಿಸುವರೋ ಎಂದು ಸಂಶಯ ಅವನಿಗೆ. ಬೇಗನೇ ಹೊರಕ್ಕೆ ಕಳುಹಿಸಲೀ ಎಂದು ಬಯಸುತ್ತಿದ್ದ. ಜಯಕಾರ, ಗೆಳೆಯರ ಮಾತುಗಳು ಬೇಡವಾಗಿದ್ದವು. ಒಳಗಿನ ಗೆಳೆಯರು, ಆಕಾಶವೇ ಬಿರಿಯುವಂತೆ ಜಯಘೋಷಗೈದರು. ವಿಕ್ರಮನು ಹೊರಬಿದ್ದ. ತಿರುಗಿ-ತಿರುಗಿ **'ಇಸಾಪುರ ಮಧ್ಯವರ್ತಿ ತುರಂಗ'ನ್ನು** ನೋಡಿ ಅತ್ಯವಸರವಾಗಿ ನಡೆದ. ಓ-ಡಿ-ದ !!

— **ಜಯಹಿಂದ** —